### ಸ್ಪರ್ಧಾತ್ಮಕ ಪರೀಕ್ಷಾರ್ಥಿಗಳಿಗೆ ಉಪಯುಕ್ತ ಮಾರ್ಗದರ್ಶಿ

# ಕನ್ನಡಕ್ಕೊಂದು ಕೈಪಿಡಿ

✶ ಕನ್ನಡವನ್ನು ತಪ್ಪಿಲ್ಲದೆ ಓದಿ ಬರೆಯುವುದು ಹೇಗೆ? ✶ ಅಕ್ಷರ ✶ ಪದ–ಪ್ರತ್ಯಯ–ಸಂಧಿ
✶ ನಾಮಪದ ✶ ಸಮಾಸ ✶ ಕ್ರಿಯಾಪದ ✶ ಅವ್ಯಯ ✶ ವಾಕ್ಯ ✶ ಛಂದಸ್ಸು
✶ ಕನ್ನಡ ಪದಸಂಪತ್ತು ✶ ಸಮಾನಾರ್ಥ ಪದಕೋಶ ✶ ವಿರುದ್ಧಾರ್ಥ ಪದಕೋಶ
✶ ನಾನಾರ್ಥ ಪದಕೋಶ ✶ ತತ್ಸಮ–ತದ್ಭವ ಪದಕೋಶ



ಟಿ. ಎಸ್. ಗೋಪಾಲ್

## ಈ ಕೆಳಗಿನ ಪರೀಕ್ಷೆಗಳಿಗೆ ಸಂಬಂಧಿಸಿದಂತೆ ಕನ್ನಡ ಭಾಷಾ ಅಧ್ಯಯನಕ್ಕೆ ಉಪಯುಕ್ತ ಮಾರ್ಗದರ್ಶಿ




¼ ಕ್ರೌನ್ 320 ಪುಟಗಳು
₹ 260

- ಪ್ರೌಢಶಾಲಾ ಶಿಕ್ಷಕರ ನೇಮಕಾತಿ ಪರೀಕ್ಷೆ
- ಕೆ.ಎ.ಎಸ್. ಪೂರ್ವಭಾವಿ ಪರೀಕ್ಷೆ
- ಕೆ. ಎ.ಎಸ್. ಕನ್ನಡ ಕಡ್ಡಾಯ
- ಪೌರಾಡಳಿತ ಮಂಡಳಿ ನೇಮಕಾತಿ ಪರೀಕ್ಷೆ
- ಪಂಚಾಯಿತಿ ಅಭಿವೃದ್ಧಿ ಅಧಿಕಾರಿ ಪರೀಕ್ಷೆ
- ಅಬಕಾರಿ ರಕ್ಷಕರ ನೇಮಕಾತಿ ಪರೀಕ್ಷೆ
- ಪ್ರಾಥಮಿಕ ಶಾಲಾ ಶಿಕ್ಷಕರು ಹಾಗೂ ಮಾಧ್ಯಮಿಕ ಶಿಕ್ಷಕರ (6–8 ತರಗತಿ) ನೇಮಕಾತಿ ಪರೀಕ್ಷೆ
- ಪದವಿ ಪೂರ್ವ ಉಪನ್ಯಾಸಕರ ನೇಮಕಾತಿಯ ಕಡ್ಡಾಯ ಕನ್ನಡ ಭಾಷಾ ಪರೀಕ್ಷೆ
- ಬಿ.ಎಡ್. ಕನ್ನಡ ಭಾಷಾ ಪರೀಕ್ಷೆ
- ಮೊರಾರ್ಜಿ ದೇಸಾಯಿ ಪ್ರೌಢಶಾಲೆ ಕನ್ನಡ ಶಿಕ್ಷಕರ ನೇಮಕಾತಿ ಪರೀಕ್ಷೆ
- ಸರಕಾರಿ ಪ್ರೌಢಶಾಲೆಗಳ ಕನ್ನಡ ಶಿಕ್ಷಕರ ನೇಮಕಾತಿ ಪರೀಕ್ಷೆ
- ಪದವಿ ಕಾಲೇಜುಗಳ ಮತ್ತು ವಿಶ್ವವಿದ್ಯಾಲಯಗಳ ಉಪನ್ಯಾಸಕರ ರಾಷ್ಟ್ರಮಟ್ಟದ (K.C.U) ಪ್ರಶ್ನೆಪತ್ರಿಕೆ
- ಕರ್ನಾಟಕ ಲೋಕಸೇವಾ ಆಯೋಗವು ನಡೆಸುವ ಪ್ರಥಮದರ್ಜೆ ಸಹಾಯಕರ ಪರೀಕ್ಷೆ
- ಕಿರಿಯ ಸಹಾಯಕರು / ದ್ವಿತೀಯ ದರ್ಜೆ ಸಹಾಯಕರ ಸ್ಪರ್ಧಾತ್ಮಕ ಪರೀಕ್ಷೆ

ಮೂರು ವರ್ಷದ
'ಹೊಸತು'
ಚಂದಾದಾರರಿಗೆ
20% ಸೋಡಿ.
ಇತರರಿಗೆ 10% ಸೋಡಿ.
ಅಂಚೆವೆಚ್ಚ
₹ 25 ಪ್ರತ್ಯೇಕ

ಹಣವನ್ನು ಡಿ.ಡಿ., ಎಂ.ಒ. ಮೂಲಕ ಕಳಿಸಿ ಅಥವಾ ನಮ್ಮ ಪುಸ್ತಕ ಮಳಿಗೆಗೆ ಭೇಟಿ ನೀಡಿ

## ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್

11, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ 5159, ಕುಮಾರ ಪಾರ್ಕ್ ಪೂರ್ವ
ಬೆಂಗಳೂರು – 560 001. ಫೋನ್ : 080–22392460/61 ಫ್ಯಾಕ್ಸ್ : 080–22203580
e-mail : navakarnataka@gmail.com http://navakarnataka.blogspot.in

ಆನ್‌ಲೈನ್ ಮೂಲಕವೂ ಲಭ್ಯ




www.navakarnataka.com

ಶಾಖೆಗಳು : ಬೆಂಗಳೂರು ✆ 22251382 ✆ 22203106 :: ಮಂಗಳೂರು ✆ 2441016 ✆ 2425161 :: ಮೈಸೂರು ✆ 2424094 :: ಕಲಬುರಗಿ ✆ 224302

**ಚಿತ್ರಗಳು :** ಕಮಲಂ ಅರಸು, ನಾಮದೇವ ಕಾಗದಗಾರ, ಸುನಿಲ್ ಮಿಶ್ರಾ, ತನು, ವಿ. ಗೋಪಾಲ್, ಜಿ. ಎಂ. ಬೊಮ್ನಳ್ಳಿ, ಗೋಪಿ ಹಿರೇಬೆಟ್ಟು
**ಮುಖಪುಟ :** ಮಕ್ಕಳ ದಿನಾಚರಣೆ, ಕರ್ನಾಟಕ ರಾಜ್ಯೋತ್ಸವ
**ವಿನ್ಯಾಸ :** ನವಕರ್ನಾಟಕ ವಿನ್ಯಾಸ
**ಕಚೇರಿ ಸಹಕಾರ :** ಜಿ. ವಿ. ತೇಜೋವತಿ

## ಈ ತಿಂಗಳು



ನಮ್ಮ ದೇಶದಲ್ಲಿ ಯಾವ ವಿಷಯಕ್ಕೆ ಆದ್ಯತೆ ನೀಡಿ ವ್ಯಾಪಕವಾಗಿ ಚರ್ಚಿಸಬೇಕು ಮತ್ತು ಯಾವುದನ್ನು ನಾಲ್ಕು ಮಾತುಗಳಲ್ಲಿ ಮುಗಿಸಿ ಮುಂದಕ್ಕೆ ಹೋಗಬೇಕು ಎಂಬ ತಿಳಿವಳಿಕೆಯೇ ಇಲ್ಲದಿರುವುದು ಕಳಪೆ ರಾಜಕೀಯಕ್ಕೆ ಹಿಡಿದ ಕನ್ನಡಿಯಾಗಿದೆ. ಇದು ಎಷ್ಟು ತಳಮಟ್ಟ ಮುಟ್ಟಿದೆಯೆಂದರೆ ಟಿ.ವಿ. ಚರ್ಚೆಗಳಿಂದ ವಿಶ್ವವನ್ನು ಜಯಿಸುತ್ತೇವೆಂಬ ಬಾಲಿಶ ಕಲ್ಪನೆಯನ್ನು ಬಿತ್ತಲಾಗುತ್ತಿದೆ. ಇದು ತೀರಾ ಅನಾರೋಗ್ಯಕರ ಬೆಳವಣಿಗೆ. ಪಾಕಿಸ್ತಾನದ ಸ್ವಾಧೀನಕ್ಕೆ ತುತ್ತಾಗಿರುವ ಕಾಶ್ಮೀರದ ಭಾಗದಲ್ಲಿ ನಡೆಸಲಾಯಿತೆಂದು ಹೇಳಲಾಗುತ್ತಿರುವ "ನಿರ್ದಿಷ್ಟ ಹೊಡೆತ"ವನ್ನು ಗಮನಿಸಿದರೆ ಇದು ಸ್ಪಷ್ಟವಾದೀತು. ಇದೊಂದು ತುರ್ತಾದ ಶಸ್ತ್ರಚಿಕಿತ್ಸೆ ಎಂಬ ಕಾರಣದಿಂದಲೋ ಏನೋ ಅದನ್ನು "ಸರ್ಜಿಕಲ್ ಸ್ಟ್ರೈಕ್" ಎಂದು ಕರೆದಿದ್ದಾರೆ. ರೋಗಿಯು ಶಸ್ತ್ರಚಿಕಿತ್ಸೆಗೆ ಸಿದ್ಧನಾಗಿರಲಿಲ್ಲ, ಬಲವಂತವಾಗಿ ಅದನ್ನು ನಡೆಸಲಾಗಿದೆ ಎಂಬುದೇ ವಿಶೇಷ. ಅದು ಹೆಮ್ಮೆಯ ವಿಷಯವೆಂದು ಸಾರಲಾಗುತ್ತಿದೆ. ಇದರಲ್ಲಿ ಅಂತಹ ಅಗಾಧ ಪರಾಕ್ರಮವೇನೆಂಬುದನ್ನು ರಾಷ್ಟ್ರದಲ್ಲೆಲ್ಲಾ ತಿಂಗಳುಗಟ್ಟಲೆ ಡಂಗುರ ಬಾರಿಸಬೇಕೆ ? ಅಷ್ಟಕ್ಕೂ ಶಸ್ತ್ರಚಿಕಿತ್ಸೆ ನಡೆದದ್ದು ನಮ್ಮ ದೇಶಕ್ಕೆ ಸೇರಿದ, ಆದರೆ ಪಾಕಿಸ್ತಾನದ ಅಧೀನದಲ್ಲಿರುವ, ಕಾಶ್ಮೀರದಲ್ಲೇ. ನಮ್ಮ ಗಡಿರೇಖೆಯನ್ನು ದಾಟಿ ಆಕ್ರಮಣವನ್ನೇನೂ ನಾವು ನಡೆಸಿಲ್ಲವಾದ್ದರಿಂದ ಆಕ್ಷೇಪಾರ್ಹವಾದುದೇನೂ ಇದರಲ್ಲಿಲ್ಲ. ನಮ್ಮ ಗಡಿಯೊಳಕ್ಕೆ ಭಯೋತ್ಪಾದಕರು ನುಸುಳದಂತೆ ಮಾಡಲು ನಾವು ಈವರೆಗೆ ಸೋತಿರುವುದರಿಂದ ಇಂತಹ ಹೊಡೆತ ಅಗತ್ಯವಾಯಿತು. ಉರಿ ಎಂಬಲ್ಲಿನ ಸೈನ್ಯದ ಭದ್ರಕೋಟೆಯಲ್ಲಿ ನಮ್ಮ ಸೈನಿಕರು ಹತರಾದರೆ ಉಗ್ರರು ಒಂದು ಕಾರಣ, ಅವರನ್ನು ತಡೆಯುವುದರಲ್ಲಿ ನಾವು ಯಶಸ್ವಿಯಾಗಿಲ್ಲದಿರುವುದು ಇನ್ನೊಂದು ಕಾರಣ. ಪಾಕಿಸ್ತಾನದೊಳಕ್ಕೆ ನುಗ್ಗಿ ಭಯೋತ್ಪಾದಕರನ್ನು ನಿಗ್ರಹಿಸಲು ಯತ್ನಿಸಿದರೆ ಯುದ್ಧವನ್ನು ಘೋಷಿಸಿದಂತಾಗುತ್ತದೆಯಾದ್ದರಿಂದ ಅದನ್ನು ವಿವೇಚನೆಯಿಂದ ಎದುರಿಸಬೇಕು. ಈಗ ನಡೆಸಲಾಗಿದೆ ಎನ್ನಲಾದ ಹೊಡೆತದ ಬಗ್ಗೆ ಯಾವ ಮುಚ್ಚುಮರೆಯೂ ಅಗತ್ಯವಿಲ್ಲ. ಹೊಡೆತದ ಬಗ್ಗೆ ಶಂಕೆಯನ್ನು ವ್ಯಕ್ತಪಡಿಸುವುದು ಸೈನ್ಯಕ್ಕೆ ಅವಮರ್ಯಾದೆ ತೋರಿದಂತೆ ಎಂಬ ಮಾತನ್ನು ಪದೇಪದೇ ಕೇಳುತ್ತಿದ್ದೇವೆ. ಮಾತನ್ನು ನಿಲ್ಲಿಸಿ 'ಸರ್ಜಿಕಲ್ ಸ್ಟ್ರೈಕ್'ನ ವಾಸ್ತವಿಕ ಚಿತ್ರಗಳನ್ನು ಬಹಿರಂಗಗೊಳಿಸಿದರೆ ಶಂಕೆಗೆ ನೇರ ಉತ್ತರ ಕೊಟ್ಟಂತಾಗುತ್ತದೆ. ಅದು ನಮ್ಮ ಸೈನಿಕರ ಬೆನ್ನು ತಟ್ಟಿ ನಾವೆಲ್ಲಾ ಅವರೊಡನೆ ಸಂಭ್ರಮಿಸಿದಂತೆಯೂ ಆಗುತ್ತದೆ. ಅದು ಸೈನಿಕರಿಗೆ ರಾಷ್ಟ್ರವು ನೀಡುವ ಪ್ರೋತ್ಸಾಹ ಮತ್ತು ಖಿಲ್ಲತ್ತು. ಇದರಲ್ಲಿ ಗುಟ್ಟು ರಟ್ಟಾಗುತ್ತದೆಂಬ ಪ್ರಶ್ನೆಯೇ ಅಪ್ರಸ್ತುತ. ಅಷ್ಟಕ್ಕೂ ಅಮೆರಿಕಾದ ಸ್ಯಾಟಲೈಟ್ ಚಿತ್ರಗಳಲ್ಲಿ ನಮ್ಮ ಸರ್ಜಿಕಲ್ ಸ್ಟ್ರೈಕ್ ದಾಖಲಾಗದೆ ಉಳಿದಿರುತ್ತದೆಯೆ ? ನಮ್ಮ ದೇಶದ ಮತ್ತು ಸೈನಿಕರ ಸ್ಥೈರ್ಯ ಮತ್ತು ಶಕ್ತಿ ಜಗಜ್ಜಾಹೀರಾಗಲಿ, ಅದಕ್ಕೇಕೆ ಅಳುಕು ? ಮೇಲಾಗಿ, ಏನಾದರೂ ಶಂಕೆ ಇದ್ದರೆ ಅದು ಸೈನಿಕರ ಬಲ ಮತ್ತು ಬದ್ಧತೆಯನ್ನು ಕುರಿತಾದದ್ದಲ್ಲ. ನಮ್ಮ ನಾಗರಿಕ ಸಮಾಜದಲ್ಲಿ ಅಂತಹ ಭಾವನೆ ಎಂದೂ ಪ್ರಕಟಗೊಂಡಿಲ್ಲ. ಅಂತಹ ಭಾವನೆ ಬೇರೂರಿದೆಯೇನೋ ಎಂಬ ರೀತಿಯಲ್ಲಿ ಇಂದಿನ ಪ್ರಧಾನಿ ಮತ್ತು ಅವರ ಸಂಪುಟದ ಸಚಿವರು ಮಾತನಾಡುವುದು ಬೇಡ. ಹಾಗೆ ಮಾತನಾಡಿದರೆ ಕಳ್ಳನ ಮನಸ್ಸು ಹುಳ್ಳಹುಳ್ಳಗೆ ಎಂಬುದನ್ನು ಪ್ರದರ್ಶಿಸಿದಂತಾಗುತ್ತದೆ. ಬಂಗ್ಲಾದೇಶದ ವಿಮೋಚನೆಗೆ ಹೋರಾಡಿದ ಸೈನ್ಯ, ೧೯೬೫ರಲ್ಲಿ ಪಾಕಿಸ್ತಾನವನ್ನು ಹಿಮ್ಮೆಟ್ಟಿಸಿದ ಸೈನ್ಯ ನಮ್ಮದು. ಹೀಗಿರುವಾಗ ಸೈನಿಕರ ಛಾತಿಯನ್ನು ಅನುಮಾನಿಸುವವರು ಯಾರೂ ಇರುವುದಿಲ್ಲ. ತಾವು ಮಾತ್ರ ದೇಶಭಕ್ತರೆಂಬ ಮೂರ್ಖತನವನ್ನು ಯಾರೂ ತೋರ್ಪಡಿಸುವ ಅಗತ್ಯ ಇಲ್ಲ. ನಮ್ಮ ದೇಶದಲ್ಲಿ ಸಾರ್ವತ್ರಿಕವಾಗಿ ಸೈನಿಕರ ಬಗ್ಗೆ ಒಲವಿದೆ, ಗೌರವವಿದೆ. ಅದು ಯಾರೋ ಸ್ವಯಂಘೋಷಿತ ದೇಶಭಕ್ತರ ಏಕಸ್ವಾಮ್ಯದಲ್ಲಿರುವ ಸ್ವತ್ತಲ್ಲ. ಸರ್ಕಾರದ ಹುನ್ನಾರಗಳ ಸಾಧ್ಯತೆಯನ್ನು ಜನತೆಯು ಪ್ರಶ್ನಿಸುತ್ತದೆಯೇ ವಿನಾ ಸೈನಿಕರ ತ್ಯಾಗಭಾವವನ್ನಲ್ಲ ಎಂಬುದು ಪ್ರಧಾನಿ ಮತ್ತು ಅವರ ಸಹೋದ್ಯೋಗಿಗಳಿಗೆ ತಿಳಿದಿರಲಿ. ಆಡಳಿತಾರೂಢರಾಗಿರುವ ಇಂದಿನ ಅನೇಕ ಮುತ್ಸದ್ದಿಗಳ

(೬ನೇ ಪುಟಕ್ಕೆ )



ತಿಂಗಳ ಪತ್ರಿಕೆ

ಹೊಸತು

ನೆಲ್ಲುಡಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೧೮ ಸಂಚಿಕೆ-೪ ನವೆಂಬರ್ ೨೦೧೬







**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೯೫
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೨೨೫೨೫೪೭೩, ೨೨೨೦೩೫೮೨
ಫ್ಯಾಕ್ಸ್ : ೨೨೨೦೩೫೮೦
e-mail : navakarnataka@gmail.com
hosathu@gmail.com
hosathu.nkp@gmail.com
URL : www.navakarnataka.com
http ://navakarnataka.blogspot.in
http ://hosathumonthly.blogspot.in




# ಸಂಪಾದಕೀಯ

## ಉಡುಪಿ ಚಲೋ: ಕ್ರಿಯೆ, ಪ್ರತಿಕ್ರಿಯೆ

ಇತ್ತೀಚಿನ ದಿನಗಳಲ್ಲಿ ಉಡುಪಿ, ಮಂಗಳೂರು ಕರಾವಳಿ ಪ್ರದೇಶದಲ್ಲಿ ಮತೀಯ ಶಕ್ತಿಗಳ ಪ್ರಾಬಲ್ಯ ಹೆಚ್ಚಾಗಿ, ಮತೀಯ ಸಾಮರಸ್ಯ ಕದಡುವ ಸುದ್ದಿಗಳೇ ಹೆಚ್ಚಾಗಿ ಬರುತ್ತಿದ್ದವು. ಅಲ್ಲಿ ಮತಾಂಧ ಶಕ್ತಿಗಳು ಮಾಡುವ ಪುಂಡಾಟಿಕೆಗೆ ಪ್ರತಿಕ್ರಿಯೆ ನೀಡುವುದು ರಾಜ್ಯದ ಪ್ರಗತಿಪರ ಶಕ್ತಿಗಳ ಕೆಲಸವಾಗಿತ್ತು. ಕಳೆದ ಅಕ್ಟೋಬರ್ ೯ರಂದು ರಾಜ್ಯದ ಪ್ರಗತಿಪರ ಸಂಘಟನೆಗಳು ನಡೆಸಿದ ದಲಿತ, ದಮನಿತರ ಸ್ವಾಭಿಮಾನಿ ಜಾಥಾ ಮತೀಯ ಶಕ್ತಿಗಳು ಪ್ರತಿಕ್ರಿಯೆ ನೀಡುವಂತಾಗಿದೆ. ರಾಜ್ಯದ ಪ್ರಗತಿಪರ ಸಂಘಟನೆಗಳು ಹೀಗೆ ಕ್ರಿಯಾತ್ಮಕವಾಗಿ, ಒಟ್ಟಾಗಿ ಹಲವಾರು ಬಾರಿ ಚಟುವಟಿಕೆಗಳನ್ನು ಮಾಡಿವೆ. ಆದರೆ ಅವೆಲ್ಲ ಕೇವಲ ಚಟುವಟಿಕೆಗೆ ಸೀಮಿತವಾಗಿ ಒಂದು ಚಳುವಳಿಯಾಗಿ ರೂಪಗೊಳ್ಳಲಿಲ್ಲ. ಉಡುಪಿಯಲ್ಲಿನ ಪಂಕ್ತಿಭೇದ ವಿರೋಧಿಸಿ, ಸುಬ್ರಮಣ್ಯದಲ್ಲಿ ಮಡೆಸ್ನಾನ ವಿರೋಧಿಸಿ ಹಲವಾರು ಬಾರಿ ಪ್ರತಿಭಟನೆಗಳು ನಡೆದಿವೆ. ಅದಕ್ಕೂ ಮೊದಲು ಚಿಕ್ಕಮಗಳೂರಿನಲ್ಲಿ ಬಾಬಾಬುಡನ್‌ಗಿರಿ ವಿಷಯಕ್ಕೆ ಸಂಬಂಧಿಸಿ ಪ್ರಗತಿಪರ ಸಂಘಟನೆಗಳೆಲ್ಲ ಸೇರಿ ಸಮಾವೇಶ ನಡೆಸಿದವು. ಆದರೆ ಪ್ರಗತಿಪರ ಸಂಘಟನೆಗಳಲ್ಲಿನ ಅನೈಕ್ಯತೆ, ಸಂಘಟನಾ ಸ್ವಾರ್ಥದಿಂದಾಗಿ ಈ ಎಲ್ಲ ಪ್ರತಿಭಟನೆಗಳು ಒಂದು ಚಳುವಳಿಯಾಗಿ ಬೆಳೆಯದೆ ಕೇವಲ ಚಟುವಟಿಕೆಗೆ ಸೀಮಿತವಾದವು. ಅಂಥದೇ ಇನ್ನೊಂದು ಯತ್ನ ದಲಿತ, ದಮನಿತರ ಸ್ವಾಭಿಮಾನಿ ಜಾಥಾ ರೂಪದಲ್ಲಿ ನಡೆದಿದೆ. ಈ ಜಾಥಾ ದೇಶದಲ್ಲಿ ದಲಿತರ ಮೇಲಿನ ದಾಳಿಯನ್ನು ವಿರೋಧಿಸಿ ನಡೆದ ಊನಾ ಮಾದರಿಯ ಹೋರಾಟ. ಗೋರಕ್ಷಣೆಯ ಹೆಸರಿನಲ್ಲಿ ಗೋರಕ್ಷಕರೆಂದು ಹೇಳಿಕೊಳ್ಳುವ ಗೂಂಡಾ ಪಡೆಗಳ ದಾಳಿ ದೇಶದಲ್ಲೆಲ್ಲ ಆತಂಕವನ್ನು ಸೃಷ್ಟಿಸಿದೆ. ಈ ಆತಂಕ ಕರ್ನಾಟಕದ ಎಲ್ಲ ಜನಪರ ಸಂಘಟನೆಗಳು ಈ ಉಡುಪಿ ಚಲೋ ಕಾರ್ಯಕ್ರಮಕ್ಕೆ ನೇರವಾಗಿ, ಪರೋಕ್ಷವಾಗಿ ಭಾಗಿಯಾಗಲು ಕಾರಣವಾಗಿದ್ದವು. ಈ ಕಾರ್ಯಕ್ರಮವನ್ನು ಯಾರು ಮಾಡುತ್ತಿದ್ದಾರೆ ಎನ್ನುವುದಕ್ಕಿಂತಲೂ ಯಾಕೆ ಮಾಡುತ್ತಿದ್ದಾರೆ ಎಂಬುದು ಮಹತ್ವದ ಸಂಗತಿಯಾಗಿತ್ತು.

ಉಡುಪಿ ಚಲೋ ಕಾರ್ಯಕ್ರಮದಲ್ಲಿ ಪ್ರಗತಿಪರ ಸಂಘಟನೆಗಳು ಮಾತ್ರವಲ್ಲ ಜನಪರ, ಪ್ರಗತಿಪರ ಚಿಂತಕರೂ ಭಾಗವಹಿಸಿದ್ದು ವಿಶೇಷವಾಗಿತ್ತು. ವಿಷಯ ಪ್ರಮುಖವಾಗಿದ್ದಾಗ ಸಂಘಟನೆಗಳ ಅಸ್ಮಿತೆ ಗೌಣವಾಗುತ್ತದೆ. ಉಡುಪಿಯ ಮತ್ತು ರಾಜ್ಯದ ಹಿಂದೂ ಮತೀಯವಾದಿಗಳು ತಲ್ಲಣಿಸಿದ್ದು ಉಡುಪಿ ಚಲೋ ಕಾರ್ಯಕ್ರಮದ 'ಆಹಾರ ನಮ್ಮ ಆಯ್ಕೆ, ಭೂಮಿ ನಮ್ಮ ಹಕ್ಕು' ಎಂಬ ಘೋಷಣೆಯಿಂದಾಗಿ. ಸಮಾವೇಶದ ಪ್ರಮುಖ ಭಾಷಣಕಾರನಾದ ಜಿಗ್ನೇಶ್ 'ದನದ ಬಾಲ ನೀವೇ ಇಟ್ಟುಕೊಳ್ಳಿ, ದಲಿತರಿಗೆ ಭೂಮಿ ಕೊಡಿ' ಎಂದು ಹೇಳಿದ ಘೋಷಣೆ ಮತಾಂಧ ಶಕ್ತಿಗಳಿಗೆ ಅರಗಿಸಿಕೊಳ್ಳಲಾಗದ, ವಿರೋಧಿಸಲೂ, ಒಪ್ಪಿಕೊಳ್ಳಲೂ ಆಗದ ಘೋಷಣೆ. ಆ ಕಾರಣಕ್ಕೇ ಇಂದು ಆಹಾರದ ಆಯ್ಕೆ ಮತ್ತು ಭೂಮಿಯ ಹಕ್ಕಿನ ವಿಷಯವನ್ನು ಮರೆಮಾಚಲು ಮಾತಿನ ಮಧ್ಯೆ ಜಿಗ್ನೇಶ್ 'ಪಂಕ್ತಿಭೇದ ವಿರೋಧಿಸಿ ಬಂಧನಕ್ಕೂ ಸಿದ್ಧ' ಎಂದು ಹೇಳಿದ ಮಾತನ್ನೇ ದೊಡ್ಡದು ಮಾಡಿ ಪೇಜಾವರ ಸ್ವಾಮಿಗಳನ್ನು ಗುರಾಣಿಯನ್ನಾಗಿ ಮಾಡಿಕೊಂಡಿದ್ದಾರೆ. ಈಗ ಪ್ರಗತಿಪರರು ಮೂಲ ವಿಷಯವನ್ನು ಬಿಟ್ಟು ಪಂಕ್ತಿಭೇದ, ಕೃಷ್ಣಮಠಕ್ಕೆ ಮುತ್ತಿಗೆ ವಿಷಯದ ಕುರಿತೇ ಮಾತನಾಡುವಂತಾಗಿದೆ. ಈ ಪ್ರತಿಕ್ರಿಯೆಯನ್ನು ಸಾಂದರ್ಭಿಕವಾಗಿ ವ್ಯಕ್ತಪಡಿಸಿ ಪ್ರಗತಿಪರ, ದಲಿತ ಹಿಂದುಳಿದ ವರ್ಗದ ಸಂಘಟನೆಗಳು ಆಹಾರದ ಆಯ್ಕೆ, ಭೂಮಿ ಹಕ್ಕಿನ ಕುರಿತು ಕ್ರಿಯೆಗಿಳಿಯಬೇಕಾಗಿದೆ. ಆ ವಿಷಯದ ಕುರಿತು ರಾಜ್ಯದಾದ್ಯಂತ ಚಳುವಳಿಯನ್ನು ರೂಪಿಸಬೇಕಿದೆ. ಒಟ್ಟಿನಲ್ಲಿ ಉಡುಪಿ ಚಲೋ ಕಾರ್ಯಕ್ರಮ ರೂಪಿಸಿದವರು, ಅದರಲ್ಲಿ ಭಾಗಿಯಾದವರೆಲ್ಲ ಅಭಿನಂದನಾರ್ಹರು.

ಒಂದು ಹೋರಾಟದ ಯಶಸ್ಸಿನ ನಂತರ ತೃಪ್ತಭಾವ ಹೊಂದಿ ವಿಶ್ರಾಂತಿ ಪಡೆವ ಪ್ರಗತಿಪರರು ಈ ವಿಶ್ರಾಂತಿಯ ಸಂದರ್ಭದಲ್ಲಿ ಯಶಸ್ಸಿನ ಪಾಲು ಪಡೆಯಲು ಸೆಣಸಾಡುತ್ತಾರೆ. ಇಡೀ ಜಾಥಾ ದಲಿತ, ಹಿಂದುಳಿದ, ಅಲ್ಪಸಂಖ್ಯಾತ ಸಮುದಾಯದ ಪ್ರಾತಿನಿಧ್ಯವನ್ನು ಸಾಂಕೇತಿಕವಾಗಿ ಹೊಂದಿದ್ದರೂ ಎಡಪಂಥೀಯ, ಪ್ರಗತಿಪರ ಸಂಘಟನೆಗಳೂ ಪ್ರಾತಿನಿಧಿಕವಾಗಿ ಭಾಗವಹಿಸಿದ್ದು ಸತ್ಯ. ಇದರ ಮಧ್ಯೆಯೇ ಕೆಲವು ದಲಿತ, ಹಿಂದುಳಿದ ವರ್ಗದ ಬುದ್ಧಿಜೀವಿಗಳು, ಸಂಘಟಕರು ಕಮ್ಯುನಿಸ್ಟರ ವಿರುದ್ಧ ತಮ್ಮ ಸಾಂಪ್ರದಾಯಿಕ ವಿಷಕಾರುವ ಕಾಯಕ ಮುಂದುವರಿಸಿದ್ದಾರೆ. ಇದು ಮತ್ತೆ ಪ್ರಗತಿಪರರ ಮಧ್ಯೆಯೇ ವಿಘಟನೆಗೆ ಕಾರಣವಾಗುತ್ತದೆ. ಯುವಕ ಜಿಗ್ನೇಶ್ ದಲಿತ, ಹಿಂದುಳಿದ, ಅಲ್ಪಸಂಖ್ಯಾತ, ಆದಿವಾಸಿ ಜನಸಮೂಹದ ಜೊತೆಗೆ ರೈತ ಕಾರ್ಮಿಕರೂ ಒಂದಾಗಬೇಕು ಎಂದು ಹೇಳಿದ್ದನ್ನು ಒಂದು ಜಾಥಾ ನಡೆಸಿ ತೃಪ್ತರಾಗುವ ಮನೋಸ್ಥಿತಿಯ ಎಲ್ಲರೂ ಅರ್ಥಮಾಡಿಕೊಳ್ಳಬೇಕು. ಕನ್ಹಯ್ಯಕುಮಾರ ಕೊಟ್ಟ 'ಜೈಭೀಮ್ ಲಾಲ್ ಸಲಾಮ್' ಘೋಷಣೆ ಸಂದರ್ಭದ ಅವಶ್ಯಕತೆಯನ್ನು ಸೂಚಿಸುತ್ತದೆ. ಇತಿಹಾಸದಲ್ಲಿ ಮಾರ್ಕ್ಸ್‌ವಾದಿಗಳೂ, ಅಂಬೇಡ್ಕರ್‌ವಾದಿಗಳೂ ಮಾಡಿದ ತಪ್ಪನ್ನು ಸರಿಪಡಿಸಿಕೊಳ್ಳಬೇಕಾದರೆ 'ಜೈಭೀಮ್ ಲಾಲ್ ಸಲಾಮ್' ಘೋಷಣೆ ಮುನ್ನೆಲೆಗೆ ಬರಬೇಕು. ಆ ಎರಡು ತತ್ವಗಳ ಸಾಂಕೇತಿಕ ಮಾದರಿಗಳಾಗಿ ಜಿಗ್ನೇಶ್ - ಕನ್ಹಯ್ಯಕುಮಾರ ಹೊರಹೊಮ್ಮಿದ್ದಾರೆ. 'ಜೈಭೀಮ್ ಲಾಲ್ ಸಲಾಮ್' ಘೋಷಣೆ ಮುನ್ನೆಲೆಗೆ ಬಂದರೆ ಹಲವಾರು ಸ್ವಯಂಘೋಷಿತ ದಲಿತೋದ್ಧಾರಕರು, ಕ್ರಾಂತಿಕಾರಿಗಳು ನಿರುದ್ಯೋಗಿಗಳಾಗುತ್ತಾರೆ. ಎಲ್ಲಕ್ಕೂ ಮುಖ್ಯವಾಗಿ ಕಮ್ಯುನಲ್

ಕಾರ್ಪೊರೇಟ್ ಶಕ್ತಿಗಳ ಕೂಟ ಈ ಘೋಷಣೆಯನ್ನು ಕೇಳಿ ಬೆಚ್ಚಿಬಿದ್ದಿದೆ. ಈ ಘೋಷಣೆ ಪ್ರಗತಿಪರರ ಕಾರ್ಯಕ್ರಮವಾಗಬೇಕು. ಸಾಮಾನ್ಯ ಕನಿಷ್ಠ ಕಾರ್ಯಕ್ರಮ ಎಲ್ಲ ಜನಪರ, ಪ್ರಗತಿಪರ ಚಳುವಳಿಗಳ ಐಕ್ಯತೆಯ ಕೇಂದ್ರವಾಗಬೇಕು. ಸಂಘಟನಾ ಸ್ವಾರ್ಥ ಇರಬೇಕು. ಆದರೆ ಸಂಘಟನೆಗಳ ಅಸ್ತಿತ್ವಕ್ಕೇ ಧಕ್ಕೆ ಬರುವಾಗ ಎಲ್ಲ ಸಂಘಟನೆಗಳ ಸ್ವಾರ್ಥ ಕಾಯುವ ನಿಸ್ವಾರ್ಥ ನಾಯಕತ್ವ ಬೇಕು. ಸದ್ಯಕ್ಕಂತೂ ಎಲ್ಲ ಜನಪರರನ್ನು ಒಂದುಗೂಡಿಸಿದ್ದು ಒಂದು ನಿರ್ದಿಷ್ಟವಾದ ಸಂದರ್ಭ. ಈ ಸಂದರ್ಭ ಹೊಸ ತಿರುವಿಗೆ ಕಾರಣವಾಗಲಿ.

ಸಿದ್ದನಗೌಡ ಪಾಟೀಲ

## ನ್ಯಾಯಾಲಯದಲ್ಲಿ ಪ್ರತಿಗಾಮಿ ಜೆಂಡರ್ ರಾಜಕೀಯ !

**ಹಿಂ**ದೂ ಮದುವೆಯಲ್ಲಿ 'ಕನ್ಯಾದಾನ' ಎಂಬ ಆಚರಣೆಯೊಂದಿದೆ. ಇದು ಹೆತ್ತವರಿಗೆ ಮಹಾ ಪುಣ್ಯ ತರುವ ಆಚರಣೆಯಂತೆ. ಹೀಗೆ ತಾಯ್ತಂದೆಯರು ಮದುವೆಯಲ್ಲಿ ದಾನವಾಗಿ ಕೊಟ್ಟದ್ದರಿಂದ "ಹೆಣ್ಣು ಕುಲಕ್ಕೆ ಹೊರಗು". ಅವಳ ಸುಖ ದುಃಖಗಳು, ಸೇವೆ–ಜವಾಬ್ದಾರಿಗಳೇನೇ ಇದ್ದರೂ ಅದು ಗಂಡನ ಕುಟುಂಬಕ್ಕೆ. ಇಂತಹ ಒಂದು ಹಳೆಯ ಸಾಂಪ್ರದಾಯಿಕ ಆಲೋಚನಾ ಚೌಕಟ್ಟನ್ನು ಶಿಕ್ಷಣ ಮತ್ತು ಮಹಿಳಾ ಚಳುವಳಿ ಬದಲಾಯಿಸಬಲ್ಲುದೆಂದು ಬೀಗುತ್ತಿರುವಾಗ, ಸರ್ವೋಚ್ಚ ನ್ಯಾಯಾಲಯವು ಆ ನಂಬಿಕೆಯ ಬೆಲೂನಿಗೆ ಸೂಜಿಚುಚ್ಚಿ "ಹೆಣ್ಣು ಎಂದರೆ ಹೀಗಿರಬೇಕು !" ಎಂದು ಫರ್ಮಾನು ಹೊರಡಿಸಿದೆ.

ಇತ್ತೀಚೆಗೆ ನರೇಂದ್ರ / ಕೆ. ಮೀನಾ ಪ್ರಕರಣದಲ್ಲಿ ನ್ಯಾಯಮೂರ್ತಿ ಅನಿಲ್ ಆರ್. ದವೆ ಮತ್ತು ನ್ಯಾಯಮೂರ್ತಿ ಎಲ್. ನಾಗೇಶ್ವರರಾವ್ ಅವರು ಇದ್ದ ನ್ಯಾಯಪೀಠ ವಿವಾಹ ವಿಚ್ಛೇದನಕ್ಕೆ ಹೆಂಡತಿಯು ಗಂಡನನ್ನು ಅವನ ತಾಯ್ತಂದೆಯರಿಂದ ಬೇರ್ಪಡಿಸಿ ಬೇರೆ ಮನೆ ಹೂಡಲು ಒತ್ತಾಯಿಸುವುದೂ ಒಂದು ಕಾರಣವಾಗುತ್ತದೆ ಎಂದು ಹೇಳುತ್ತಾ ಸಮಾಜದಲ್ಲಿರುವ ದ್ವಿಸ್ತರ ನ್ಯಾಯವನ್ನು ಎತ್ತಿ ಹಿಡಿದಿದೆ. "ವಿವಾಹಿತ ಪುರುಷನನ್ನು ಅವನ ಹೆತ್ತವರಿಂದ ಬೇರ್ಪಡಿಸುವುದು ಕ್ರೌರ್ಯವಾಗುತ್ತದೆ. ಆದರೆ ವಿವಾಹದ ನಂತರ ಹೆಣ್ಣುಮಗಳು ಹೆತ್ತವರಿಂದ ಬೇರ್ಪಟ್ಟು ಗಂಡನ ಮನೆ ಸೇರಿ ಅದರ ಭಾಗವಾಗುವುದು ಸಂಪ್ರದಾಯವಾಗುತ್ತದೆ." ಇಂತಹ ಮಾತನ್ನು ನ್ಯಾಯಾಲಯದಿಂದ ಯಾರು ನಿರೀಕ್ಷಿಸಬಹುದಿತ್ತು ?

ಇದು ೧೯೯೨ರಷ್ಟು ಹಳೆಯ ಪ್ರಕರಣ. ಗಂಡನೊಂದಿಗೆ ಒಟ್ಟಿಗೆ ಬದುಕಲಾಗದೆ ಹೋಗಿ ಆತ್ಮಹತ್ಯೆಗೆ ಶರಣಾಗುವ ಹಂತಕ್ಕೆ ಹೋಗಿದ್ದ ಈ ಹೆಣ್ಣಿನ ಸ್ಥಿತಿಯನ್ನು ನೋಡಿದ ಕೆಳನ್ಯಾಯಾಲಯವು ವಿಚ್ಛೇದನದ ಡಿಕ್ರಿಯನ್ನು ಕೊಟ್ಟಾಗಿತ್ತು. ಆದರೆ ೨೦೦೧ರಲ್ಲಿ ಕರ್ನಾಟಕ ಹೈಕೋರ್ಟ್ ಈ ವಿಚ್ಛೇದನವನ್ನು ನಿರಾಕರಿಸಿದಾಗ ಕೇಸು ಸುಪ್ರೀಂ ಕೋರ್ಟಿನ ಮೆಟ್ಟಿಲು ಹತ್ತಿಯಾಗಿತ್ತು. ಈಗ ಸುಪ್ರೀಂ ಕೋರ್ಟು ಅಂತಿಮವಾಗಿ ಗಂಡನ ಪರ ವಕೀಲನ ವಾದವನ್ನಷ್ಟೇ ಆಲಿಸಿ ಹೆಂಡತಿಯ ಕಡೆಯ ವಕೀಲನ ಅನುಪಸ್ಥಿತಿಯಲ್ಲಿ ತೀರ್ಪು ಘೋಷಿಸಿದೆ. ಕೆಳ ನ್ಯಾಯಾಲಯದ ತೀರ್ಪನ್ನಷ್ಟೇ ಎತ್ತಿ ಹಿಡಿದಿದ್ದರೆ, ಈ ತೀರ್ಪು ಇಷ್ಟೊಂದು ವಿವಾದಕ್ಕೆಡೆಗೊಡುತ್ತಿರಲಿಲ್ಲ. ಬದಲಿಗೆ, ತೀರ್ಪಿನಲ್ಲಿ ನ್ಯಾಯಮೂರ್ತಿ ದವೆಯವರು "ಹಿಂದೂ ಪುತ್ರನು ತನ್ನ ಹೆತ್ತವರಿಂದ ದೂರವಿದ್ದು ಬದುಕುವುದು ಒಳ್ಳೆಯದಲ್ಲ. ಪ್ರತಿಯೊಬ್ಬ ಮಗನೂ ತನ್ನ ಹೆತ್ತವರನ್ನು ನೋಡಿಕೊಳ್ಳುವುದು ನೈತಿಕ ಮತ್ತು ಶಾಸನಾತ್ಮಕ ಹೊಣೆಗಾರಿಕೆಯಾಗಿದೆ. ವಯಸ್ಕರಾದ ಮೇಲೆ ಮತ್ತು ಮದುವೆಯಾದ ಮೇಲೆ ತಾಯ್ತಂದೆಗಳಿಗೆ ದೂರವಾಗಿ ಬದುಕುವುದು ಪಾಶ್ಚಾತ್ಯ ಚಿಂತನೆಯಾಗಿದೆ. ಆದರೆ ಭಾರತದಲ್ಲಿ ಹೆಣ್ಣು ಮಕ್ಕಳು ಮದುವೆಯಾದ ನಂತರ ತಮ್ಮ ತಾಯ್ತಂದೆಗಳಿಂದ ದೂರವಾಗಿ ಗಂಡನ ಮನೆಯಲ್ಲಿ ಹೋಗಿ ವಾಸಿಸುವುದು ಸಾಮಾನ್ಯವಾಗಿ ಎಲ್ಲರೂ ಒಪ್ಪಿಕೊಂಡ ಸಂಪ್ರದಾಯವಾಗಿದೆ" ಎಂದು ಹೇಳಿರುವುದು ಪ್ರಜ್ಞಾವಂತರಿಗೆಲ್ಲಾ ಆಘಾತಕಾರಿಯಾದ ಸಂಗತಿಯಾಗಿದೆ. ಇದು ಯಾವ ಶತಮಾನದ ಮೌಲ್ಯವೆಂದು ಜನತೆಯು ತಿಳಿಯಬೇಕು ? ಹೀಗೆ ಹೇಳಲು ಕಾನೂನಿನ ಯಾವ ನಿಬಂಧನೆಯನ್ನು ನ್ಯಾಯಾಲಯವು ಆಧರಿಸಿದೆ ಎಂಬುದು ಕುತೂಹಲದ ಸಂಗತಿಯೇ ಸರಿ.

ಮಹಿಳೆಯರಿಗೆ ಸಂಬಂಧಪಟ್ಟ ಕಾನೂನಿನಲ್ಲಿ ಸುಧಾರಣೆ ತರುವ ನಿಟ್ಟಿನಲ್ಲಿ ಸತತವಾಗಿ ಕಳೆದ ಮೂರು ದಶಕಗಳ ಕಾಲ ತೊಡಗಿಕೊಂಡಿದ್ದ ಭಾರತದ ಮಹಿಳಾ ಚಳುವಳಿಯಿಂದಾಗಿ ಮಹಿಳೆಯರು ಅಲ್ಪಸ್ವಲ್ಪವಾದರೂ ಯಶಸ್ಸು ಕಂಡಿದ್ದೇವೆಂದು ಸಮಾಧಾನಪಡುತ್ತಿದ್ದ ಹೊತ್ತಿನಲ್ಲಿ ಈ ಬದಲಾವಣೆಯ ಚಕ್ರಗಳು ಬಿರುಸಿನಿಂದ ಹಿಂದಕ್ಕೆ ತಿರುಗಲು ಹೊರಟಿರುವುದು ಆಘಾತಕಾರಿಯಾಗಿದೆ. ದೇಶದ ಸರ್ವೋಚ್ಚ ನ್ಯಾಯಾಲಯದ ನ್ಯಾಯಮೂರ್ತಿಗಳ ಚಿಂತನೆ ಇಷ್ಟೊಂದು ಪ್ರತಿಗಾಮಿಯಾಗಿದೆ ಎನ್ನುವುದು ನಿಜಕ್ಕೂ ನಾಚಿಕೆಗೇಡಿನ ಸಂಗತಿ. ಹೆಣ್ಣು ಸದಾ ಕೇವಲ ಗಂಡಸಿನ ಬಾಲಂಗೋಚಿಯಾಗಿ ಬದುಕಬೇಕೆಂದು ವಿಧಿಸುವ, ಅವಳಿಗೆ ಸಮಾಜದಲ್ಲಿ ಎರಡನೆಯ ಸ್ಥಾನ ಕೊಡುವ ಮತ್ತು ಹೆಣ್ಣು ಎಂದರೆ ಹೀಗೇ ಇರಬೇಕು – ಒಳ್ಳೆಯ ಹೆಂಡತಿ, ತಾಯಿ ಮತ್ತು ಮಗಳಾಗಿ – ಎಂದು ಬಯಸುವ ಸಮಾಜದ ಗತಕಾಲದ ಚಿಂತನೆಯನ್ನು ಪ್ರತಿಫಲಿಸುವ ನ್ಯಾಯಾಧೀಶರ ತೀರ್ಪಿನ ವಿವರಗಳು ಹೆಣ್ಣಿನ ಪಾಲಿಗಂತೂ ಶುಭ ಸೂಚನೆಯಲ್ಲ.

ಅಷ್ಟೇ ಅಲ್ಲ, ಈ ತೀರ್ಪು ಇಂದಿನ ಸಮಾಜದ ವಾಸ್ತವ ಸಂಗತಿಗಳಿಗೆ ಸಂಪೂರ್ಣ ಕುರುಡಾಗಿದೆ : ಇಂದು ತಾಯ್ತಂದೆಯರು ವೃದ್ಧಾಪ್ಯದಲ್ಲಿ ಗಂಡುಮಕ್ಕಳಿಗಿಂತ ಹೆಣ್ಣು ಮಕ್ಕಳತ್ತಲೇ ನೋಡುತ್ತಿರುವುದು ಹೆಚ್ಚಿದೆ. ಗಂಡುಮಕ್ಕಳೇ ಇಲ್ಲದ ತಾಯ್ತಂದೆಯರು ಏನು ಮಾಡಬೇಕು ? ಗಂಡು ಮತ್ತು ಹೆಣ್ಣುಮಕ್ಕಳಿಬ್ಬರು ಇದ್ದರೂ ಅವರೆಲ್ಲೋ ವಿದೇಶದಲ್ಲಿದ್ದು, ತಾಯ್ತಂದೆಯರು ಒಂಟಿಯಾಗಿರುವ ಸಂದರ್ಭಗಳಿಗೇನೂ ಕೊರತೆಯಿಲ್ಲದ ಸಂದರ್ಭ ನಮ್ಮದು.




ತಿಂಗಳ ಪತ್ರಿಕೆ
**ಹೊಸತು**
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ





**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ₹ ೨೦/- |
| ವಾರ್ಷಿಕ ಚಂದಾ | ₹ ೨೫೦/- |
| ಮೂರು ವರ್ಷಕ್ಕೆ | ₹ ೫೦೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ , ಗಾಂಧಿನಗರ
ಬೆಂಗಳೂರು – ೫೬೦ ೦೦೯
✆ : ೦೮೦-೨೨೨೫೧೩೮೨

ಕೆಂಪೇಗೌಡ ರಸ್ತೆ
ಬೆಂಗಳೂರು – ೫೬೦ ೦೦೯
✆ : ೦೮೦-೨೨೨೦೩೧೦೬

ಕೆ. ಎಸ್. ಆರ್. ರಸ್ತೆ
ಮಂಗಳೂರು – ೫೭೫ ೦೦೧
✆ : ೦೮೨೪-೨೪೪೧೦೦೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು – ೫೭೫ ೦೦೧
✆ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು – ೫೭೦ ೦೨೪
✆ : ೦೮೨೧-೨೪೨೪೯೪

ಸ್ಟೇಷನ್ ರಸ್ತೆ
ಕಲಬುರಗಿ – ೫೮೫ ೧೦೨
✆ : ೦೮೪೭೨-೨೨೪೩೦೨

೧೯೮೭ರಲ್ಲಿ ತಂದೆ ಕಾಶಿರಾವ್ ಎಂಬಾತ ಮಗಳು ವಿಜಯಾ ಅರ್ಬತ್ ವೃದ್ಧಾಪ್ಯದಲ್ಲಿ ತನ್ನನ್ನು ನೋಡಿಕೊಳ್ಳುತ್ತಿಲ್ಲ, ಎಂದು ದೂರಿ ಅದಕ್ಕೆ ಪರಿಹಾರ ಕೋರಿ ಕೋರ್ಟು ಕಟ್ಟೆ ಹತ್ತಿದ್ದರು. ಆಗ ಕೋರ್ಟು ಕಾಶೀರಾವ್ ಅವರಿಗೆ ನಿರ್ವಹಣಾ ಭತ್ಯೆ ಕೊಡಬೇಕಾದ್ದು ಮಗಳ ಕರ್ತವ್ಯ ಎಂಬ ತೀರ್ಪನ್ನು ನೀಡಿದಾಗ ಎಲ್ಲ ಪ್ರಗತಿಪರರೂ ಇದನ್ನು ಸ್ವಾಗತಿಸಿದ್ದರು. ಮೂವತ್ತು ವರ್ಷಗಳ ನಂತರ ಇಂದು ದೇಶದ ಸರ್ವೋಚ್ಚ ನ್ಯಾಯಾಲಯವು ಹೀಗೆ ಪ್ರತಿಗಾಮಿಯಾಗಿ ಚಿಂತಿಸುತ್ತಿರುವುದು ನಿಜಕ್ಕೂ ಆಶ್ಚರ್ಯ ಹುಟ್ಟಿಸುತ್ತದೆ. ಇತಿಹಾಸದ ಚಕ್ರವು ಹಿಂದಕ್ಕೆ ತಿರುಗಲಾರಂಭಿಸಿದೆ ಎಂದು ತೋರುತ್ತಿದೆ! "ಹೆಣ್ಣೆಂದರೆ ಗಂಡ, ಮಗ, ಅತ್ತೆ–ಮಾವಂದಿರ ಸೇವೆಗಾಗಿ ನಿಯೋಜಿಸಲ್ಪಟ್ಟ ತೊತ್ತು" ಎಂದು ನಿರಾಕರಣ ಯೋಗ್ಯವಾದ ಸಾಂಪ್ರದಾಯಿಕ ಚೌಕಟ್ಟಿನಲ್ಲಿ ಯೋಚಿಸುವುದು ನ್ಯಾಯಾಲಯಕ್ಕೆ ಅಡರಿಕೊಂಡಿರುವ ಬೌದ್ಧಿಕ ದಾಸ್ಯವೆಂಬುದನ್ನು ಈ ತೀರ್ಪು ಬಿಚ್ಚಿಡುತ್ತದೆ. ಹೆಣ್ಣನ್ನು ದೇಶದ ಪ್ರಜೆಯೆಂಬಂತೆ ನೋಡದೆ, ಯಾರಿಗೋ ಹೆಂಡತಿ ಮತ್ತು ಸೊಸೆಯೆಂಬಂತೆ ಮಾತ್ರವೇ ಅರ್ಥೈಸುತ್ತಿರುವುದು ವಿಕೃತವಾದ ದೊಡ್ಡ ಅನರ್ಥ.

ಇಂದು ಹೆಣ್ಣುಮಕ್ಕಳು ಹುಟ್ಟುವ ಮುನ್ನವೇ ಅಳಿಸಿಹೋಗುತ್ತಿರುವುದು ಒಂದು ಕಡೆಗಾದರೆ, ಹುಟ್ಟಿದ ಮೇಲೂ ತಾತ್ಸಾರ ಮತ್ತು ನಿರ್ಲಕ್ಷ್ಯಕ್ಕೆ ತುತ್ತಾಗುತ್ತಿರುವುದು ಇನ್ನೊಂದು ಕಡೆ. ಒಟ್ಟಾರೆಯಾಗಿ, ಹೆಣ್ಣುಮಕ್ಕಳ ಮೇಲಿನ ದೌರ್ಜನ್ಯವು ಹೆಚ್ಚುತ್ತಿರುವುದಕ್ಕೆ ನ್ಯಾಯಾಲಯವು ಈಗ ತೋರಿರುವ ಕೆಟ್ಟ ಮನಃಸ್ಥಿತಿಯೇ ಕಾರಣ. ಎಲ್ಲಿಯವರೆಗೆ ಗಂಡುಮಕ್ಕಳು ಮಾತ್ರ ಪ್ರಮುಖವೆಂಬ ಭಾವನೆ ಹೋಗುವುದಿಲ್ಲವೋ ಅಲ್ಲಿಯವರೆಗೂ ಸಮಾಜ ಹೆಣ್ಣನ್ನು ನೋಡುವ ದೃಷ್ಟಿ ಬದಲಾಗುವುದಿಲ್ಲ ಮತ್ತು ಗಂಡುಮಗು ಬೇಕೆಂದು ಕಾಯುತ್ತಾ ಹೆಣ್ಣುಮಗುವನ್ನು ತಾತ್ಸಾರದಿಂದ ಕಾಣುವ ಮನಃಸ್ಥಿತಿ ಬದಲಾಗುವುದಿಲ್ಲ. ಎಲ್ಲೋ ಕೆಲವು ಜನಸಾಮಾನ್ಯರು ಇಂತಹ ಅಭಿಪ್ರಾಯ ವ್ಯಕ್ತಪಡಿಸಿದರೆ ಸಹಜವೆನಿಸಬಹುದೇನೋ! ಆದರೆ ಸಂವಿಧಾನದತ್ತವಾದ ಜವಾಬ್ದಾರಿ ಸ್ಥಾನದಲ್ಲಿರುವವರು ಇಂತಹ ಅಭಿಪ್ರಾಯಗಳನ್ನು ಅಧಿಕಾರದ ಗದ್ದುಗೆಯ ಮೇಲಿಂದ ಪ್ರಕಟಿಸಿದರೆ ಅನರ್ಥಗಳುಂಟಾಗುವುದರಲ್ಲಿ ಅನುಮಾನವೇ ಇಲ್ಲ. ಇದಂತೂ ಖಂಡನೀಯ.

ಗಾಯತ್ರಿ . ಎಸ್.

---

*(ಈ ತಿಂಗಳು : ೩ನೇ ಪುಟದಿಂದ)*

ಪೂರ್ವಾಶ್ರಮದ ಕೃತ್ಯಗಳು, ಅವು ಮುಸುಕಿನಲ್ಲಿ ಮರೆಯಾದ್ದು, ಇತ್ಯಾದಿಗಳು ಅವರ ಘೋಷಣೆಗಳ ಬಗ್ಗೆ ಅನುಮಾನಗಳನ್ನು ಹುಟ್ಟುಹಾಕುತ್ತವೆ. ಸರ್ಜಿಕಲ್ ಸ್ಟ್ರೈಕ್‌ನ ವಿವರಗಳನ್ನು ಪ್ರತ್ಯಕ್ಷ ವೀಡಿಯೋ ಪ್ರದರ್ಶನದ ಮೂಲಕ ಸಾರ್ವಜನಿಕರಿಗೆ ಮುಟ್ಟಿಸುವುದರಲ್ಲಿ ಆತಂಕದ ವಿಷಯವೇನೂ ಇರಲಾರದು. ಅನೇಕ ದೇಶಗಳ ರಾಯಭಾರಿಗಳಿಗೆ ಸ್ಟ್ರೈಕ್‌ನ ಮಾಹಿತಿ ನೀಡಲಾಗಿದೆ. ಅಂಥದರಲ್ಲಿ ವೀಡಿಯೋ ಗೋಪ್ಯವಾಗಿರಬೇಕಾಗಿಲ್ಲ. ಸರ್ಜಿಕಲ್ ಸ್ಟ್ರೈಕ್ ಒಬ್ಬ ವ್ಯಕ್ತಿಯ ಹೆಗ್ಗಳಿಕೆಯೆಂಬಂತೆ ಪ್ರತಿಫಲಿಸುತ್ತಿರುವುದು ಪ್ರಧಾನಿಯವರ ಪಕ್ಷ. ಉತ್ತರ ಪ್ರದೇಶದಲ್ಲಿ ಪ್ರಧಾನಿಯವರ ಚಿತ್ರವಿರುವ ಬ್ಯಾನರ್‌ಗಳಲ್ಲಿ ಸೈನಿಕರನ್ನು ಶ್ಲಾಘಿಸುವ ಅವಶ್ಯಕತೆ ಏನಿದೆ? ಉತ್ತರ ಪ್ರದೇಶದ ಚುನಾವಣೆಯಲ್ಲಿ ಗೆಲುವು ಪಡೆಯಲು ಸೈನಿಕರನ್ನು ಬಳಸಿಕೊಳ್ಳಲಾಗುತ್ತಿದೆಯೆ? ಹಾಗಿದ್ದರೆ ಅದು ಪ್ರಶ್ನಾರ್ಹವಾದ ನಡತೆ ಎನ್ನಲೇಬೇಕು. ನಮ್ಮ ದೇಶದ ಸೈನ್ಯದ ಕೀರ್ತಿಯನ್ನು ಚುನಾವಣೆಯ ಬಂಡವಾಳವನ್ನಾಗಿಸಿಕೊಳ್ಳುವುದು ಯೋಗ್ಯವಲ್ಲ, ಅದು ಕೆಟ್ಟ ಪಂಕ್ತಿಯೊಂದನ್ನು ಹಾಕಿಕೊಟ್ಟಂತೆ ಆಗುತ್ತದೆ. ಸೈನ್ಯವು ಯಾವ ಪಕ್ಷದ ದಾಳಗಳೂ ಆಗಬಾರದು. ಸೈನ್ಯವು ಇಡೀ ದೇಶದ ಕೀರ್ತಿಪತಾಕೆಯ ಪ್ರತಿಮೆ ಎಂಬುದನ್ನು ಮರೆಯದಿರೋಣ. ಇಂತಹ ಸನ್ನಿವೇಶದಲ್ಲಿ ಎಲ್ಲ ಶಂಕೆಗಳನ್ನು ನಿವಾರಿಸಿ ಸೈನ್ಯದ ಹೆಮ್ಮೆಯನ್ನು ಹೆಚ್ಚಿಸಬೇಕು. ಸರ್ಜಿಕಲ್ ಸ್ಟ್ರೈಕ್ ಎಂಬ ಹೆಸರಿಲ್ಲದೆಯೂ ಹಿಂದೆಲ್ಲಾ ಪಾಕಿಸ್ತಾನದ ಸೈನ್ಯಕ್ಕೆ ಗಡಿರೇಖೆ ಯಾಚೆಯಲ್ಲೂ ನಮ್ಮ ಸೈನಿಕರು ಪೆಟ್ಟು ಕೊಟ್ಟಿದ್ದಾರೆ. ಅದನ್ನು ಯಾರೂ ಸ್ವಯಂ ಶ್ಲಾಘನೆಗೆ ವಸ್ತುವನ್ನಾಗಿಸಿಕೊಂಡಿಲ್ಲ, ಈಗಲೂ ಆಗಿಸಿಕೊಳ್ಳುವುದು ಬೇಡ.

* * *

"ಉಡುಪಿಯತ್ತ ಹೆಜ್ಜೆ ಹಾಕಿ ಮುನ್ನಡೆಯಿರಿ" ಎಂಬ ಘೋಷಣೆಯೊಂದಿಗೆ ದಲಿತ ವಿರೋಧಿ ಶಕ್ತಿಗಳನ್ನು ಹಿಮ್ಮೆಟ್ಟಿಸಲು ಬೆಂಗಳೂರಿನಿಂದ ಉಡುಪಿಗೆ ಒಂದು ಅಭಿಯಾನವನ್ನು ಹಮ್ಮಿಕೊಳ್ಳಲಾಗಿತ್ತು. ಡಾ|| ಬಾಬಾಸಾಹೇಬ್ ಅಂಬೇಡ್ಕರರ ಲಾಂಛನವಾಗಿದ್ದ ನೀಲಿ ಧ್ವಜದಡಿ ಪಕ್ಷಭೇದವನ್ನು ಬದಿಗೆ ಸರಿಸಿ ಸಾರ್ವಜನಿಕವಲಯದ ಹಲವು ಪಕ್ಷಗಳು ಮತ್ತು ಸಂಸ್ಥೆಗಳು ಉಡುಪಿಯಲ್ಲಿ ದೊಡ್ಡ ಪ್ರತಿಭಟನಾ ಸಭೆಯನ್ನು ನಡೆಸಿದವು. ನಮ್ಮಲ್ಲಿ "ಎರಡನೆಯ ಸ್ವಾತಂತ್ರ್ಯಕ್ಕಾಗಿ". ಎಷ್ಟೋ ಚಳುವಳಿಗಳು ನಡೆದಿವೆ ಯಾದರೂ ದಲಿತರಿಗಿನ್ನೂ ಮೊದಲ ಸ್ವಾತಂತ್ರ್ಯವೇ ದೊರೆತಿಲ್ಲ. ೧೯೭೪ರ ಆಸುಪಾಸಿನ "ಸಂಪೂರ್ಣ ಕ್ರಾಂತಿ"ಯು ಆರೆಸ್ಸೆಸ್‌ಗೆ ಅಗಾಧ ಲಾಭ ನೀಡಿತು, ಆದರೆ ದಲಿತರಿಗೆ ದಕ್ಕಿದ್ದು ಕೇವಲ ದೊಡ್ಡ ಸೊನ್ನೆ. ಭೂಮಿಯ ಒಡೆತನವನ್ನು ಮೂಲಭೂತ ಹಕ್ಕೊತ್ತಾಯವನ್ನಾಗಿಸಿಕೊಂಡು ಇಂದು ನೀಲಿ ಧ್ವಜದಡಿ ದಲಿತರು ಹಾಗೂ ಇತರರು ಐಕ್ಯತೆಯಿಂದ ಹೋರಾಟಕ್ಕಿಳಿಯುತ್ತಿರುವುದು ಚಾರಿತ್ರಿಕ ಸಂಗತಿ. ಅಂಬೇಡ್ಕರ್ ಅವರ ಹೆಸರಿನಲ್ಲಿ ಎಷ್ಟೇ ವಿಸ್ತೀರ್ಣವಾದ ಉದ್ಯಾನವನ್ನು ನಿರ್ಮಿಸಿದರೂ ಗ್ರಾಮಾಂತರ ಪ್ರದೇಶಗಳಲ್ಲಿ ದಲಿತರಿಗೆ ಕನಿಷ್ಠ ಪ್ರಮಾಣದ ಭೂಮಿಯನ್ನು ಒದಗಿಸದೆ ದಲಿತೋದ್ಧಾರವು ಸಾಧ್ಯವಾಗದು. ಈ ಹಕ್ಕೊತ್ತಾಯವನ್ನು ಸಾಧಿಸಿಕೊಳ್ಳಲು 'ಸರ್ಜಿಕಲ್ ಸ್ಟ್ರೈಕ್' ಸಾಲುವುದಿಲ್ಲ; ಅದಕ್ಕೆ ಪೂರ್ಣಪ್ರಮಾಣದ ಐಕ್ಯ ಹೋರಾಟ ಅಗತ್ಯ. ನಮ್ಮ ದೇಶದಲ್ಲಿ ಎರಡು ಮಾದರಿಯ ಕಾನೂನುಗಳಿವೆ : ಒಂದು, ಸಿಬಿಐನಂತಹ ಸಂಸ್ಥೆಗಳು ಮಹಾನ್ ಆಪಾದಿತರ ಪರವಾಗಿ ಇಲ್ಲದ ಸಾಕ್ಷ್ಯಗಳನ್ನು ಆರ್. ಕೆ. ರಾಘವನ್ ಅಂಥವರ ನೇತೃತ್ವದಲ್ಲಿ ಸೃಷ್ಟಿಮಾಡಿ ಆಪಾದಿತರನ್ನು ಖುಲಾಸೆ ಮಾಡುವ ಕಾನೂನು. ಇರುವ ಸಾಕ್ಷ್ಯಗಳನ್ನು ಹಾಳು ಮಾಡಲು ಈ ಕಾನೂನಿನಲ್ಲಿ ಅವಕಾಶವಿರುತ್ತದೆ! ಇನ್ನೊಂದು ಮಾದರಿಯ ಕಾನೂನು ದಲಿತರ ಮೇಲಿನ ಧಾಳಿ, ಹಲ್ಲೆ, ದೌರ್ಜನ್ಯ ಮತ್ತು ಕೊಲೆಗಳನ್ನು ನಡೆದೇ ಇಲ್ಲದ ಸಂಗತಿಗಳೆಂದು ಸಾಬೀತುಗೊಳಿಸಿಬಿಡುತ್ತದೆ. ಆಪಾದಿತರನ್ನು "ಸಾಕ್ಷಿ ದೊರೆತಿಲ್ಲ" ಎಂದು ಹೇಳಿ ರಕ್ಷಿಸುವುದು ಈ ಕಾನೂನಿನ ವೈಶಿಷ್ಟ್ಯ. ದಾದ್ರಿಯಲ್ಲಾದರೆ ಫ್ರಿಜ್‌ನಲ್ಲಿ ಇತ್ತೆನ್ನಲಾದ ಮಾಂಸದ ತುಂಡನ್ನು ಲಂಡನ್ನಿಗೆ ಕಳಿಸಿ "ಇದು ಗೋಮಾಂಸ" ಎಂಬ ತೀರ್ಮಾನವನ್ನು ಪಡೆಯಲಾಗುತ್ತದೆ. ಆದರೆ ಗುಜರಾತಿನ ಪಾಲನ್‌ಪುರದಲ್ಲಿ ಕೆಲವು ಧೂರ್ತರು ದಲಿತ ಗರ್ಭಿಣಿಯೊಬ್ಬಳ ಹೊಟ್ಟೆಗೆ ಸಾರ್ವಜನಿಕರ ಸಮ್ಮುಖದಲ್ಲಿ ಒದ್ದರೆ ಅದಕ್ಕೆ ದಸ್ತಗಿರಿ, ಮೊಕದ್ದಮೆ, ಶಿಕ್ಷೆ, ಯಾವುದೂ ಇಲ್ಲ. ಘಟನೆಯು ವಿಶ್ವಕ್ಕೆಲ್ಲಾ ತಿಳಿದಿದೆ, ಆದರೆ ಕಾನೂನಿನ ಯಂತ್ರಕ್ಕೆ ಸಾಕ್ಷಿಗಳು ದೊರೆಯುವುದಿಲ್ಲ! ಛತ್ತೀಸ್‌ಗಢದ ಚಂಪಾ ಜಿಲ್ಲೆ, ಜಂಜೀರ್ ತಾಲ್ಲೂಕು. ಅಲ್ಲಿಯ ಸಾಗರ್‌ಪಾಡಾ ಎಂಬ ಹಳ್ಳಿಯಲ್ಲಿ ದಲಿತ ಯುವಕನೊಬ್ಬನ ಕೊಲೆಯಾಯಿತು. ಅವನ ಅಪರಾಧವೇನು ಗೊತ್ತೆ? ತನ್ನೂರಿನಲ್ಲಿ ವಿದ್ಯುಚ್ಛಕ್ತಿಯ ಸರಬರಾಜನ್ನು ನಿಲ್ಲಿಸದೆ ಸದಾ ಕೊಡಿ ಎಂದು ಕೇಳಿದ್ದು. ಆ ಯುವಕನ ಹೆಸರು ಸತೀಶ್‌ಕುಮಾರ್ ನೋರ್ಗೆ. ಮಾಧ್ಯಮಗಳಿಗೆ ಇದು ಗೊತ್ತು, ಆದರೆ ಅವು ಇದನ್ನು ಮುಖ್ಯ ಸಮಾಚಾರ ಎಂದು ಪರಿಗಣಿಸುವುದಿಲ್ಲ. "ಸರ್ಜಿಕಲ್ ಸ್ಟ್ರೈಕ್" ಬಗ್ಗೆ ಬೇಕಾದರೆ ಅವು ಗಂಟೆಗಟ್ಟಲೆ ಹಲವು ವಾರಗಳ ಕಾಲ ಅರಚಿಕೊಳ್ಳುತ್ತವೆ. ಗುಜರಾತಿನ ಜಿಗ್ನೇಶ್ ಮೇವಾನಿ, ಬಿಹಾರದ ಕನ್ಹಯ್ಯಕುಮಾರ್ ಮುಂತಾದವರನ್ನು ದಂಡಿಸಲು ಪ್ರಭುತ್ವವು ಸದಾ ಸಿದ್ಧ, ಆದರೆ ವೇಮುಲನು ದಲಿತನೋ ಅಲ್ಲವೋ ಎಂದು "ತಿಳಿಯಲು" ತಿಂಗಳುಗಟ್ಟಲೆ ಸಂಶೋಧನೆ ನಡೆಸುತ್ತದೆ. ಇದು ನಮ್ಮ ದೇಶದ ವಿದ್ಯಮಾನ. ಮಹಾರಾಷ್ಟ್ರದಲ್ಲಿ ಇತ್ತೀಚೆಗೆ ಮರಾಠರು ತಮಗೆ ಮೀಸಲಾತಿ ಬೇಕೆಂದು ಬೃಹತ್ ಪ್ರತಿಭಟನೆ ನಡೆಸಿದರು. ಮರಾಠರು ಮಹಾರಾಷ್ಟ್ರದಲ್ಲಿ ಅಧಿಕಾರದ ಚುಕ್ಕಾಣಿ ಹಿಡಿದಿದ್ದವರು, ಆದರೂ ಅವರಿಗೆ ಮೀಸಲಾತಿ ಬೇಕು. ಆದರೆ ದಲಿತರಿಗೆ ಕನಿಷ್ಠ ಸವಲತ್ತುಗಳನ್ನೂ ನೀಡಕೂಡದೆಂದು ಪ್ರತಿಭಟನೆಯು ಆಗ್ರಹಿಸಿದೆ. ಮರಾಠರ ಒಂದು ಒತ್ತಾಯ ಇದು : ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳವರ ಮೇಲಿನ ಹಲ್ಲೆಗಳನ್ನು ನಿಗ್ರಹಿಸುವ ಸಲುವಾಗಿ ೧೯೮೯ರಲ್ಲಿ ಅಂಗೀಕರಿಸಲಾಗಿದ್ದ ಒಂದು ಶಾಸನವನ್ನು ರದ್ದುಗೊಳಿಸಬೇಕು, ಎಂದು. ಖೈರ್ಲಾಂಜಿಯ ಪಾತಕಗಳನ್ನು ಕಂಡ ರಾಜ್ಯದಲ್ಲಿ ದಲಿತರ ಪರವಾದ ಶಾಸನ ಕೂಡದು ಎನ್ನುವ ಜನವರ್ಗವು ನಮ್ಮ ದೇಶದಲ್ಲಿ ಎಂತಹ ದುಷ್ಟ ಮನಸ್ಸುಗಳಿವೆ ಎಂಬುದಕ್ಕೆ ಒಂದು ಪುರಾವೆ. ಜಾತಿ ವಿನಾಶದ ಹಾದಿಯನ್ನು ಕಂಡುಕೊಳ್ಳುವಾಗ ಡಾ|| ಅಂಬೇಡ್ಕರ್ ಅವರು ಅಂತರ್ಜಾತಿ ವಿವಾಹಗಳು ಅಂತಿಮವಾಗಿ ಜಾತಿಗಳ ನಾಶಕ್ಕೆ ಒಂದು ಸಾಧನ ಎಂದಿದ್ದರು. ವ್ಯಕ್ತಿಯ ಗೌರವಕ್ಕೆ ಖಂಡಿತ ಅದೊಂದು ಅಡಿಪಾಯವಾದೀತೆಂದು ಅವರು ಭಾವಿಸಿದ್ದರು. ಆದರೆ ನಮ್ಮ ಖಾಪ್ ಪಂಚಾಯಿತಿಗಳು ಅಂತರ್ಜಾತಿ ವಿವಾಹಕ್ಕೆ ಮುಂದಾದವರನ್ನು ಕೊಲ್ಲುತ್ತವೆ. ಸ್ವಚ್ಛ ಭಾರತದ ನಿರ್ಮಾಣ ಮಾಡುವವರು

ಇದಕ್ಕೆ ತೀವ್ರ ಪ್ರತಿರೋಧವನ್ನು ಒಡ್ಡಿಲ್ಲ. ಸತ್ತ ದನಗಳನ್ನೆತ್ತಿ ಗ್ರಾಮಗಳನ್ನು ಸ್ವಚ್ಛವಾಗಿಡುವುದು ದಲಿತರ ಪರಂಪರಾಗತ ಕರ್ತವ್ಯವೆಂದು ಹೇಳಿ ಅವರನ್ನು ಹಿಂಸಿಸಲಾಗುತ್ತಿದೆ. ಅವರಿಗೆ ಆಹಾರದ ಸ್ವಾತಂತ್ರ್ಯವೂ ಇಲ್ಲ, ಸತ್ತ ದನಗಳನ್ನು ಎತ್ತದಿರುವ ಸ್ವಾತಂತ್ರ್ಯವೂ ಇಲ್ಲ. "ನಿಮ್ಮ ಪವಿತ್ರ ಗೋವನ್ನು ನೀವೇ ಸ್ವರ್ಗಕ್ಕೆ ಕಳಿಸಿಕೊಡಿ, ನಾವವನ್ನು ಮುಟ್ಟುವುದಿಲ್ಲ" ಎಂದು ಹೇಳಿ ದಲಿತರು ಗುಜರಾತಿನಲ್ಲಿ ಕ್ರಾಂತಿಕಹಳೆ ಮೊಳಗಿಸಿದರು. ಇದು ಆಧುನಿಕ ಅಸಹಕಾರ ಚಳುವಳಿ ಮತ್ತು ಉಪ್ಪಿನ ಸತ್ಯಾಗ್ರಹ ಎನ್ನಲಡ್ಡಿಯಿಲ್ಲ. ಭೂಮಿಯ ಹಕ್ಕು, ಬೇಕಾದ್ದನ್ನು ತಿನ್ನುವ ಸ್ವಾತಂತ್ರ್ಯ, ಸತ್ತ ರಾಸುಗಳನ್ನು ಎತ್ತದಿರುವುದು, ಅಂತರ್ಜಾತಿ ವಿವಾಹಗಳನ್ನು ಪೋಷಿಸುವುದು, ಇವೆಲ್ಲಾ ಅಂಬೇಡ್ಕರ್ ನಿರ್ಮಿಸ ಹೊರಟಿದ್ದ ಭಾರತದ ಲಕ್ಷಣಗಳು. ಅವನ್ನು ಕಾರ್ಯಗತಗೊಳಿಸಲು "ಉಡುಪಿಗೆ ನಡೆಯಿರಿ" ಎಂಬಂತಹ ಪ್ರತಿಭಟನೆಗಳು ವ್ಯಾಪಕ ಹೋರಾಟದ ಸಾಧನೆಗಳು. ವಿಮೋಚನೆಗಾಗಿ ನಿರಂತರ ಕಾದು ಕುಳಿತಿರುವುದು ಸಾಧ್ಯವಿಲ್ಲವೆಂಬ ಸಂದೇಶವನ್ನು ದಲಿತರು ನೀಡುತ್ತಿರುವುದು ಮತ್ತು ಅದಕ್ಕೆ ವ್ಯಾಪಕ ಬೆಂಬಲ ದೊರೆಯುತ್ತಿರುವುದು ಸ್ವಾಗತಾರ್ಹವಾಗಿದೆ.

✴ ✴ ✴

ಹೊನ್ನಾಳಿಯ ದಕ್ಷಿಣಕ್ಕೆ ಸುಮಾರು ೨೦ ಕಿಲೋ ಮೀಟರ್‌ಗಳ ದೂರದಲ್ಲಿರುವ ಒಂದು ಚಿಕ್ಕ ಗ್ರಾಮ ಹಿಂಡಸಗಟ್ಟೆ. ತುಂಗಭದ್ರಾ ನದಿಯ ಪಾತ್ರದಿಂದ ಕೇವಲ ಎರಡು-ಮೂರು ಕಿಲೋಮೀಟರ್ ದೂರ. ಮಹಾನವಮಿಯಂದು ನದಿಯಲ್ಲಿ ಹತ್ತಾರು ವಾಹನಗಳನ್ನು ತೊಳೆಯುತ್ತಿದ್ದರೂ ಮೀಯಲು ಪ್ರಶಸ್ತವಾದ ನದಿಯೇ ಅದು. ಗ್ರಾಮವಾಸಿಗಳು ತಮ್ಮ ಟ್ರಾಕ್ಟರುಗಳನ್ನು ಬೇರೆಲ್ಲಿ ತೊಳೆದಾರು ! ಹಿಂಡಸಗಟ್ಟೆಯಿಂದ ಹಾಗೇ ಇನ್ನೂ ದಕ್ಷಿಣಕ್ಕೆ ರಾಣೆಬೆನ್ನೂರಿನತ್ತ ಹೊರಟರೆ ಉದ್ದಕ್ಕೂ ಮೈಲುಗಟ್ಟಲೆ ಒಣಗಿದ ಜೋಳದ ಪೈರು ಮನಸ್ಸಿಗೆ ತ್ರಾಸ ನೀಡುತ್ತದೆ. ಸಾಕಷ್ಟು ಎತ್ತರಕ್ಕೆ ಬೆಳೆದು ಸಕಾಲಕ್ಕೆ ಮಳೆ ಬಾರದೆ ಸೊರಗಿ ಒಣಗಿದ ಬೆಳೆಯು ರೈತರ ಹೃದಯಗಳ ಮೇಲೆ ಕಲ್ಲು ಹಾಕಿದೆ. ಸರ್ಕಾರವು ನೊಂದ ರೈತರಿಗೆ ಪರಿಹಾರ ನೀಡುತ್ತದಂತೆ. ಎಲ್ಲಿ, ಎಷ್ಟು ಮತ್ತು ಯಾವಾಗ ? ಅದೊಂದು ಮಹಾಪರ್ವವೇ ಆಗುತ್ತದೆ. ಬೆಳೆಯ ನಷ್ಟದಿಂದ ಉಂಟಾಗಿರುವ ಅಗಾಧ ಹಾನಿಗೆ ತಕ್ಕುದಾದ ಪರಿಹಾರವಂತೂ ಕನಸಿನ ಗಂಟು, ಅಷ್ಟೆ. ಕನಿಷ್ಠ ಮಟ್ಟದಲ್ಲಿ ಸಹ ನಷ್ಟವನ್ನು ಭರಿಸುವ ಭರವಸೆ ರೈತರಿಗೆ ದೊರೆತಿಲ್ಲ. ಇದು ನಮ್ಮ ಕೃಷಿಕ್ಷೇತ್ರದ ಆರ್ಥಿಕ ಅನಿಶ್ಚಿತತೆಗೆ ಒಂದು ನೋವಿನ ಉದಾಹರಣೆ. ಒಣಗಿದ ಜೋಳದ ಬೆಳೆಯ ಸನಿಹದಲ್ಲಿ ಈರುಳ್ಳಿಯನ್ನು ಅಗೆದು ಗುಡ್ಡೆಹಾಕಿರುವುದನ್ನು ಕಣ್ತುಂಬ ನೋಡಿ ಉಲ್ಲಾಸ ಅನುಭವಿಸಬಹುದು. ಆದರೆ ಮಾರುಕಟ್ಟೆಯಲ್ಲಿ ಈರುಳ್ಳಿಯ ಬೆಲೆ ಕಿಲೋ ಒಂದಕ್ಕೆ ಮೂರ್ನಾಲ್ಕು ರೂಪಾಯಿಗಳಿಗೆ ಕುಸಿದಿದೆ. ರೈತರು ಈರುಳ್ಳಿ ಬೆಳೆಯಲು ತೊಡಗಿಸಿರುವ ಹಣದ ನಾಲ್ಕನೆಯ ಒಂದು ಭಾಗ ಮಾತ್ರ ಅದು. ರೈತರು ಕಂಗಾಲಾಗದೆ ಉಂಟೆ ? ಇಂತಹ ಅನರ್ಥವು ದೇಶದ ಬೆನ್ನೆಲುಬಾದ ಕೃಷಿ ಕ್ಷೇತ್ರದಲ್ಲಿ ಸದಾ ಜರುಗುತ್ತಿದೆ. ಅದಕ್ಕಿಂತಲೂ ಹೆಚ್ಚಿನ ಕ್ರೌರ್ಯ ಇನ್ನೇನಿರಬಹುದು ! ಈರುಳ್ಳಿಯ ಸಾವಿರಾರು ಗುಡ್ಡೆಗಳು ಹೊಲಗಳಲ್ಲಿ ರಸ್ತೆಯ ಎರಡೂ ಪಾರ್ಶ್ವದಲ್ಲಿವೆ. ಸ್ವಲ್ಪ ಮಳೆ ಬಿದ್ದರೆ ಮುಗಿಯಿತು, ಈರುಳ್ಳಿ ಎಲ್ಲಾ ಕೊಳೆತುಹೋಗುವ ಅಪಾಯವಿದೆ. ರೈತರು ಅಷ್ಟು ಈರುಳ್ಳಿಯನ್ನು ಎಲ್ಲಿ ಇಟ್ಟುಕೊಳ್ಳಬೇಕು ? ಇಟ್ಟುಕೊಂಡರೆ ಕಷ್ಟ, ಮಾರಿದರೆ ನಷ್ಟ. ಇಂತಹ ಸಂದರ್ಭದಲ್ಲಿ ಮಧ್ಯಪ್ರವೇಶ ಮಾಡಿ ರೈತರಿಗೆ ಬೆಂಬಲ ನೀಡಬೇಕಾದ ಸರ್ಕಾರವು ನಿಷ್ಕ್ರಿಯವಾಗಿದೆ. ಶೈತ್ಯಾಗಾರಗಳ ರೀತಿಯಲ್ಲಿ ಈರುಳ್ಳಿಯ ಶೇಖರಣೆಗೆ ಸರ್ಕಾರವು ಸೂಕ್ತ ಸೌಲಭ್ಯ ಕಲ್ಪಿಸಲು ಸಹಸ್ರಾರು ಕೋಟಿ ರೂಪಾಯಿಗಳ ಹೂಡಿಕೆ ಬೇಕಿಲ್ಲ. ಬೆಂಗಳೂರಿನಲ್ಲಿ ಉಕ್ಕಿನ ಸೇತುವೆ ನಿರ್ಮಿಸಲು ೧೮೦೦ ಕೋಟಿಗಳನ್ನು ಖರ್ಚು ಮಾಡಲು ಹೇಸದ ಸರ್ಕಾರಕ್ಕೆ ಒಂದೆರಡು ಕೋಟಿ ವೆಚ್ಚ ಮಾಡಿ ಈರುಳ್ಳಿಯ ಶೇಖರಣೆಗೆ ಅನುಕೂಲ ಕಲ್ಪಿಸಲಾಗುವುದಿಲ್ಲವೆ ? ಮೂಲತಃ ಸರ್ಕಾರವೇ ಈರುಳ್ಳಿಯನ್ನು ರೈತರಿಂದ ಖರೀದಿಸಿ ಅವರಿಗೆ ನಿಗದಿಯಾದ ಬೆಂಬಲ ಬೆಲೆ ನೀಡುವ ಪದ್ಧತಿಯನ್ನು ಜಾರಿಗೆ ತರಬೇಕು. ಮಧ್ಯವರ್ತಿಗಳ ಮೋಸದ ವ್ಯಾಪಾರವು ಅನಿಷ್ಟವಾದೊಂದು ದುಂಡಾವರ್ತಿ. ಅದಕ್ಕೆ ಸಿಲುಕಿ ರೈತರು ತಮ್ಮ ಬೆಳೆಗೆ ಸರಿಯಾದ ಬೆಲೆ ಪಡೆಯುತ್ತಿಲ್ಲ. ಇಷ್ಟು ಹಗಲು ದರೋಡೆ ನಡೆಯುತ್ತಿರುವಾಗ ರೈತರಿಗೆ ಸಹಾಯಹಸ್ತ ನೀಡಬೇಕಾದ ಸರ್ಕಾರವು ಕಣ್ಣುಮುಚ್ಚಿ ಮಲಗಿದೆ. ಭಾಷಣ ಮಾಡುವಾಗ "ಭಾರತವು ಕೃಷಿಯ ಬೆನ್ನೆಲುಬನ್ನು ಹೊಂದಿದೆ, ರೈತರು ನಮ್ಮ ಸಂಪತ್ತು" ಎಂದೆಲ್ಲಾ ಹೇಳುತ್ತೇವಲ್ಲ, ಅದಕ್ಕೆ ಅರ್ಥ ಏನಿದೆ ? ರೈತರ ಸಹನೆಯ ಕಟ್ಟೆ ಒಡೆದರೆ ನಾವೆಲ್ಲಾ ತುಂಗಭದ್ರೆಯಲ್ಲಿ ಕೊಚ್ಚಿಹೋಗುತ್ತೇವೆ ಎಂಬುದನ್ನು ನೆನಪಿನಲ್ಲಿಡಬೇಕು. ದೇಶದ ಪೋಷಣೆ ಮಾಡುವವರನ್ನು ನಾವು ಪೋಷಿಸುವುದು ಹೀಗೇ ಏನು?

✴ ✴ ✴

ಪ್ರಾಧ್ಯಾಪಕ ಕಲಬುರ್ಗಿಯವರ ಹತ್ಯೆಯಾಗಿ ವರ್ಷ ಕಳೆದರೂ ಹಂತಕರನ್ನು ಇನ್ನೂ ಪತ್ತೆ ಮಾಡಲಾಗಿಲ್ಲ. ಅದಕ್ಕೆ ಸಂಬಂಧಿಸಿದಂತೆ ಧಾರವಾಡದಲ್ಲಿ ಒಂದು ಸಮ್ಮೇಳನ ನಡೆದ ತರುವಾಯ ರಾಜ್ಯದ ಗೃಹಸಚಿವ ಡಾ॥ ಪರಮೇಶ್ವರ ಅವರು ಕೆಲವು ಮಂದಿಯನ್ನು ಬರಮಾಡಿಕೊಂಡು ಸಮಾಲೋಚನೆ ನಡೆಸಿದರು, ಹಲವು ಉಪಯುಕ್ತ ಮಾಹಿತಿಯ ತುಣುಕುಗಳನ್ನು ನೀಡಿದರು. ವರಿಷ್ಠ ಪೊಲೀಸ್ ಅಧಿಕಾರಿಗಳು ಸಹ ಸಭೆಯಲ್ಲಿ ಹಾಜರಿದ್ದು ಹತ್ಯೆಯ ತನಿಖೆಯ ಬಗೆಗಿನ ಮಾಹಿತಿ ನೀಡಿದರು. ಸಚಿವರು ಸಮಜಾಯಿಷಿ ನೀಡಬೇಕಾದ್ದು ಕೆಲವು ಆಹ್ವಾನಿತರಿಗೆ ಮಾತ್ರವಲ್ಲ, ಅವರು ಜನತೆಯ ನಿರೀಕ್ಷೆಗೆ ಸ್ಪಂದಿಸುವ ಅಗತ್ಯವಿದೆ. ಕೊಲೆ ಮಾಡಿದ್ದು ಯಾರು ? ಇದರಲ್ಲಿ ಊಹಾಪೋಹಗಳಿಗೆ ಎಡೆ ಇರಬಾರದು. ಮತವೋ, ಮತೀಯ ಹುನ್ನಾರಗಳೋ, ಅಭಿವ್ಯಕ್ತಿಯನ್ನು ಸಹಿಸದೆ ಅದನ್ನು ಅದುಮಿಡಲು ಕಾತುರರಾಗಿರುವ ಫ್ಯಾಸಿಸ್ಟ್ ದುಷ್ಟಶಕ್ತಿಗಳೋ, ಯಾರು ಕೊಲೆಗೆ ಹೊಣೆ ? ಸ್ವೇಚ್ಛೆಯಿಂದ ತಲೆಬೇಟೆ ಮಾಡ ಹೊರಟಿರುವ ಪುಂಡರ ಎಗ್ಗಿಲ್ಲದ ಉಪಟಳ ಮತ್ತು ಹಿಂಸೆಗೆ ಪ್ರಭುತ್ವವು ಪ್ರತಿರೋಧ ಒಡ್ಡಬೇಡವೆ ? ಒಡ್ಡುವುದಾದರೆ, ಹೇಗೆ ? ಜನತೆಗೆ ಉತ್ತರ ಬೇಕಾಗಿದೆ.

✴ ✴ ✴

ಕೇಂದ್ರ ಸರ್ಕಾರದ ಮತೀಯ ದುರ್ಭಾವನೆಯು ಜನರ ನಡುವೆ ಗೋಡೆಗಳನ್ನು ಕಟ್ಟುವುದಷ್ಟೇ ಅಲ್ಲ, ವಿದ್ವತ್ಪ್ರಪಂಚದಲ್ಲಿ ಸ್ವತಂತ್ರ ವಸ್ತುನಿಷ್ಠ ಅಧ್ಯಯನಗಳಿಗೂ ಮಾರಕವಾಗಿದೆ. ನ್ಯಾಷನಲ್ ಬುಕ್ ಟ್ರಸ್ಟ್‌ನ ಮಾಜಿ ಅಧ್ಯಕ್ಷರಾಗಿದ್ದ ಬಿಪನ್ ಚಂದ್ರ ಈಗ ಬೌದ್ಧಿಕ ಹತ್ಯೆಗೆ ಗುರಿಯಾಗುತ್ತಿದ್ದಾರೆ ! ದೆಹಲಿಯಲ್ಲಿ ಇತಿಹಾಸ ಪ್ರಾಧ್ಯಾಪಕರಾಗಿದ್ದ ಬಿಪನ್ ಚಂದ್ರ ಗತಿಸಿ ಎರಡು-ಮೂರು ವರ್ಷಗಳಾಗಿವೆ. ಈಗ ಅವರ ಕೃತಿಗಳು ಗತಿಸುವ ಸನ್ನಿವೇಶ ಒದಗಿಬರುತ್ತಿದೆ. ಅವರ ಅನೇಕ ಉದ್ಗ್ರಂಥಗಳ ಪೈಕಿ ಒಂದು ಮತೀಯವಾದವನ್ನು ಕುರಿತಾದದ್ದು. ಅದು ಇಂಗ್ಲಿಷ್ ಮತ್ತು ಹಿಂದಿ, ಹೀಗೆ ಎರಡು ಭಾಷೆಗಳಲ್ಲೂ ಪ್ರಕಟಗೊಂಡಿದೆ. ಪುಸ್ತಕದ ಹಿಂದಿ ಅವತರಣಿಕೆಯನ್ನು ಹಿಂದೆಯೇ ನ್ಯಾಷನಲ್ ಬುಕ್ ಟ್ರಸ್ಟ್ ಪ್ರಕಟಿಸಿತ್ತು. ಅದರ ಪ್ರತಿಗಳು ಮುಗಿದು ಈಗ ಪುಸ್ತಕವು ಮರುಮುದ್ರಣಕ್ಕೆ ಸಿದ್ಧವಾಗಿದೆ. ಆದರೆ ಕೇಂದ್ರ ಸರ್ಕಾರದಿಂದ ನೇಮಕಗೊಂಡಿರುವ ನ್ಯಾಷನಲ್ ಬುಕ್ ಟ್ರಸ್ಟ್ ಅಧ್ಯಕ್ಷರು ಪುಸ್ತಕದ ಮರುಮುದ್ರಣ ಮಾಡಲಾಗುವುದಿಲ್ಲವೆಂದು ಘೋಷಿಸಿದ್ದಾರೆ. ಏಕೆಂದರೆ, ಆರೆಸ್ಸೆಸ್ ಯಾವುದನ್ನು ಇತಿಹಾಸವೆಂದು ತಿಳಿಯುತ್ತದೋ ಅದನ್ನು ಬಿಪನ್ ಚಂದ್ರ ಮಾನ್ಯ ಮಾಡುವುದಿಲ್ಲ. ನ್ಯಾಷನಲ್ ಬುಕ್ ಟ್ರಸ್ಟ್‌ಗೂ ಇತಿಹಾಸವು ಉಪಹಾಸವಾಗಿರಬೇಕೆಂಬ ಹೊಸ ಕಟ್ಟಳೆಯು ಅನ್ವಯವಾಗಲಿದೆ. ನಮ್ಮ ಬೌದ್ಧಿಕ ಧೀಮಂತರು ಪ್ರಶಸ್ತಿಗಳನ್ನು ಪಡೆಯುತ್ತಾರೆ, ಆದರೆ ಅಗತ್ಯವಿರುವಾಗ ತುಟಿಗಳನ್ನು ಎರಡು ಮಾಡುವುದಿಲ್ಲ. ನಮ್ಮ ದೇಶದ ಮೂರು ಸಾವಿರ ವರ್ಷಗಳ ಇತಿಹಾಸದಲ್ಲಿ ಅದೆಷ್ಟು ಮಂದಿ ವಿದ್ವಾಂಸರು ಪ್ರಭುತ್ವಕ್ಕೆ ಸವಾಲೆಸೆದರು, ತಮ್ಮ ಅಭಿವ್ಯಕ್ತಿಗೆ ಒಡ್ಡಲಾದ ಅನಿಷ್ಟ ಅಡಚಣೆಗಳನ್ನು ಮೀರಿ ನಿಂತರು ! ಅವರ ಪರಂಪರೆಗೆ ನಾವಿಂದು ನೀಡುವ ಪುರಸ್ಕಾರ ಇದೇ ಏನು ?



## ಡಾ॥ ಬರಗೂರು ರಾಮಚಂದ್ರಪ್ಪ ಅವರಿಗೆ ಅಭಿನಂದನೆಗಳು

ನಾಡಿನ ಜನಪರ ಚಿಂತಕ, ಬಂಡಾಯ ಸಾಹಿತ್ಯ ಚಳುವಳಿಯ ಪ್ರಮುಖ ಸಂಘಟಕ, ವಿಶಿಷ್ಟ ಚಲನಚಿತ್ರ ನಿರ್ದೇಶಕ ಹಾಗೂ ಕನ್ನಡದ ಪ್ರಮುಖ ಲೇಖಕರಾದ ಡಾ॥ ಬರಗೂರು ರಾಮಚಂದ್ರಪ್ಪ ಅವರನ್ನು ಈ ವರ್ಷದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರನ್ನಾಗಿ ಆಯ್ಕೆ ಮಾಡಲಾಗಿದೆ. 'ಹೊಸತು' ಬಳಗದವರಾದ ಡಾ॥ ಬರಗೂರು ರಾಮಚಂದ್ರಪ್ಪ ಅವರಿಗೆ 'ನವಕರ್ನಾಟಕ', 'ಹೊಸತು'ವಿನ ಅಭಿನಂದನೆಗಳು.




## ಪ್ರತಿಕ್ರಿಯೆ

✉ ಡಾ॥ ಜಿ. ರಾಮಕೃಷ್ಣ ತಮ್ಮ "ಋಗ್ವೇದ ಪ್ರವೇಶಿಕೆ" ಕುರಿತ ವಿಮರ್ಶೆಗೆ ಪ್ರತಿಕ್ರಿಯೆ ನೀಡಿದ್ದಾರೆ (ಅಕ್ಟೋಬರ್ ಸಂಚಿಕೆ). 'ಜಿ. ಆರ್.' ಎಂದೇ ಕನ್ನಡ ಸಾಹಿತ್ಯ ವಲಯದಲ್ಲಿ ಚಿರಪರಿಚಿತರಾಗಿರುವ ಅವರು ಅನೇಕ ಪ್ರಗತಿಪರ ಹೋರಾಟಗಳಲ್ಲಿ ಭಾಗಿಗಳಾಗಿದ್ದಾರೆ ಮತ್ತು ನಾಡಿನ ಪ್ರಖ್ಯಾತ ಪ್ರಗತಿಪರ ಚಿಂತಕರಲ್ಲೊಬ್ಬರಾಗಿದ್ದಾರೆ. 'ಹೊಸತು' ಪತ್ರಿಕೆಯ ಅವರ ಅನೇಕ ಸಂಪಾದಕೀಯಗಳು, ಬರವಣಿಗೆಯ ತೀಕ್ಷ್ಣತೆ ಮತ್ತು ಪ್ರಖರತೆಗಳಿಂದಾಗಿ ಓದುಗರ ಪ್ರಶಂಸೆಗೆ ಪಾತ್ರವಾಗಿವೆ.

ಚತುರ್ವೇದಗಳಲ್ಲಿ ಋಗ್ವೇದ ಅತ್ಯಂತ ಪ್ರಾಚೀನ ಗ್ರಂಥವೆಂದು, ಲಭ್ಯವಿರುವ ದಾಖಲೆಗಳಿಂದ ಸ್ವೀಕೃತವಾಗಿದೆ. ವೇದಗಳು ಈ ನಾಡಿನ ಜನಮಾನಸದಲ್ಲಿ ಆದರ ಮತ್ತು ಗೌರವಗಳೊಂದಿಗೆ ಭದ್ರವಾಗಿ ನೆಲೆಯೂರಿವೆ. 'ವೇದೋಕ್ತ' ಎಂದರೆ ಅದು ಪ್ರಶ್ನಾತೀತ ಎನ್ನುವ ಅರ್ಥವನ್ನೂ ಪಡೆದಿದೆ. ಅಷ್ಟೇ ಅಲ್ಲದೆ ವೇದಗಳನ್ನು ಪಾವಿತ್ರ್ಯತೆಯ ಪ್ರಭಾವಳಿ ಆವರಿಸಿರುವುದರಿಂದ ವೇದಗಳ ಸೂಕ್ತಗಳನ್ನಾಗಲಿ, ಮಂತ್ರಗಳನ್ನಾಗಲಿ, ವಿಮರ್ಶಿಸುವ, ವಿಶ್ಲೇಷಿಸುವ ಅಥವಾ ವಿಭಿನ್ನವಾಗಿ ಅರ್ಥೈಸುವ, ಕಾರ್ಯಕ್ಕೆ ಪಾಂಡಿತ್ಯವಿದ್ದರೂ ಬಹಳ ವಿದ್ವಾಂಸರು ಮುಂದಾಗುವುದಿಲ್ಲ.

ವೇದಮಂತ್ರಗಳು ಕ್ಲಿಷ್ಟವಾದ ಸಂಸ್ಕೃತ ಭಾಷೆಯಲ್ಲಿ ರಚಿತಗೊಂಡಿರುವುದರಿಂದ ಜನಸಾಮಾನ್ಯರಿಗೆ ಮಂತ್ರಗಳ ಅರ್ಥ ತಿಳಿಯುವುದಿಲ್ಲ. ಜನಸಾಮಾನ್ಯರು ಅದರ ಗೋಜಿಗೆ ಹೋಗುವುದೂ ಇಲ್ಲ. ಪುರೋಹಿತರು ನಿರ್ದೇಶಿಸಿದಂತೆ ಆಚರಣೆಗಳಲ್ಲಿ ತೊಡಗುವುದರಲ್ಲಷ್ಟೇ ಅವರು ಆಸಕ್ತರು. ಜಿ. ಆರ್. ಅವರಿಗೂ ಮುಂಚೆ ಅನೇಕ ವಿದ್ವಾಂಸರು ಋಗ್ವೇದವನ್ನು 'ಜನಪದ ಕಾವ್ಯ'ವೆಂದು ಬಣ್ಣಿಸಿದ್ದಾರೆ. ಲೇಖಕರು ಹೇಳಿರುವಂತೆ 'ಜನಪದ ಕಾವ್ಯ'ವಾಗಿದ್ದರೂ ಅದು ಜನಪದರಿಂದ ದೂರ ಉಳಿದಿರುವುದು ಸತ್ಯ. ಲೇಖಕರು ಋಗ್ವೇದದ ಅನೇಕ ಸೂಕ್ತಗಳಲ್ಲಿರುವ ಮುಖ್ಯವಾದ ಮಂತ್ರಗಳ ಅರ್ಥವನ್ನು ಸರಳ ಕನ್ನಡ ಭಾಷೆಯಲ್ಲಿ ವಿವರಿಸಿದ್ದಾರೆ. ಋಗ್ವೇದ ಸಾಹಿತ್ಯವನ್ನಷ್ಟೇ ಅಲ್ಲದೆ ಋಗ್ವೇದ ಕಾಲದ ಸಾಮಾಜಿಕ ರಚನೆಯನ್ನು ಪ್ರಸ್ತಾಪಿಸಿದ್ದಾರೆ; ಬುಡಕಟ್ಟು ಜನಾಂಗದ ಜೀವನಶೈಲಿಯ ಹಿನ್ನೆಲೆಯಲ್ಲಿ ಋಗ್ವೇದ ಸಾಹಿತ್ಯ ರಚನೆಯಾಗಿರುವ ವಾಸ್ತವವನ್ನು ಅರುಹಿದ್ದಾರೆ. ೧೦೨೮ ಸೂಕ್ತಗಳನ್ನು ಹತ್ತು ಮಂಡಲಗಳಲ್ಲಿ ಓರಣವಾಗಿ ಜೋಡಿಸಿರುವ ವಿಧಾನವನ್ನು ಲೇಖಕರು ಸಕಾರಣವಾಗಿ ಮೆಚ್ಚಿಕೊಂಡಿದ್ದಾರೆ.

ಸಾಮಾಜಿಕ ವಿಕಾಸದ ಪ್ರಾರಂಭದ ಹಂತದಲ್ಲಿ ಕಂಡುಬರುವ ಬುಡಕಟ್ಟು ಜನಾಂಗದವರು ಪ್ರಕೃತಿಯ ಆರಾಧಕರಾಗಿದ್ದರು. ಜೀವನಕ್ಕೆ ಅವಶ್ಯವಾದ ಗಾಳಿ, ನೀರು, ಬೆಂಕಿ ಮತ್ತು ಆಹಾರಕ್ಕೆ ಅವರು ಹೆಚ್ಚು ಮಹತ್ವ ನೀಡುತ್ತಿದ್ದರು. ಪ್ರಾಕೃತಿಕ ರಮಣೀಯತೆಗೆ ಮನಸೋತ ಅವರು ಪ್ರಾಕೃತಿಕ ವಿಕೋಪಗಳ ರೌದ್ರ ರೂಪವನ್ನೂ ಕಂಡಿದ್ದರು. ದುರ್ಗಮ ಪ್ರದೇಶಗಳಲ್ಲಿ ಜೀವಿಸುತ್ತಿದ್ದ ಅವರಿಗೆ 'ಅಭದ್ರತೆ' ಕಾಡುತ್ತಿತ್ತು. ಅದಕ್ಕಾಗಿಯೇ ಅವರು ರಕ್ಷಣೆ ನೀಡುವಂತೆ ಬಲಿಷ್ಠನಾದ ಇಂದ್ರನನ್ನು ಪ್ರಾರ್ಥಿಸುತ್ತಾರೆ. ಪ್ರಕೃತಿಯಲ್ಲಿ ಕಾಣುವ ಶಕ್ತಿಮೂಲಗಳಾದ ಸೂರ್ಯ, ರಾತ್ರಿ, ಅಗ್ನಿ, ನೀರು ಮತ್ತು ವಾಯುಗಳನ್ನು ದೇವತೆಗಳೆಂದು ಭಾವಿಸಿ ಆರಾಧಿಸುತ್ತಿದ್ದರು. ಪ್ರಕೃತಿಯನ್ನು ಓಲೈಸಲು ಅವರು ಹಲವು ಮಾಂತ್ರಿಕ ಆಚರಣೆಗಳನ್ನು ಆಚರಿಸುತ್ತಿದ್ದರು ಎಂಬ ಅಂಶವು ಈ ಕೃತಿಯಲ್ಲಿ ವ್ಯಕ್ತವಾಗಿದೆ. ಮಾಂತ್ರಿಕ ಆಚರಣೆಗಳು




ತದನಂತರ ಯಜ್ಞದ ಸ್ವರೂಪವನ್ನು ಪಡೆದವು ಎಂದು ಲೇಖಕರು ಅಭಿಪ್ರಾಯಪಟ್ಟಿದ್ದಾರೆ. ಋಗ್ವೇದವು 'ಪಶು ಸಂಗೋಪನಾ ಹಂತದಿಂದ ಕೃಷಿಯತ್ತ ವಿಕಾಸಗೊಂಡ ನಾಗರಿಕತೆಯನ್ನು ಪ್ರತಿನಿಧಿಸುತ್ತದೆ' ಎಂಬ ಅಂಶವನ್ನು ಲೇಖಕರು ದಾಖಲಿಸಿದ್ದಾರೆ.

ಋಗ್ವೇದದ ಮತ್ತೊಂದು ಮುಖ್ಯ ಪರಿಕಲ್ಪನೆಯಾದ 'ಋತ'ವನ್ನು ಲೇಖಕರು ಓದುಗರಿಗೆ ಸವಿಸ್ತಾರವಾಗಿ ಪರಿಚಯಿಸಿದ್ದಾರೆ. ಪ್ರಕೃತಿಯು ನಿರಂತರವಾಗಿ ಚಲನೆಯಲ್ಲಿದೆ ಹಾಗೂ ಆ ಚಲನೆಯು ನಿಯಮಬದ್ಧವಾಗಿ ನಡೆದಿದೆ ಎಂಬ ಸತ್ಯವನ್ನು ಋಗ್ವೇದವು ಅತಿ ಪ್ರಾಚೀನ ಕಾಲದಲ್ಲೇ ಪ್ರಕಟಿಸಿದೆ ಎಂಬುದು ಗಮನಾರ್ಹ. ಅದು ವಿಜ್ಞಾನದ ಮೊದಲ ಮೆಟ್ಟಿಲು. ಆ ನಿಯಮವು 'ಅಬಾಧಿತ' ಮತ್ತು ಯಾವುದೇ ಪ್ರಭಾವಕ್ಕೆ ಒಳಗಾಗದು ಎಂಬ ಅಂಶವನ್ನು ನಾವು ಮನಗಾಣಬಹುದು. ನಮ್ಮ ಸುತ್ತಲಿನ ಪರಿಸರದಲ್ಲಿ ನಿಯಮಿತವಾಗಿ, ಕ್ರಮಬದ್ಧವಾಗಿ, ಸಂಭವಿಸುವ ಋತುಗಳ ಬದಲಾವಣೆಗಳನ್ನು 'ಋತ' ಎಂಬ ಪರಿಕಲ್ಪನೆ ಒಳಗೊಂಡಿದೆ. ಪ್ರಕೃತಿಯನ್ನು ತಿಳಿದು ಪ್ರಯೋಜನ ಪಡೆಯಬಹುದು. ಆದರೆ, ಯಜ್ಞ, ಯಾಗಾದಿಗಳ ಮುಖಾಂತರ ತಣಿಸಿ ಏನನ್ನೂ ಪಡೆಯಲು ಸಾಧ್ಯವಿಲ್ಲ ಎಂಬುದು ಎಲ್ಲರೂ ಅರಿತುಕೊಳ್ಳಬೇಕಾದ ಸತ್ಯ. ಪ್ರಾಚೀನ ಮಾಂತ್ರಿಕತೆಯು ಮಾನಸಿಕ ಸಮಾಧಾನ ನೀಡಿ ಜನರನ್ನು ಶ್ರದ್ಧೆಯಿಂದ ಶ್ರಮಿಸಲು ಪ್ರೇರೇಪಿಸುತ್ತಿತ್ತು. ಯಜ್ಞದಲ್ಲಿ ಆ ಅಂಶವು ಕಾಣೆಯಾಗಿದೆ.

ನಂತರದ ಅಧ್ಯಾಯಗಳಲ್ಲಿ ಲೇಖಕರು ಋಗ್ವೇದದ ಸೂಕ್ತಗಳಲ್ಲಿ ಜೂಜುಗಾರನು ಅನುಭವಿಸುವ ನಿಂದೆ ಮತ್ತು ತಿರಸ್ಕಾರ ಹಾಗೂ ಜೂಜಿನ ಸೆಳೆತದಿಂದ ಪಾರಾಗಲಾರದಂತಹ ವ್ಯಸನೀಯ ಮನಃಸ್ಥಿತಿಯ ಪ್ರಸ್ತಾಪಗಳನ್ನು ವಿವರಿಸಿದ್ದಾರೆ. ಕಾಡುಮೇಡುಗಳಲ್ಲಿ ಅಲೆದು ಗಿಡಮೂಲಿಕೆಗಳನ್ನು ಸಂಗ್ರಹಿಸಿ, ಔಷಧಿಗಳನ್ನು ತಯಾರಿಸಿ, ರೋಗಿಗಳನ್ನು ಔಷಧಿಗಳ ಪ್ರಯೋಗದಿಂದ ಗುಣಪಡಿಸುವ ವೈದ್ಯರನ್ನು ಋಗ್ವೇದವು ಗೌರವದಿಂದ ಕಂಡಿದೆ. ರುದ್ರನನ್ನು 'ವೈದ್ಯರಲ್ಲಿ ಅತಿ ದೊಡ್ಡ ವೈದ್ಯ ನೀನು' ಎಂದು ಹೊಗಳಲಾಗಿದೆ. ಋಗ್ವೇದದ ಕಾಲದಲ್ಲಿ ಹೊಗಳಿಕೆಗೆ ಪಾತ್ರವಾಗಿದ್ದ ವೈದ್ಯಕೀಯ ವೃತ್ತಿ ಯಜುರ್ವೇದದಲ್ಲಿ ತೆಗಳಿಕೆಗೆ ಪಾತ್ರವಾಗಿದೆ ಎಂಬ ಸ್ವಾರಸ್ಯಕರ ಬದಲಾವಣೆಯನ್ನು ಲೇಖಕರು ಗಮನಿಸಿದ್ದಾರೆ. ಚಾರಿತ್ರಿಕವಾಗಿ ಸಮಾಜ ವಿಕಾಸದ ಹಂತಗಳನ್ನು ಅದು ನಿಖರವಾಗಿ ಸೂಚಿಸುತ್ತದೆ.

ವೇದಗಳ ನಂತರ ರಚನೆಯಾದ ಉಪನಿಷತ್ತು, ಭಗವದ್ಗೀತೆ, ಮುಂತಾದ ಗ್ರಂಥಗಳು ಜಾತಿ, ವರ್ಣ ವಿಭಜನೆಗಳ ಹಿನ್ನೆಲೆಯನ್ನು ಹೊಂದಿದ್ದವು. ಪುರುಷಸೂಕ್ತವು ವರ್ಣ ವಿಭಜನೆಯನ್ನು ಆಧರಿಸಿ ರಚನೆಯಾದ ಮೊದಲ ಸೂಕ್ತ ಎಂದು ಹೇಳಬಹುದು. ಋಗ್ವೇದ ಸೂಕ್ತಗಳ, ಮಂತ್ರಗಳ ಅರ್ಥೈಸುವಿಕೆಯೊಂದಿಗೆ ಆ ಕಾಲಘಟ್ಟದ ಸಾಮಾಜಿಕ ರಚನೆ ಮತ್ತು ಸಂಬಂಧಗಳ ವಿಸ್ತೃತ ಪರಿಚಯವನ್ನು ಲೇಖಕರು ನೀಡಿದ್ದಾರೆ. ಇದೇ ಕಾರಣಕ್ಕಾಗಿ ಕೃತಿಯು ಸಂಗ್ರಹಯೋಗ್ಯವೆಂದು ಭಾವಿಸುತ್ತೇನೆ.

*ಬೆಂಗಳೂರು* **ಶಂಕರನಾರಾಯಣ**

✉ ಜಲತರಂಗದಂತೆ ಧ್ವನಿ ಎಬ್ಬಿಸುತ್ತಿರುವ ಕರ್ನಾಟಕದಲ್ಲಿನ ಜಲವಿವಾದಗಳಿಗೆ ತೆರೆ ಎಳೆಯದೆ ನಿವೃತ್ತಿಯೇ ಇರದು ಎಂಬ ಸಂಪಾದಕೀಯ ಬರಹ 'ಹೊಸತು'ವಿನ (ಸೆಪ್ಟೆಂಬರ್ ಸಂಚಿಕೆ) ಮಹಾದಾಯಿ ರೈತ ಹೋರಾಟದಲ್ಲಿ ಪೊಲೀಸ್ ದೌರ್ಜನ್ಯಕ್ಕೆ ಒಳಗಾದ ವೃದ್ಧ ಮಹಿಳೆಯೋರ್ವರ ಮುಖಾರವಿಂದದಲ್ಲಿ ರಾರಾಜಿಸಿದ ಪತ್ರಿಕೆ ಓದಿಸಿಕೊಳ್ಳುವ ಆಸಕ್ತಿಯನ್ನು ಕೆರಳಿಸಿತ್ತು. ಹಾಗೆಯೇ ಹಲವು ವರ್ಷಗಳ ಹಿಂದಿನಿಂದಲೇ ಸರ್ವಪಕ್ಷಗಳ ಆಡಳಿತ ಕಾಲದಲ್ಲೂ ದಸರ ನಾಡ ಹಬ್ಬದ ಹಾಗೆ ಇದು ಒಂದು ಸಾಂಸ್ಕೃತಿಕ ಕಾರ್ಯಕ್ರಮ ಎಂಬಂತೆ ರಾತ್ರಿ ಹಗಲು ಯಾಂತ್ರಿಕ ಮಾಧ್ಯಮ ಹಾಗೂ ಅಕ್ಷರ ವಿನ್ಯಾಸಗಳಲ್ಲಿ ಕೇಳಿಬರುತ್ತವೆ. ಇದ್ದುದನ್ನು ಪೂರ್ತಿ ವಿರಾಮ ಎಳೆಯದಿದ್ದರೆ ಪರಿಹಾರ ಸಿಗದು ಎಂಬುದಕ್ಕೆ ಪತ್ರಿಕೆ ಧ್ವನಿಯಾಗಿ ಮೂಡಿಬಂದಿದೆ.

'ಮೆಲ್ಬರ್ನ್ ಚೆಲುವೆಯರು' ಲೇಖನ ಭಾರತೀ ಕಾಸರಗೋಡು ಅವರ ಪ್ರವಾಸಿ ಸಚಿತ್ರ ಬರಹ ಓದಿದಾಗ ಅಲ್ಲಿಯ ನಿರೀಕ್ಷಣ ಪರಿಣಾಮಗಳನ್ನು ಬಣ್ಣಿಸಿದ ಶೈಲಿ

ಮನತುಂಬಿ ಬರುವಂತಿತ್ತು. ನಿವೃತ್ತ ನ್ಯಾಯಾಧೀಶರಾದ ಕೋ. ಚೆನ್ನಬಸಪ್ಪನವರ ಬರಹವನ್ನು 'ಕರ್ನಾಟಕ ಸಾಹಿತ್ಯ ಲೋಕದ ಚಿರಸ್ಮರಣೀಯರು' ಎನ್ನುವ ಬರಹ ಪುಸ್ತಕವೊಂದರ ವಿಮರ್ಶೆಯ ನುಡಿಗಳಾಗಿದ್ದವು. ಹೌದು, ವಿ. ಸೋಮಸುಂದರಿ ಎಂಬ ಶಿಕ್ಷಕ ರಂಗದ ಮಹಿಳೆಯೋರ್ವರು ಅಖಿಲ ಕರ್ನಾಟಕ ಸದ್ಭಾವನ ಶಿಕ್ಷಕರ ಪರಿಷತ್‌ನವರಿಗಾಗಿ ನೀಡಿದ ಚೊಚ್ಚಲ ಕೃತಿಯಾಗಿತ್ತು. ಕೃತಿಯನ್ನು ವಿಮರ್ಶಕರನ್ನು ಇದೊಂದು ಮೌಲ್ಯವುಳ್ಳ, ಓದಿಕೊಳ್ಳಲೇಬೇಕಾದ ಕೃತಿಯೆಂಬುದನ್ನು ವಿವರಿಸಿರುವುದು ನನ್ನಲ್ಲೂ ಆಸಕ್ತಿ ಹುಟ್ಟಿಸಿತು. ಹಾಗೆಯೇ ಅಡ್ಡನಡ್ಕ ಕೃಷ್ಣ ಭಟ್ ಅವರ ಕೃತಿಗಳು, ಋಗ್ವೇದ ಪ್ರವೇಶಿಕೆ ಹಾಗೂ ಅಲ್ಲಾಹ್‌ನಿಂದ... ಆಕಾಂಕ್ಷೆಗೆ ಒತ್ತು ನೀಡುವುದು ನಿಜ.

*ಕಾಸರಗೋಡು* ***ಕೀರಿಕ್ಕಾಡು ವನಮಾಲ ಕೇಶವ ಭಟ್ಟ***

## ಇಳಿಯಲಿ ಮಕ್ಕಳ ಬೆನ್ನಹೊರೆ

೨೦೦೧ರಲ್ಲಿ ಸ್ಕೂಟರ್ ಮೇಲೆ ಹೊರಟಾಗ ೫ನೇ ವರ್ಗದಲ್ಲಿ ಓದುತ್ತಿದ್ದ ಬಾಲಕನೊಬ್ಬ ಭಾರವಾದ ಪಾಟೀಚೀಲ ಹೊತ್ತುಕೊಂಡು ಶಾಲೆಗೆ ಹೋಗುವುದನ್ನು ಗಮನಿಸಿ ಅವನನ್ನು ನನ್ನ ವಾಹನದ ಹಿಂದಿನ ಸೀಟಿನಲ್ಲಿ ಹತ್ತಲು ಸೂಚಿಸಿ ಅವನ ಬ್ಯಾಗನ್ನು ಮುಂಭಾಗದಲ್ಲಿಟ್ಟುಕೊಳ್ಳಲು ತೆಗೆದುಕೊಂಡಾಗ ಅದರ ತೂಕ ಸುಮಾರು ೨೦ ಕಿಲೋ ಎಂಬುದು ನನ್ನ ಅನುಭವಕ್ಕೆ ಬಂದಿತು.

ಪ್ರತಿವರ್ಷ ಬೇಸಿಗೆಯ ರಜೆಯ ನಂತರ ಶಾಲೆಗಳು ಪುನರಾರಂಭವಾದಾಗ ಮಕ್ಕಳ ಪುಸ್ತಕ ಭಾರದ ಬಗ್ಗೆ, ಅದರಿಂದ ವಿದ್ಯಾರ್ಥಿಗಳ ಮೇಲಾಗುವ ವ್ಯತಿರಿಕ್ತ ಪರಿಣಾಮ ಹಾಗೂ ಅದನ್ನು ತಪ್ಪಿಸುವ ಕುರಿತು ಚರ್ಚೆ ನಡೆದರೂ ಪರಿಹಾರವನ್ನು ಶಿಕ್ಷಣ ತಜ್ಞರು ಸೂಚಿಸಿರಲಿಲ್ಲ.

ಈ ಬಗ್ಗೆ ರೋಣದ ವಕೀಲ ಮಿತ್ರರೊಂದಿಗೆ ಚರ್ಚಿಸಿ ದಿನಾಂಕ ೧೮-೦೬-೨೦೦೧ರಂದು ಅಂದಿನ ರಾಜ್ಯ ಸರಕಾರದ ಶಿಕ್ಷಣ ಸಚಿವರಾಗಿದ್ದ, ಸನ್ಮಾನ್ಯ ಶ್ರೀ ಹೆಚ್. ವಿಶ್ವನಾಥರವರಿಗೆ ಪತ್ರ ಬರೆದು, ಪಾಟೀಚೀಲದ ಭಾರವನ್ನು ಕಡಿಮೆ ಮಾಡುವ ಬಗ್ಗೆ ಸರ್ವಸಮ್ಮತವಾಗುವ ಮೂರು ಅಂಶಗಳನ್ನು ಸೂಚಿಸಿ ಮನವಿ ಮಾಡಿಕೊಂಡಿದ್ದೆ. ನನ್ನ ಮನವಿಗೆ ಸಾರ್ವಜನಿಕರು, ಪಾಲಕರು ಬೆಂಬಲಿಸಿದ್ದರಿಂದ ಬೆನ್ನಹೊರೆ ತಪ್ಪಿಸಲು ಕೈಗೊಳ್ಳಬೇಕಾದ ಅಂಶಗಳ ಬಗ್ಗೆ ವರದಿ ಸಲ್ಲಿಸಲು ರಾಜ್ಯ ಸರಕಾರವು ೨೦೦೨ರಲ್ಲಿ ಪ್ರೊ॥ ಯಶ್‌ಪಾಲ್ ಸಮಿತಿಯನ್ನು ನೇಮಕ ಮಾಡಿ ಸೂಕ್ತ ಸಮಯೋಚಿತ ಸಲಹೆಗಳನ್ನು ನೀಡಲು ಕೇಂದ್ರ ಸರ್ಕಾರ ಕೈಗೊಂಡಿದ್ದ ಕ್ರಮವನ್ನು ಉದಾಹರಿಸಿತ್ತು.

ಪ್ರೊ॥ ಯಶ್‌ಪಾಲ್ ಸಮಿತಿ ಸರಕಾರಕ್ಕೆ ೨೦೦೩ರಲ್ಲಿ ವರದಿಯನ್ನು ಸಲ್ಲಿಸಿ ಮಕ್ಕಳಿಗೆ ಮನೆಗೆಲಸ ನೀಡದಿರುವಂತೆ ಹಾಗೂ ಪಠ್ಯಪುಸ್ತಕಗಳನ್ನು ಶಾಲೆಗೆ ತರದಿರುವಂತೆ ಸೂಚಿಸಲು ಸಲಹೆ ಮಾಡಿತ್ತು. ಸಮಿತಿಯ ವರದಿ ಹಾಗೂ ಪಾಲಕರ ಸಲಹೆಗಳ ಬಗ್ಗೆ ಸರಕಾರಗಳು ಯಾವುದೇ ನಿರ್ಧಾರಕ್ಕೆ ಬಾರದೆ ಮಣಭಾರದ ಪಾಟೀಚೀಲಗಳನ್ನು ಶಾಲೆಗೆ ಹೊತ್ತೊಯ್ಯುವುದು ಅನಿವಾರ್ಯವಾಗಿದೆ.

ಪಾಟೀಚೀಲಗಳ ಭಾರದ ಹೊರೆ ಕಡಿಮೆ ಮಾಡುವ ಕೆಲವು ವ್ಯಾವಹಾರಿಕ, ಸಮಯೋಚಿತ, ಸೂಕ್ತ ಸಲಹೆಗಳನ್ನು ಈ ಮೂಲಕ ಕೊಡಲಾಗಿದೆ. ಈ ಬಗ್ಗೆ ರಾಜ್ಯ ಸರಕಾರ, ಪಾಲಕರು, ಶಿಕ್ಷಣ ತಜ್ಞರು, ಶಾಲೆಗಳ ವ್ಯವಸ್ಥಾಪಕರು, ಶಿಕ್ಷಕರೊಂದಿಗೆ ಸಕಾರಾತ್ಮಕವಾಗಿ ಚರ್ಚಿಸಿ ಚಿಂತನ ಮಾಡಿ ಜಾರಿಗೆ ತಂದಲ್ಲಿ ವಿದ್ಯಾರ್ಥಿಗಳ ಪಾಟೀಚೀಲದ ಹೊರೆಯನ್ನು ಗಮನಾರ್ಹವಾಗಿ ಇಳಿಸಬಹುದಾಗಿದೆ :

೧. ಶಾಲೆಗಳಲ್ಲಿ ಪ್ರತಿದಿನ ಸಾಮಾನ್ಯವಾಗಿ ಐದು ವಿಷಯಗಳನ್ನು ಬೋಧಿಸಲಾಗುವುದು. ಪ್ರತಿಯೊಂದು ವಿಷಯಕ್ಕೆ ಒಂದೊಂದು ನೂರು ಪುಟಗಳ ಕಚ್ಚಾನೋಟ್ ಪುಸ್ತಕ ಮಾಡಿ ಅದರಲ್ಲಿ ಶಾಲೆಯಲ್ಲಿ ಮಾಡಿದ ಪಾಠಗಳ ಸಂಕ್ಷಿಪ್ತ ವಿವರ ಬರೆದುಕೊಂಡು ಅದನ್ನು ವಿದ್ಯಾರ್ಥಿ ಮನೆಯಲ್ಲಿ ೨೦೦ ಪುಟಗಳ ನೋಟು ಪುಸ್ತಕಗಳಲ್ಲಿ ಬರೆಯಲು ಸೂಚಿಸಬೇಕು.

೨. ಶಾಲೆಯ ವತಿಯಿಂದ ಡೈರಿ ಒದಗಿಸಿ ಅದರಲ್ಲಿ ಅವರು ಮಾಡಬೇಕಾದ ಮನೆಗೆಲಸದ ವಿವರ ಬರೆದು ಕಳಿಸಬೇಕು. ಮನೆಯಲ್ಲಿ ವಿದ್ಯಾರ್ಥಿ ಪ್ರತಿದಿನ ಮನೆಗೆಲಸ ಮಾಡಿದ ಬಗ್ಗೆ ಪಾಲಕರು ಡೈರಿಯಲ್ಲಿ ಸಹಿ ಮಾಡಿ ಕಳುಹಿಸುವುದನ್ನು ಕಡ್ಡಾಯಗೊಳಿಸಬೇಕು.

೩. ಮನೆಗೆಲಸ ಮಾಡಿಸುವ ಜವಾಬ್ದಾರಿಯನ್ನು ಪಾಲಕರ ಮೇಲೂ ಹೊರಿಸುವುದರಿಂದ ಅವರು ಕೂಡ ತಮ್ಮ ಮಕ್ಕಳ ಅಭ್ಯಾಸದತ್ತ ಗಮನ ಹರಿಸಲು ಅವಕಾಶ ಮಾಡಿಕೊಟ್ಟಂತೆ ಆಗುತ್ತದೆ.

೪. ವಾರದ ಕೊನೆಯ ದಿನವಾದ ಶನಿವಾರ ದಂದು ವಾರವಿಡೀ ಮಾಡಿದ ಅಧ್ಯಯನದ ಬಗ್ಗೆ ವಿದ್ಯಾರ್ಥಿಗಳಿಗೆ ಶಿಕ್ಷಕರು ಪುನರ್ ಅಧ್ಯಯನ ಮಾಡಿಸಬೇಕು. ಅಂದು ಮನೆಗೆಲಸದ ನೋಟು ಪುಸ್ತಕಗಳನ್ನು ಮಾತ್ರ ತರುವಂತೆ ಸೂಚಿಸಿ ವಿದ್ಯಾರ್ಥಿ ಮಾಡಿದ ಮನೆಗೆಲಸವನ್ನು ಪರಿಶೀಲಿಸಬೇಕು. ಹೀಗೆ ಮಾಡುವುದರಿಂದ ಪ್ರತಿದಿನ ವಿದ್ಯಾರ್ಥಿ ಹೊರಬೇಕಾದ ಪುಸ್ತಕಗಳ ಸಂಖ್ಯೆ ೩೦ರ ಬದಲಿಗೆ ಕೇವಲ ೧೦ ಪುಸ್ತಕಗಳಿಗೆ ಇಳಿಯುವುದು.

೫. ಪ್ರತಿ ತಿಂಗಳು ಒಂದು ದಿನ ಪಾಲಕರ ಸಭೆಯನ್ನು ಶಾಲೆಗಳ ವ್ಯವಸ್ಥಾಪಕರು ಏರ್ಪಡಿಸಿ ಅವರ ಮಕ್ಕಳ ಕ್ರಿಯಾಶೀಲತೆ, ನ್ಯೂನತೆಗಳ ಬಗ್ಗೆ ಶಾಲೆಯ ವ್ಯವಸ್ಥಾಪಕರು, ಶಿಕ್ಷಕರು ಪಾಲಕರೊಂದಿಗೆ ಮುಕ್ತಮನ ಸಭೆಗೆ ಪಾಲಕರ ಹಾಜರಾತಿಯನ್ನು ಕಡ್ಡಾಯಗೊಳಿಸಬೇಕು.

*ಬೆಂಗಳೂರು* ***ಬಸವರಾಜ ಹುಡೇದಗಡ್ಡಿ***

## ಸಂಗೀತ !

ಗಾಂಧೀಜಿಯನ್ನು ಕುರಿತ ತಮ್ಮ ಒಳ್ಳೆಯ ಲೇಖನದಲ್ಲಿ ಜ. ಹೊ. ನಾ. ಅವರು 'ಚರಕ'ದ ಮಹತ್ವವನ್ನು ತಿಳಿಸಿದ್ದಾರೆ. ಗಾಂಧೀಜಿಗೆ ಸಂಗೀತದ (ಒಟ್ಟಾರೆ ಕಲೆಯ) ಬಗೆಗೆ ಅಷ್ಟೇನೂ ಗೌರವವಿರಲಿಲ್ಲ. ಅವರು ಹೇಳುತ್ತಾರೆ : "ನನ್ನ ಪಾಲಿಗೆ ಚರಕದ ಸದ್ದಿಗಿಂತ ಮೇಲಾದ ಸಂಗೀತವಿಲ್ಲ!" ಒಮ್ಮೆ ಕೆ. ವೆಂಕಟಪ್ಪನವರ ಚಿತ್ರಗಳನ್ನು ಮೆಚ್ಚಿಕೊಂಡೂ ಕಡೆಯಲ್ಲಿ ಅವರಿಗೆ ಹೇಳಿದರಂತೆ : "ಬದುಕಿನಲ್ಲಿ ರಾಟೆಯ ಸ್ಥಾನವನ್ನೂ ಚಿತ್ರಿಸಿ!" (ಗಾಂಧೀಜಿಯ ದೃಷ್ಟಿಯಲ್ಲಿ ಉಪಯುಕ್ತತೆಯೆ ಕಲೆಯ ಮಾನದಂಡ.)

*ಮೈಸೂರು* ***ಸಿಪಿಕೆ***

## ಗಾಂಧೀಜಿಯವರು ಸ್ವಾಮಿ ವಿವೇಕಾನಂದರಿಂದ ಪ್ರಭಾವಿತರಾದರೆಂಬ ಮಿಥ್ಯಾ

ಅಕ್ಟೋಬರ್ ೨೦೧೬ರ 'ಹೊಸತು' ಪತ್ರಿಕೆಯಲ್ಲಿ ಪ್ರಕಟವಾದ ಜ. ಹೊ. ನಾರಾಯಣಸ್ವಾಮಿ (ಜ.ಹೊ.ನಾ) ಅವರ 'ಮಹಾತ್ಮಾ ಗಾಂಧೀಜಿ – ಮರೆಯಲಾಗದ ಮರೆಯಬಾರದ ಮನುಕುಲದ ಮಂಗಳಮೂರ್ತಿ' ಲೇಖನ ಕುರಿತು ಈ ಪತ್ರ.

ಲೇಖನ ಗಾಂಧೀಜಿ ಬಗ್ಗೆಯಾಗಿದ್ದರೂ ಸಹ ಲೇಖಕರು ತಮಗೆ ರುಚಿಸುವುದನ್ನು ತುರುಕಿ, ತಮಗೆ ಇಷ್ಟವಾದವರನ್ನು ಅವಶ್ಯಕತೆಗಿಂತಲೂ ಹೆಚ್ಚಾಗಿ ಎಳೆದುತಂದು ಲೇಖನವನ್ನು ಲಂಬಿಸಿದ್ದಾರೆ. ಆ ಮೂಲಕ ಗಾಂಧೀಜಿಯವರ ಸ್ವಯಂ ಸಾಧನೆಯನ್ನು ಗೌಣವಾಗಿಸಿದ್ದಾರೆ .

ಉದಾಹರಣೆಗೆ, ಅನಪೇಕ್ಷಿತವಾಗಿ ಡಾ॥ ರಾಮ ಮನೋಹರ ಲೋಹಿಯಾ ಅವರಿಗೆ ಲೇಖನದಲ್ಲಿ ಅವಕಾಶ ಕಲ್ಪಿಸಿದ್ದಾರೆ. ಅಲ್ಲದೆ ಆತ್ಮಶಕ್ತಿ ಬಗ್ಗೆ ಪ್ರೊ॥ ಗಿಲ್ಬರ್ಟ್ ಮುರ್ರೆಯವರ ವ್ಯಾಖ್ಯಾನವನ್ನು ಉಲ್ಲೇಖಿಸಿದ್ದಾರೆ ಹಾಗೂ ಗಾಂಧೀಜಿಯವರ ನೆಪದಲ್ಲಿ ಸ್ವಾಮಿ ವಿವೇಕಾನಂದರನ್ನು ವಿಜೃಂಭಣೆ ಮಾಡಿದ್ದಾರೆ.

ಮುಂದುವರಿಯುತ್ತಾ ಜ.ಹೊ.ನಾ. ಅವರು ಈ ರೀತಿ ಬರೆಯುತ್ತಾರೆ : 'ಗಾಂಧೀಜಿಯವರು ಪ್ರಭಾವಿತರಾದದ್ದು, ದೇಶದ ಮೇಲಿದ್ದ ಗಾಂಧಿ ಅವರ ಪ್ರೀತಿ ಸಾವಿರಪಟ್ಟು ಹೆಚ್ಚಾದದ್ದು, ಗಾಂಧೀಜಿಯವರಿಗೆ ಆತ್ಮಶಕ್ತಿ ಬಂದದ್ದು ಸ್ವಾಮಿ ವಿವೇಕಾನಂದರ ಸಮಗ್ರ ಸಾಹಿತ್ಯವನ್ನು ಹಸಿದ ಹಂಬಲದಿಂದ ಅಧ್ಯಯನಮಾಡಿ ಅರಿತುಕೊಂಡಿದ್ದರಿಂದ' ಎಂಬುದಾಗಿ.

ಆದರೆ ನನಗೆ ತಿಳಿದಂತೆ ಗಾಂಧೀಜಿಯವರ ಬಗೆಗೆ ಬಂದಿರುವ ವಿಪುಲ ಸಾಹಿತ್ಯದಲ್ಲಿ ಎಲ್ಲಿಯೂ ಗಾಂಧೀಜಿ ವಿವೇಕಾನಂದರಿಂದ ಪ್ರಭಾವಿತರಾಗಿರುವುದು ದಾಖಲಾಗಿಲ್ಲ.

ಗಾಂಧೀಜಿಯವರು ಪ್ರಭಾವಿತರಾಗಿರುವುದು ಜೀಸಸ್, ಮಹಮ್ಮದ್, ಟಾಲ್‌ಸ್ಟಾಯ್, ರಸ್ಕಿನ್, ಬುದ್ಧ ಮುಂತಾದವರಿಂದ ಎಂಬುದು ದಾಖಲಾಗಿದೆ.

ಗಾಂಧೀಜಿ ವಿವೇಕಾನಂದರನ್ನು ಭೇಟಿಯಾಗಲು ಯತ್ನಿಸಿದಾಗ ಕಾರಣಾಂತರದಿಂದ ಸಾಧ್ಯವಾಗುವುದಿಲ್ಲ. ಈ ವಿಷಯ ಗಾಂಧಿಯವರ ಆತ್ಮ ಕಥನದಲ್ಲಿ ಪ್ರಸ್ತಾಪವಾಗಿದೆ.

ಸತ್ಯ ಹೀಗಿರುವಾಗ ಗಾಂಧೀಜಿ ವಿವೇಕಾನಂದರಿಂದ ಪ್ರಭಾವಿತರಾದರೆಂದು ದಾಖಲಿಸುವುದು ಸತ್ಯಕ್ಕೆ ಅಪಚಾರ ಮಾಡಿದಂತೆ. ಇತಿಹಾಸವನ್ನು ತಿರುಚಿದಂತಾಗುತ್ತದೆ. ಗಾಂಧೀಜಿಯವರ ಸ್ವಯಂ ಸಾಧನೆಯನ್ನು ಬೇರೆಯವರ ಹೆಸರಿಗೆ ವರ್ಗಾಯಿಸುವುದು ಅಪರಾಧವಾಗುತ್ತದೆ. ಗಾಂಧೀಜಿ ವಿವೇಕಾನಂದರನ್ನು ಕಾಪಿ ಮಾಡಿಲ್ಲ. ಗಾಂಧೀಜಿ ವಿವೇಕಾನಂದರಿಂದ ಪ್ರಭಾವಿತರಾದರೆಂಬುದು ಮಿಥ್ಯೆ.

*ಬೆಂಗಳೂರು* ***ಧರ್ಮರಾಜ ಎಂ. ಕೆ.***

# ಕ್ಷ-ಕಿರಣ

– ಸಾನ್ವಿ ಪಿ.







ಸರ್ಜಿಕಲ್ ಸ್ಟ್ರೈಕ್



# ಭಗವದ್ಗೀತೆ : ಒಂದು ಅವಲೋಕನ

# ೩. ವ್ಯವಸ್ಥೆಗೊಂದು ಊರುಗೋಲು

ಜಿ. ರಾಮಕೃಷ್ಣ

ತತ್ತ್ವಶಾಸ್ತ್ರಗ್ರಂಥಗಳು ಸಾಮಾನ್ಯವಾಗಿ 'ಸತ್ಯ' ಮತ್ತು 'ಅಂತಿಮ ಸತ್ಯ' ಯಾವುದೆಂದು ತಿಳಿಯಲು ಹಾಗೂ ತಿಳಿಸಲು ತವಕಿಸುತ್ತವೆ. ನಮ್ಮ ಅನುಭವಗಳಿಗೆಲ್ಲಾ ಆಕರವಾದ ಪ್ರಪಂಚದ ವಸ್ತುಗಳು ನಿಜಕ್ಕೂ ಸತ್ಯವೋ ಅಲ್ಲವೋ ಎಂಬುದು "ಸತ್ಯ" ಎಂಬುದರ ಮೀಮಾಂಸೆ; ಪಾರಮಾರ್ಥಿಕ ಸತ್ಯ ಎಂಬುದು "ಅಂತಿಮ ಸತ್ಯ" ಎಂದು ಅದನ್ನು ಸಂಕ್ಷಿಪ್ತವಾಗಿ ವ್ಯಾಖ್ಯಾನಿಸಿಕೊಳ್ಳಬಹುದು. ಉಪನಿಷತ್ತುಗಳ ಉದ್ದಾಲಕ ಮತ್ತು ಯಾಜ್ಞವಲ್ಕ್ಯ, ಉಪನಿಷತ್ತುಗಳನ್ನಾಧರಿಸಿ ಹೊರಬರಲಾಗಿದೆಯೆನ್ನಲಾದ ಗೀತೆಯ ಕರ್ತೃ, ವ್ಯಾಖ್ಯಾನಗಳನ್ನು ಬರೆದ ಆಚಾರ್ಯರು, ಎಲ್ಲರೂ ಸತ್ಯದತ್ತ ಕೊಂಡೊಯ್ಯು ವವರೇ. ಆದರೆ ಅವರೆಲ್ಲಾ ಹೇಳಿರುವುದು ಒಂದೇ ಸತ್ಯವಲ್ಲ, ಒಬ್ಬೊಬ್ಬರು ಒಂದೊಂದು ರೀತಿಯ ತಿಳಿವಳಿಕೆ ನೀಡಿದ್ದಾರೆ. ಅವುಗಳಲ್ಲಿ ಯಾವುದನ್ನು ಆಯ್ದುಕೊಳ್ಳ ಬೇಕೆಂಬುದರಲ್ಲಿ ಸ್ವಾತಂತ್ರ್ಯವು ಸಾಧ್ಯ. ಆದರೆ ಹುಟ್ಟಿನಿಂದಲೇ ಸತ್ಯವನ್ನು ಘೋಷಿಸಿ ಕೊಳ್ಳುವುದು ಸಂಪ್ರದಾಯ. ಬೇರೆ ಪರಂಪರೆಗಳ ತತ್ತ್ವಶಾಸ್ತ್ರಜ್ಞರೂ ಅದನ್ನೇ ಮಾಡ ಹೊರಟಿದ್ದಾರೆ. ಇಲ್ಲಿ ಮೂರು ಪ್ರಶ್ನೆಗಳು ಉದ್ಭವಿಸುತ್ತವೆ : (ಅ) ಅದು "ಅಂತಿಮ"ವೇ ? (ಆ) ಅದು "ಸತ್ಯ"ವೇ ? ಮತ್ತು (ಇ) ಹಾಗಿದ್ದರೆ "ಸತ್ಯ"ದ ಭಿನ್ನ ಭಿನ್ನ ಪ್ರತಿಪಾದನೆ ಗಳೇಕೆ ಬಂದಿವೆ ? ಅಥವಾ ಹಲವು "ಅಂತಿಮ ಸತ್ಯ"ಗಳು ಅಗತ್ಯವೇ, ಇರಬಲ್ಲವೇ ?

ಇತಿಹಾಸದಲ್ಲಿ ಮಾನವನ ಕುತೂಹಲ ಮತ್ತು ಆಶಯಗಳು ನೂರಾರು ಪ್ರತಿಫಲಿತ ವಾಗಿವೆ. ಅವನ್ನು ಸಾಮಾನ್ಯವಾಗಿ ಎರಡು ಗುಂಪುಗಳಾಗಿ ವಿಂಗಡಿಸಬಹುದು :

(ಅ) ವಿಶ್ವದ ವಿಸ್ಮಯ, ಮತ್ತು (ಆ) ಅಂದಂದಿನ ಸಮಾಜಗಳ ಸವಾಲುಗಳು ಮತ್ತು ಪರಿಹಾರ. ಹಿಂದೊಮ್ಮೆ ಸಂಗೀತಗಾರ ಟಿ. ಎಂ. ಕೃಷ್ಣ ರಾಗ–ತಾನ–ಪಲ್ಲವಿ ಪ್ರಸ್ತುತ ಪಡಿಸಲು ಒಂದು ಕೃತಿಯನ್ನು ಆಯ್ದುಕೊಂಡಿದ್ದರು. ಅದು ಯಾರ ಕೃತಿಯೆಂದು ನನಗೆ ತಿಳಿಯದು. "ಕಥಮಹಂ ಭಾವಯಾಮಿ" ಎಂದು ಆರಂಭಗೊಂಡ ಆ ಕೃತಿಯಲ್ಲಿ ವಿಶ್ವದ ಅಗಾಧ ವಿಸ್ಮಯದ ಚಿತ್ರಣವಿತ್ತು. ನದಿ, ಪರ್ವತ, ಸಾಗರ, ಗಿಡ, ಮರ, ಹೂವು ಇವೆಲ್ಲಾ ಏನು ಮತ್ತು ಹೇಗೆ ? ಅವನ್ನು ನಾವು ಅರ್ಥೈಸಿಕೊಳ್ಳುವುದೆಂತು ? ಋಗ್ವೇದ ದಲ್ಲಿ ಈ ಪ್ರಜ್ಞೆ ಕವಿಗಳನ್ನು ಗಾಢವಾಗಿ ಕಾಡಿದೆ. ಅದರ ಸೂತ್ರೀಕರಣವು 'ಋತ' ಎಂಬ ಪರಿಕಲ್ಪನೆಯಲ್ಲಿ ಕಾಣಸಿಗುತ್ತದೆ. ನಿರಂತರ ಚಲನೆ ಇರುವ ಪ್ರಕೃತಿಯಲ್ಲಿ ಯಾವುದೂ ಯಾದೃಚ್ಛಿಕವಲ್ಲ, ಎಲ್ಲಕ್ಕೂ ನಿಯಮವಿದೆ. ಆ ನಿಯಮ ನಮಗೆ ತಿಳಿದಿರಬಹುದು, ತಿಳಿದಿಲ್ಲದೆಯೂ ಇರಬಹುದು. ಒಂದು ಕಾಲಕ್ಕೆ ಮಳೆ, ಒಂದು ಕಾಲಕ್ಕೆ ಚಳಿ, ಇನ್ನೊಂದು ಕಾಲಕ್ಕೆ ವಸಂತ. ಹೀಗೆ ಪ್ರಕೃತಿಯಲ್ಲಿ ನಿಯಮಬದ್ಧ ಚಲನೆ ಇದೆ. ಯಾವುದೂ ಕಾರಣವಿಲ್ಲದೆ ಘಟಿಸಲಾರದು. ವಿಜ್ಞಾನದ ಕ್ಷೇತ್ರದಲ್ಲಿ ಪ್ರಕೃತಿಯ ನಿಯಮಬದ್ಧ ಲಕ್ಷಣ ಮತ್ತು ಕಾರ್ಯಕಾರಣ ನಿಯಮಗಳನ್ನು ಗೃಹೀತಾಂಶಗಳು ಅಥವಾ ಆಧಾರ ಪ್ರತಿಜ್ಞೆಗಳು ಎನ್ನುತ್ತಾರೆ. ಋತದ ಮೂಲ ಪರಿಕಲ್ಪನೆಯಲ್ಲಿ ಈ ಗ್ರಹಿಕೆಗಳಿವೆ. ರಾತ್ರಿಯಲ್ಲಿ ಕಾಣುವ ನಕ್ಷತ್ರಗಳು ಬೆಳಗ್ಗೆ ಎಲ್ಲಿ ಹೋದುವೆಂಬ ವಿಸ್ಮಯದಿಂದ ಹಿಡಿದು ಈ ವಿಶ್ವವೆಲ್ಲಾ ಆಗಿಬಂದದ್ದು ಹೇಗೆ ಎಂಬುದರವರೆಗಿನ ನೂರಾರು ವಿಸ್ಮಯಗಳು ಋಗ್ವೇದದ ಕವಿಗಳಿಗೆ ಚಿಂತನಾ ಸಾಮಗ್ರಿಯಾಗಿವೆ. ಅವೇ, ಉಪನಿಷತ್ತುಗಳಲ್ಲಿ ಬೇರೊಂದು ರೂಪದಲ್ಲಿ ಪ್ರಕಟವಾಗಿವೆ. ಒಂದೇ ವ್ಯತ್ಯಾಸವೆಂದರೆ, ಋಗ್ವೇದವು ತನ್ನ ಜ್ಞಾನದ ಪರಿಧಿಯಲ್ಲಿ ಉತ್ತರಗಳನ್ನು ಅರಸುತ್ತದೆ ಮತ್ತು ಉಪನಿಷತ್ತುಗಳು ತಮಗೆ ಉತ್ತರಗಳೆಲ್ಲಾ ಗೊತ್ತೆಂದು ಸಾರುತ್ತವೆ. ವಿಶ್ವದ ಅಸಾಧಾರಣ ವಿಸ್ಮಯವು ಒಂದು ಕಡೆಗಾದರೆ, ಅಂದಂದಿನ ಸಮಾಜಗಳ ಸವಾಲುಗಳು ಇನ್ನೊಂದು ಕಡೆ. ಉದಾಹರಣೆಗೆ, ಋಗ್ವೇದದ ಕವಿಗಳಿಗೆ ಪಣಿಗಳ ಬುಡಕಟ್ಟನ್ನು ಕಂಡರೆ ಏನೋ ಉಪೇಕ್ಷೆ, ಅಸಹ್ಯ. ಅವರು ಸದಾ ಕತ್ತಲಲ್ಲೇ ಬಿದ್ದಿರುವವರು, ಹಾಗೇ ಬಿದ್ದಿರಲಿ ಎಂದು ದೇವತೆಗೆ ಹೇಳುತ್ತಾರೆ ಕೂಡ. (ಋ. ೪.೫೧.೩ : ಉಚ್ಛಂತೀರದ್ಯ ಚಿತಯಂತ ಭೋಜಾನ್ ರಾಧೋದೇಯಾಯ ಉಷಸೋ ಮಘೋನೀಃ । ಅಚಿತ್ರೇ ಅಂತಃ ಪಣಯಃ ಸಸಂತು ಅಬುಧ್ಯಮಾನಾಸ್ತಮಸೋ ವಿ ಮಧ್ಯೇ ॥ ಅಂದರೆ, ಉಷೋದೇವತೆಯು ಬೆಳಕು ಹರಿಸಿ ಎಲ್ಲರಿಗೂ ಸಂಪತ್ತು ನೀಡುತ್ತಾಳೆ ಅಥವಾ ನೀಡುವಂತೆ ಪ್ರೇರೇಪಿಸುತ್ತಾಳೆ. ಆದರೆ ಪಣಿಗಳು ಮಾತ್ರ ಕತ್ತಲೆಯ ಕೂಪದಲ್ಲೇ ಉಳಿದುಬಿಡುತ್ತಾರೆ). ಇನ್ನೊಂದೆಡೆ ಕವಿಯು ಇಂದ್ರನಿಗೆ ಹೇಳುತ್ತಾನೆ, "ಯಜ್ಞದಲ್ಲಿ ನಿನಗೆ ಹವಿಸ್ಸು ನೀಡದವನಿದ್ದಾನಲ್ಲ, ಅವನನ್ನು ಹೊಡೆದುಹಾಕು; ಅವನ ಸಂಪತ್ತನ್ನು ನಮಗೆ ಕೊಡು, ಏಕೆಂದರೆ ಅದನ್ನು ಪಡೆಯಲು ನಾವು ಅರ್ಹರು" ಎಂದು (ಋ. ೧.೧೭೬.೪ : ಅಸುನ್ವಂತಂ ಸಮಂ ಜಹಿ ದೂಣಾಶಂ ಯೋ ನ ತೇ ಮಯಃ । ಅಸ್ಮಭ್ಯಮಸ್ಯ ವೇದನಂ ದದ್ಧಿ ಸೂರಿಶ್ಚಿದೋಹತೇ ॥). ಋಗ್ವೇದದ ಕಾಲದಿಂದ ಹಿಡಿದು ಮುಖೇಶ್ ಅಂಬಾನಿ ಕಾಲದವರೆಗೆ ಇಂತಹ ಭಾವನೆಗಳು ಪ್ರಕಟವಾಗುತ್ತಲೇ ಬಂದಿವೆ. ಕಾಳಗಗಳು ನಡೆದಿವೆ, ಸೋಲು–ಗೆಲುವುಗಳು ಉಂಟಾಗಿವೆ. ದಸ್ಯುಗಳು ಋಗ್ವೇದದ ಕಾಲದಿಂದ ಹಿಡಿದು ಇಂದಿನ ಜಾರ್ಖಂಡ್ ಗುಡ್ಡಗಾಡು ಜನರವರೆಗೆ ಪ್ರತಿಭಟಿಸುತ್ತಲೇ ಬಂದಿದ್ದಾರೆ. ಪ್ರಕೃತಿ ವಿಸ್ಮಯದಂತೆ ಇದು ಸಮಾಜ ವ್ಯವಸ್ಥೆಯ ವಿಸ್ಮಯ. ಎರಡು ವಿಸ್ಮಯಗಳಿಗೂ ಉತ್ತರ ಮತ್ತು ಪರಿಹಾರ ಕಂಡುಕೊಳ್ಳುವುದು, ದೊರಕಿಸಿಕೊಳ್ಳುವುದು; ಇದೇ ನಾಗರಿಕತೆ ಮತ್ತು ಸಂಸ್ಕೃತಿಗಳ ಉಗಮ ಹಾಗೂ ವಿಕಾಸಗಳ ಚರಿತ್ರೆ. "ಎಲ್ಲಾ ಭಗವಂತನ ಲೀಲೆ" ಎಂದು ಒಂದು ವಾಕ್ಯದಲ್ಲಿ ಉತ್ತರ ನೀಡುವವರು ಹಲವರಿದ್ದಾರೆ. ಮಿಲ್ಟನ್ ತನ್ನ ಮಹಾಕಾವ್ಯ "ಪ್ಯಾರಡೈಸ್ ಲಾಸ್ಟ್" ಬರೆಯುವುದರ ಉದ್ದೇಶವನ್ನು ತಿಳಿಸುವಾಗ "ಭಗವಂತನ ಹಾದಿಯನ್ನು (ಅಥವಾ ನೀತಿ–ನಡತೆಯನ್ನು) ಸಮರ್ಥಿಸಿ ಮಾನವರಿಗೆ ಅದನ್ನು ಮನವರಿಕೆ ಮಾಡಿಕೊಡಲು" ಎಂದು ಹೇಳಿದ್ದಾನೆ. ಭಗವದ್ಗೀತೆಯು 'ಮಾನವನಿಗೆ ಏನನ್ನು ಸಮರ್ಥಿಸಿ ತಿಳಿಯಹೇಳಲು ಹೊರಟಿದೆ' ಎಂಬ ಪ್ರಶ್ನೆ ಅಪ್ರಾಸಂಗಿಕವಲ್ಲ. ಗೀತೆಯ ಬಗೆಗಿನ ಅನೇಕ ಚರ್ಚೆಗಳಲ್ಲಿ ಈ ಪ್ರಶ್ನೆಯನ್ನು ಗಂಭೀರವಾಗಿ ಎತ್ತಿಲ್ಲದಿರುವುದು ನಮ್ಮ ವಿದ್ಯಮಾನ. ಹಾಗೆ ಪ್ರಶ್ನೆ ಎತ್ತದಿರುವುದಕ್ಕೆ ಉದ್ದೇಶವೂ ಇರುತ್ತದೆ.

ಏನೇ ಸಮರ್ಥನೆ ಮತ್ತು ತಿಳಿವು ದೊರೆತಾಗಲೂ ಮೂರು ವಿಧದ ಪ್ರತಿಕ್ರಿಯೆಗಳು ಸಾಧ್ಯ. ಇದನ್ನು 'ಕರ್ತುಂ ಅಕರ್ತುಂ ಅನ್ಯಥಾ ಕರ್ತುಂ" ಎನ್ನುತ್ತಾರೆ. ಅಂದರೆ ಅದನ್ನು ಸ್ವೀಕರಿಸಿ ಕ್ರಿಯೆಗೆ ತೊಡಗುವುದು, ಸ್ವೀಕರಿಸದೆ ಕ್ರಿಯೆಯಲ್ಲಿ ತೊಡಗದಿರುವುದು ಮತ್ತು ಸ್ವೀಕರಿಸದೆ ಬೇರೆ ರೀತಿಯ ಕ್ರಿಯೆಯಲ್ಲಿ ತೊಡಗುವುದು ಎಂದರ್ಥ. ಉದಾಹರಣೆಗೆ, "ವಿಶ್ವವು ಮಾಯೆ; ಆದ್ದರಿಂದ ನಿರಾಸಕ್ತಿಯು ಸಮಂಜಸ. ವಿಶ್ವವು ವಾಸ್ತವ; ಆದ್ದರಿಂದ 'ಈಸಬೇಕು ಇದ್ದು ಜಯಿಸಬೇಕು'. ವಿಶ್ವವು ಸತ್ಯವೋ ಮಿಥ್ಯೆಯೋ ಏನೇ ಆಗಿರಲಿ, ನಾನಂತೂ ಸುಮ್ಮನೆ ಚಪ್ಪಲಿ ಹೊಲೆದು ಕೊಡುವ ಕೆಲಸ ಮಾಡಿಕೊಂಡಿರುತ್ತೇನೆ." ಈ ಮೂರು ಸಂದರ್ಭಗಳಲ್ಲೂ ಭಾವನಾವಲಯ, ಆಚರಣೆ ಮತ್ತು ವ್ಯಕ್ತಿತ್ವ ಭಿನ್ನವಾಗಿರುತ್ತವೆ. ಸ್ವೀಕರಿಸದೆ ಇರುವ ಆದರೆ ಅನ್ಯಥಾ ನಡೆದುಕೊಳ್ಳುವ ಮಾದರಿಗೆ ಸಾಕ್ರೆಟೀಸ್ ಒಂದು ಉದಾಹರಣೆ. ಯಾರೂ ಸಹಜವಾಗಿ ಕೇಡುಗರಲ್ಲವೆಂಬ ತತ್ತ್ವವನ್ನು ಹೊಂದಿದ್ದ ಸಾಕ್ರೆಟೀಸ್ ತನ್ನ ಸುತ್ತ ಕೇಡನ್ನು ಕಾಣುತ್ತಿದ್ದ ಮತ್ತು ಅದಕ್ಕೆ ಪ್ರತಿಕ್ರಿಯಿಸಿದ. ಕಾರಾಗೃಹದಲ್ಲಿ ಅವನಿಗೆ ಹೆಮ್ಲಾಕ್ ನೀಡಿದಾಗ ಅವನು ತನ್ನ ಶಿಷ್ಯ ಫೈಡೋಗೆ ಹೇಳಿದ, "ಹೋಗು, ಆ ದೇವತೆ ಎಸ್ಕ್ಲೆಪಿಯಸ್‌ಗೆ ಒಂದು ಹುಂಜವನ್ನು ಬಲಿಯಾಗಿ ಕೊಡು" ಎಂದು. ಈ ದೇವತೆಯು ಋಗ್ವೇದದ ನಾಸತ್ಯರು ಅಥವಾ ಅಶ್ವಿನೀ ದೇವತೆಗಳಂತೆ, ಒಬ್ಬ ವೈದ್ಯ. ಅವನು ಸಾಕ್ರೆಟೀಸ್‌ಗೆ ಮದ್ದು ನೀಡಿದ್ದಾನೆ, ಜೀವನವೆಂಬ ಬಂಧನದಿಂದ ಸಾವು ಅಥವಾ ಮುಕ್ತಿ ನೀಡುತ್ತಿದ್ದಾನೆ. ಸಾವು "ಕರುಣಿಸಿದ್ದಕ್ಕೆ" ಬಲಿ ಕೊಟ್ಟು ದೇವತೆಯನ್ನು ಆರಾಧಿಸಬೇಕೇ ? ಸಾಕ್ರೆಟೀಸನ ವ್ಯಂಗ್ಯ ತೀಕ್ಷ್ಣವಾಗಿದೆ : "ಏಥೆನ್ಸಿನಲ್ಲಿ ಇಂಥವರೊಡನೆ, ಅಂದರೆ ಆಳುವ ಶಕ್ತಿಗಳೊಡನೆ, ಸಮಜಾಯಿಷಿ ಮಾಡಿಕೊಂಡು ಬಾಳುವುದಕ್ಕಿಂತಲೂ

ಸಾವು ಲೇಸು" ಎಂಬುದು ಅವನ ಕಟು ಟೀಕೆ. ಅಂದರೆ ಅವನ ಸಮಕಾಲೀನ ಸನ್ನಿವೇಶವನ್ನು ನಿರಾಕರಿಸಿ ತನ್ನದೇ ಹಾದಿಯನ್ನು ಅವನು ಕಂಡುಕೊಂಡ. ಅದೇ ಅವನಿಗೆ ಸರಿಯಾದ 'ಧರ್ಮ' ಎಂದು ತೋರಿತು. ಜೈಮಿನಿಯ ಪೂರ್ವ ಮೀಮಾಂಸಾ ಸೂತ್ರಗಳಲ್ಲಿ ಧರ್ಮದ ಲಕ್ಷಣ ಹೇಳಿರುವುದು ಹಾಗೆ. ಏನನ್ನೋ ಮಾಡಲು ಪ್ರೇರೇಪಿಸುವಂಥದು ಧರ್ಮ (ಚೋದನಾ ಲಕ್ಷಣವನ್ನು ಉಳ್ಳದ್ದು ಧರ್ಮ). ಈ ಹಿನ್ನೆಲೆಯಲ್ಲಿ ಪ್ರಶ್ನೆ ಹಾಕಿಕೊಳ್ಳಬೇಕು : ಗೀತೆಯು ಪ್ರಚೋದಿಸುವ ಅಥವಾ ಬೋಧಿಸುವ ಧರ್ಮ ಯಾವುದು ? ಕ್ರಿಯೆಯೋ, ಅಕ್ರಿಯೆಯೋ ? ಅಥವಾ ಬಹುಚರ್ಚಿತ ವಿಷಯವಾಗಿರುವಂತೆ, ಅದು ತೀವ್ರ ಕ್ರಿಯೆಯನ್ನು ಪ್ರತಿಪಾದಿಸುತ್ತಾ, ಅಕ್ರಿಯೆಯ ಸಂದೇಶವನ್ನು ಕೊಡುತ್ತಿದೆಯೋ ? ಅಥವಾ, ಸಮಾಜದ ಇಂತಿಂಥವರಿಗೆ ಇಂತಿಂತಹ ಕ್ರಿಯೆ ಎಂದು ನಿಗದಿಗೊಳಿಸಿ ಅದನ್ನು ಒಪ್ಪಬೇಕೆಂದು ಆಗ್ರಹಿಸ ಹೊರಟಿದೆಯೋ ?

ಈ ಸಂಬಂಧದಲ್ಲಿ ವೇದ ಮತ್ತು ಉಪನಿಷತ್ತುಗಳನ್ನು ಮತ್ತೆ ಅವಲೋಕಿಸಬೇಕು. ಅವು ವಿವಿಧ ಅನುಭವಗಳನ್ನು, ದೃಷ್ಟಿಕೋನಗಳನ್ನು, ಅಭಿಪ್ರಾಯಗಳನ್ನು ಮೈಗೂಡಿಸಿಕೊಂಡಿವೆ. ಸಂಪ್ರದಾಯಸ್ಥರು ಸಮನ್ವಯ ನ್ಯಾಯವನ್ನು ಅವಲಂಬಿಸಿ ಉಪನಿಷತ್ತುಗಳಿಗೆ ಏಕಾರ್ಥತೆಯನ್ನು ಹೇರಿದ್ದಾಗ್ಯೂ ಅವುಗಳಲ್ಲಿ ಬಹುತ್ವಕ್ಕೆ ಪ್ರಾತಿನಿಧ್ಯವಿದೆ. ಭೌತವಾದ ಮತ್ತು ಭಾವನಾವಾದಗಳೆರಡೂ ಉಪನಿಷತ್ತುಗಳಲ್ಲಿ ಪ್ರತಿಫಲಿತವಾಗಿರುವುದು ಅದಕ್ಕೆ ಒಂದು ಉದಾಹರಣೆ. ಬದಲಾಗುತ್ತಿರುವ ಸಮಾಜದ ಅಂಶಗಳ ಪ್ರತಿಫಲನ ಸಹ ಅಲ್ಲಿ ಲಭ್ಯವಿದೆ. ಗೀತೆಗೆ "ಸರ್ವೋಪನಿಷದೋ ಗಾವಃ" (ಅಂದರೆ, ಉಪನಿಷತ್ತುಗಳು ಗೀತೆಗೆ ಆಕರ), ಆದರೆ ಉಪನಿಷತ್ತುಗಳ ಬಹುತ್ವಕ್ಕೆ ಗೀತೆಯಲ್ಲಿ ಸ್ಥಾನವಿಲ್ಲ. ಕೇವಲ ಒಂದು ವಾದವನ್ನು ಹಲವು ಪ್ರಭೇದಗಳಲ್ಲಿ ಚಿತ್ರಿಸಿರುವುದು ಗೀತೆಯ ವೈಶಿಷ್ಟ್ಯ. ಆದ್ದರಿಂದ, ಬೌದ್ಧಿಕವಾಗಿ ಗೀತೆಯ ಸ್ಥಾನವೇನು, ಅದರ ಮಾಪನ ಹೇಗೆ, ಅದರಲ್ಲಿ ಚಿತ್ರಿತವಾಗಿರುವ ವಿದ್ಯಮಾನಗಳ ಚಿತ್ರಣ ಎಷ್ಟು ವಾಸ್ತವ, ಎಂಬಿತ್ಯಾದಿ ಪ್ರಶ್ನೆಗಳು ನಮ್ಮ ಮುಂದೆ ಬರುತ್ತವೆ. ಇದನ್ನು ವಿಸ್ತರಿಸಿ ಹೇಳಲು ಒಂದು ಊಹಾಪ್ರತಿಜ್ಞೆಯು ಸಹಕಾರಿಯೆನಿಸುತ್ತದೆ : ಭಗವದ್ಗೀತೆ ಮತ್ತು ಕೆಲವು ಧರ್ಮಶಾಸ್ತ್ರ ಗ್ರಂಥಗಳನ್ನು ಒಂದರ ಪಕ್ಕ ಇನ್ನೊಂದನ್ನಿಟ್ಟು ನೋಡೋಣ. (ಗೀತೆಯು ಧರ್ಮಶಾಸ್ತ್ರ ಗ್ರಂಥವಲ್ಲ, ಆದರೆ ಧರ್ಮಶಾಸ್ತ್ರ ಪ್ರಮೇಯಗಳು ಅದರಲ್ಲಿ ಕೆಲವಾದರೂ ಇವೆ). ಗೀತೆಯನ್ನು ತತ್ತ್ವಶಾಸ್ತ್ರ ಗ್ರಂಥವೆಂದೂ, ಧರ್ಮಶಾಸ್ತ್ರಗಳನ್ನು ಸಮಾಜಶಾಸ್ತ್ರ ಗ್ರಂಥಗಳೆಂದೂ ಕಲ್ಪಿಸಿಕೊಳ್ಳೋಣ. ತತ್ತ್ವಶಾಸ್ತ್ರವು ವಿಚಾರಗಳ ಮಂಥನಕ್ಕೆ ಸಂಬಂಧಿಸಿದ್ದು; ಸಮಾಜಶಾಸ್ತ್ರವು ಚಿಂತನ ಮತ್ತು ಆಚರಣೆಗಳೆರಡಕ್ಕೂ ಸಂಬಂಧಿಸಿದ್ದು. ಅವುಗಳ ಪೈಕಿ, ಗೀತೆಯ ಸಮಕಾಲೀನ ಸಂದರ್ಭದ ಸಮಾಜವನ್ನು ಕುರಿತಂತೆ ಯಾವುದು ಹೆಚ್ಚು ವಿಶ್ವಾಸಾರ್ಹ ? ಗೀತೆಯ ಕರ್ತೃ ಮತ್ತು ಧರ್ಮಶಾಸ್ತ್ರ ಗ್ರಂಥಗಳ ಕರ್ತೃಗಳು, ಇಬ್ಬರೂ ಸಮಾಜದ ಶ್ರೇಣೀಕೃತ ವ್ಯವಸ್ಥೆಯನ್ನು ಗಮನಿಸಿದ್ದಾರೆ ಮತ್ತು ಸಮರ್ಥಿಸಿದ್ದಾರೆ. ಶಂಕರಾಚಾರ್ಯ ಮುಂತಾದ ಆಚಾರ್ಯರು ಮಾಡಿರುವುದೂ ಅದನ್ನೇ ಎಂಬುದನ್ನು ಮರೆಯುವಂತಿಲ್ಲ. ಧರ್ಮಶಾಸ್ತ್ರಗಳ ನೇರನುಡಿಗಳಿಗೆ ಭಿನ್ನವಾಗಿ ಗೀತೆಯು ಸುತ್ತಿ-ಬಳಸಿ, ಕಡೆಗೆ ಅವುಗಳ ತೀರ್ಮಾನವನ್ನೇ ಎತ್ತಿಹಿಡಿಯುತ್ತದೆ. ಈಗಾಗಲೇ ಗಮನಿಸಿರುವಂತೆ, ಗೀತೆಯು ಸಮಾಜವನ್ನು ನಾಲ್ಕು ವರ್ಣಗಳಾಗಿ ವಿಭಜಿಸಲಾಗಿದೆಯೆಂದು ಹೇಳಿದೆ. ಅದನ್ನು ಭಗವಂತನೇ ಮಾಡಿದ್ದಾನೆಂಬುದು ಉಪಚಾರದ ಮಾತು. ಭಗವಂತನಿಗೆ ಅದಕ್ಕಿಂತಲೂ ಬೇರೆ ಒಳ್ಳೆಯ ಕೆಲಸಗಳಿದ್ದೀತು! ಆದರೆ ಗೀತೆಯು ವರ್ಣವಿಭಜನೆಯನ್ನು ಮಾನ್ಯ ಮಾಡಿದೆಯೆಂಬುದು ವಾಸ್ತವ. ಅದನ್ನು ತರ್ಕಶುದ್ಧವೆನಿಸುವಂತೆ ಮಾಡಲು "ಗುಣಕರ್ಮ ವಿಭಾಗಶಃ" ಎಂಬ ಸಮರ್ಥನೆ ನೀಡಿದೆ. ಅದು ನಿಜವಾದರೆ, ವರ್ಣಗಳು ವ್ಯಕ್ತಿಗತವಾಗಬೇಕೇ ವಿನಾ ವಂಶಪಾರಂಪರ್ಯ ಆಗುವಂತಿಲ್ಲ. ಇತಿಹಾಸವು ಇದನ್ನು ಸುಳ್ಳಾಗಿಸಿರುವುದು ಸರ್ವವಿದಿತ. ಇದು ಶಾಲುವಿನಲ್ಲಿ ಪೊರಕೆ ಸುತ್ತುವ ಸಮಾಚಾರವಲ್ಲವೆಂದು ಸಾಧಿಸಲು ಸತತವಾಗಿ ಎಂತೆಂಥವೋ ಸುಳ್ಳು ವಾದಗಳನ್ನು ರಾಧಾಕೃಷ್ಣನ್ ಅಂಥವರು ಸೃಷ್ಟಿಸಿದ್ದಾರೆ. ಅದೆಲ್ಲಾ ವ್ಯರ್ಥ ವಾದವಷ್ಟೇ ಆಗಿದೆ. ಅದಕ್ಕೇನಾದರೂ ಪುರಾವೆ ಬೇಕೆನಿಸಿದರೆ ಧರ್ಮಶಾಸ್ತ್ರಗಳ ನೇರ ಮಾತುಗಳನ್ನು ನೋಡಬಹುದು, ಸಮಾಜದ ವಿಕಾಸದ ಇತಿಹಾಸವನ್ನು ವಸ್ತುನಿಷ್ಠವಾಗಿ ಗಮನಿಸಬಹುದು. ಆಪಸ್ತಂಬ ಧರ್ಮಸೂತ್ರವು ಯಾವ ಅಳುಕೂ ಇಲ್ಲದೆ ವಾಸ್ತವವನ್ನು ಗಟ್ಟಿಯಾಗಿ ಉಚ್ಚರಿಸಿದೆ : ನಾಲ್ಕು ವರ್ಣಗಳಿವೆ; ಅವುಗಳಲ್ಲಿ ಒಂದು ಅದರ ಮುಂದಿನದಕ್ಕಿಂತಲೂ ಜನ್ಮದಿಂದಲೇ ಶ್ರೇಷ್ಠ (ತೇಷಾಂ ಪೂರ್ವತಃ ಪೂರ್ವೇ ಜನ್ಮತಃ ಶ್ರೇಯಾನ್). ಅ-ಶೂದ್ರರು ವೇದಾಧ್ಯಯನ, ಅಗ್ನ್ಯಾಧೇಯ ಮುಂತಾದ ಅದುಷ್ಟ ಕರ್ಮಗಳನ್ನು ಮಾಡುತ್ತಾರೆ; ಇತರ ವರ್ಣಗಳ ಶುಶ್ರೂಷೆಯು ಶೂದ್ರನ ಕೆಲಸ; ಶುಶ್ರೂಷೆ ಮಾಡಲು ಎಷ್ಟು ಉಚ್ಚ ವರ್ಣದವರನ್ನು ಶೂದ್ರನು ಆಯ್ಕೆ ಮಾಡಿಕೊಳ್ಳುತ್ತಾನೋ ಅಷ್ಟರಮಟ್ಟಿಗೆ ಅವನಿಗೆ ಶ್ರೇಯಸ್ಸು ಹೆಚ್ಚುತ್ತದೆ (ಪೂರ್ವಸ್ಮಿನ್ ಪೂರ್ವಸ್ಮಿನ್ ವರ್ಣೇ ನಿಃಶ್ರೇಯಸಂ ಭೂಯಃ). ಬೇರೆ ಧರ್ಮಶಾಸ್ತ್ರ ಗ್ರಂಥಗಳೂ ಇದನ್ನೇ ಉಚ್ಚರಿಸಿವೆ. ಉದಾಹರಣೆಗೆ, ಮನುವಿನ ಸಾಮಾಜಿಕ ಅವಲೋಕನದಂತೆ ಕೂಲಿ ಕೊಡದಿದ್ದರೂ ಸರಿಯೇ, ಶೂದ್ರನಿಂದ ಕೆಲಸ ಮಾಡಿಸಬೇಕು (ಶೂದ್ರಂ ತು ಕಾರಯೇತ್ ದಾಸ್ಯಂ ಕ್ರೀತಂ ಅಕ್ರೀತಮೇವ ವಾ). ಗೀತೆಯು ಸಂಕೋಚಪಟ್ಟುಕೊಂಡು ವರ್ಣವಿಭಜನೆಗೆ ಸಮರ್ಥನೆ ನೀಡುತ್ತದೆ. ಆದರೆ ಧರ್ಮಶಾಸ್ತ್ರ ಗ್ರಂಥವು ನೇರವಾಗಿ ವಾಸ್ತವವನ್ನು ದಾಖಲಿಸುತ್ತದೆ. ಯಾವುದು ಹೆಚ್ಚು ಗೌರವಕ್ಕೆ ಪಾತ್ರವೆಂಬ ಪ್ರಶ್ನೆ ಅನಗತ್ಯ. ಹವಾನಿಯಂತ್ರಿತ ಸಭಾಂಗಣದಲ್ಲಿ ನಡೆಯುವ ವಿಚಾರಗೋಷ್ಠಿಯಲ್ಲಿ ಪ್ರಬಂಧ ಮಂಡಿಸುವ ಗೀತೆ ಒಂದು ಕಡೆ, ಹಾದಿ ಬೀದಿ ಸುತ್ತಿ ಬಂದು ವಸ್ತುನಿಷ್ಠ ವರದಿ ನೀಡುವ ಪತ್ರಕರ್ತ ಇನ್ನೊಂದು ಕಡೆ. ಅಷ್ಟೇ ವ್ಯತ್ಯಾಸ. ಭಗವಂತನ ಮುಖವಾಡ ಶುದ್ಧ ದಂಡ, ಏಕೆಂದರೆ ವಿದ್ಯುನ್ಮಾನ ಮಾಧ್ಯಮದ ಛಾಯಾಚಿತ್ರ ಅದನ್ನು ಕಳಚಿ ಬಿಸಾಡಿದೆ. ವಸ್ತುಸ್ಥಿತಿಯು ಅನುಭವಕ್ಕೆ ದಕ್ಕುತ್ತಿದೆ. ವಸ್ತುಸ್ಥಿತಿಯನ್ನು ರಂಜನೀಯವಾಗಿಸಲು ಗೀತೆಯು ಬೌದ್ಧಿಕ-ತತ್ತ್ವಶಾಸ್ತ್ರೀಯ ಕಸರತ್ತು ಮಾಡಿದೆ. ಧರ್ಮಶಾಸ್ತ್ರ ಗ್ರಂಥವು ರಾಡಿಯನ್ನು ರಾಡಿಯೆಂದೇ ಕರೆದಿದೆ. ಇನ್ನೂ ಹೇಳಬೇಕೆಂದರೆ, ಗೀತೆಯು ತತ್ತ್ವಶಾಸ್ತ್ರ ಪ್ರಾಧ್ಯಾಪಕ ಎಸ್. ರಾಧಾಕೃಷ್ಣನ್ ಇದ್ದಂತೆ ಮತ್ತು ಧರ್ಮಶಾಸ್ತ್ರ ಗ್ರಂಥವು ಸಮಾಜಶಾಸ್ತ್ರಜ್ಞ ಎ. ಆರ್. ದೇಸಾಯಿ ಇದ್ದಂತೆ. ಒಂದು ವ್ಯತ್ಯಾಸವಿದೆ : ಏನೇ ಆಗಲಿ, ನಿನ್ನ ವರ್ಣದ ಧರ್ಮಕ್ಕೆ ಕಟ್ಟುಬಿದ್ದು ಜೀವಿಸು, ಪರಧರ್ಮವನ್ನು ಅವಲಂಬಿಸುವುದು ತೊಂದರೆಯುಂಟುಮಾಡುತ್ತದೆ (ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ) ಎಂದು ಗೀತೆ ಮತ್ತು ಧರ್ಮಶಾಸ್ತ್ರ ಗ್ರಂಥ ಎರಡೂ ಉಪದೇಶಿಸುತ್ತವೆ (ಅಥವಾ 'ಆದೇಶಿಸುತ್ತವೆ' ಎನ್ನಬೇಕೋ); ಆದರೆ ಎ. ಆರ್. ದೇಸಾಯಿಯವರು ಎಸ್. ರಾಧಾಕೃಷ್ಣನ್‌ರಿಗಿಂತಲೂ ತೀರಾ ಭಿನ್ನರು. ವಸ್ತುಸ್ಥಿತಿಯನ್ನು ನಿರಾಳವಾಗಿ ವಿವರಿಸುವವರು ಅವರು.

ಇದನ್ನಿಷ್ಟು ಒತ್ತಿಹೇಳಲು ಒಂದು ಕಾರಣವಿದೆ: ಗೀತೆಯ ಮೊದಲನೆಯ ಅಧ್ಯಾಯದಲ್ಲಿ ಅರ್ಜುನನ ಬಾಯಲ್ಲಿ ಕೇಳಿಸಿರುವ ಮುಖ್ಯ ಪ್ರಶ್ನೆಗಳು ಸಮಾಜ ಶಾಸ್ತ್ರೀಯ ದೃಷ್ಟಿಯಿಂದ ಉದ್ಭವವಾಗಿರುವಂಥವು; ಆದರೆ ಭಗವಾನನ ಉತ್ತರಗಳು ಅಮೂರ್ತತೆಯ ಲಕ್ಷಣವುಳ್ಳವು. ಗೀತೆಯ ಮಾತುಗಳನ್ನು ಗಮನಿಸೋಣ: ಅರ್ಜುನ ಯುದ್ಧಭೂಮಿಗೆ ಬಂದ, ಸುತ್ತಲೂ ಕಣ್ಣುಹಾಯಿಸಿದ, ಭಯಗ್ರಸ್ತನಾದ, ಅಂತರ್ಮುಖಿಯಾದ. ಶಸ್ತ್ರಸಜ್ಜಿತರನ್ನೆಲ್ಲಾ ಕಂಡು ಅವನಿಗೆ ಕನಿಕರ ಉಕ್ಕಿಬಂತು; ಇವರೆಲ್ಲಾ ಹತರಾಗುತ್ತಾರಲ್ಲಾ ಎಂದು. ಎಲ್ಲಾ ತನ್ನವರೇ. ತನ್ನವರನ್ನೇ ಕೊಲ್ಲುವುದೇ ? (ಇದು ಬುಡಕಟ್ಟು ಜೀವನದ ಕ್ರಮಕ್ಕೆ ಸಲ್ಲದಿರುವಂಥದು). ಅವರೇನೋ ಕತ್ತಿ ಹಿರಿದು ನಿಂತಿದ್ದಾರೆ, ಆದರೂ ಅವರನ್ನು ಕೊಲ್ಲಬಹುದೇ ? (೧.೨೮: ಕೃಪಯಾ ಪರಯಾವಿಷ್ಟಃ ವಿಷೀದನ್ ಇದಮಬ್ರವೀತ್। ದೃಷ್ಟ್ವೇಮಂ ಸ್ವಜನಂ ಕೃಷ್ಣ ಯುಯುತ್ಸುಂ ಸಮುಪಸ್ಥಿತಮ್॥ ಸೀದಂತಿ ಮಮ ಗಾತ್ರಾಣಿ...). ಮನು ಹೇಳುತ್ತಾನೆ, "ಕತ್ತಿ ಹಿರಿದು ಬಂದವನನ್ನು ಯಾವ ವಿಚಾರವನ್ನೂ ಮಾಡದೆ ಕೊಲ್ಲು" (ಆತತಾಯಿನಮಾಯಾಂತಂ ಹನ್ಯಾದೇವ ಅವಿಚಾರಯನ್), ಎಂದು. ಆದರೆ ಅರ್ಜುನ ವಿಚಾರ ಮಾಡುತ್ತಿದ್ದಾನೆ. ಸ್ವಲ್ಪ ಅಹಂಕಾರದ ಛಾಯೆಯೂ ಇದೆ: "ಅವರಂತೂ ತಿಳಿವಳಿಕೆ ಇಲ್ಲದವರು, ಲೋಭಿಗಳು; ನಾವಾದರೋ ತಿಳಿವಳಿಕಸ್ಥರು. ಹೀಗೆ ಮಾಡಬಹುದೇ ?" (ಯದ್ಯಪ್ಯೇತೇ ನ ಪಶ್ಯಂತಿ ಲೋಭೋಪಹತಚೇತಸಃ। ಕುಲಕ್ಷಯ ಕೃತಂ ದೋಷಂ ಮಿತ್ರದ್ರೋಹೇ ಚ ಪಾತಕಂ। ಕಥಂ ನ ಜ್ಞೇಯಮಸ್ಮಾಭಿಃ ಪಾಪಾದಸ್ಮಾನ್ನಿವರ್ತಿತುಂ। ಕುಲಕ್ಷಯಕೃತಂ ದೋಷಂ ಪ್ರಪಶ್ಯದ್ಭಿರ್ಜನಾರ್ದನ॥ – ೧.೩೮–೩೯). ಕನಿಕರ, ವಿನಾಶದ ಬಗೆಗಿನ ಆತಂಕ, ನೀತಿಪ್ರಜ್ಞೆ, ಕುಲದ ಮೌಲ್ಯ ಎಲ್ಲಾ ಇವೆ. ಆದರೆ ಅತ್ಯಂತ ಪ್ರಮುಖ ದೋಷ ಬೇರೆಯದೊಂದಿದೆ: ಒಂದು ರೀತಿ ಸ್ಥಿರಗೊಂಡಿರುವ ಸಾಮಾಜಿಕ ಅಂತಸ್ತುಗಳ ವಿಭಜನೆಗೆ ಭಂಗ ಉಂಟಾಗುತ್ತದೆ; ಬುಡಕಟ್ಟು ವ್ಯವಸ್ಥೆಗೆ ಭಿನ್ನವಾಗಿ 'ಸ್ವ–ಜನರನ್ನು' ಕೊಂದು ಯಾವ ಸುಖ ಪಡೆಯುವುದು! (೧.೩೭: ಸ್ವಜನಂ ಹಿ ಕಥಂ ಹತ್ವಾ ಸುಖಿನಃ ಸ್ಯಾಮ ಮಾಧವ). ಇದು ಕೇವಲ ಕ್ಷತ್ರಿಯ ಧರ್ಮದ ಪ್ರಶ್ನೆಯಾಗಿದ್ದರೆ ಅರ್ಜುನ ವಿಕಲಚಿತ್ತನಾಗಿರ ಬೇಕಾಗಿರಲಿಲ್ಲ. ಏಕೆಂದರೆ ಅವರಲ್ಲಿ ಬಂಧುಗಳನ್ನು ಕೊಲ್ಲುವ ಪರಂಪರೆ ಸಾಕಷ್ಟಿತ್ತು. ಅಜಾತಶತ್ರು, ಬಿಂಬಸಾರ ಸಿಂಹಾಸನಕ್ಕಾಗಿ ಕಾದಾಡಿದ್ದರು. ಗೀತೆಯ ಕರ್ತೃವಿನ ದೃಷ್ಟಿ ಅದಕ್ಕೆ ಸೀಮಿತವಾಗಿಲ್ಲ. ಕ್ರಮೇಣ ನಶಿಸುತ್ತಿರುವ, ಹೊಸ ಪ್ರಭುತ್ವಗಳು ಹೊಸಕಿ ಹಾಕುತ್ತಿರುವ, 'ಕುಲ' ಅಥವಾ ಬುಡಕಟ್ಟಿನ ನಿಯಮಗಳನ್ನು ಗಾಳಿಗೆ ತೂರಬೇಕೇ ? ಸ್ವಾರಸ್ಯವೆಂದರೆ, ಋಗ್ವೇದದಲ್ಲಿ ಇಂದ್ರನ ಬಗ್ಗೆ ಒಂದು ಮಾತಿದೆ. ಅವನು ತನ್ನ ತಂದೆಯ ಕಾಲನ್ನೇ ಹಿಡಿದೆತ್ತಿ ಅಪ್ಪಳಿಸಿದ್ದನಂತೆ. ತಾಯಿಯನ್ನು ಹಾಗೆ ಬೇರೆ ಯಾರು ತಾನೇ ವಿಧವೆಯನ್ನಾಗಿಸಬಲ್ಲರು! (ಋ. ೪. ೧೮.೧೨: ಕಸ್ತೇ ಮಾತರಂ ವಿಧವಾಮಚಕ್ರತ್ ಶಯುಂ ಕಸ್ತ್ವಾಂ ಅಜಿಘಾಂಸತ್ ಚರಂತಂ। ಕಸ್ತೇ ದೇವೋ ಅಧಿ ಮಾರ್ಡೀಕ (= ಕೇ) ಆಸೀತ್ ಯತ್ ಪ್ರಾಕ್ಷಿಣಾಃ ಪಿತರಂ ಪಾದಗೃಹ್ಯ॥) ಪುರಾಣಕತೆಯ ಪ್ರಕಾರ ಅರ್ಜುನನು ಇಂದ್ರನ ಮಗ, ಆದರೆ ತಂದೆಯ ರೀತಿ ಮಾಡಲು ಏನೋ ಅಂಜಿಕೆ! ಗೀತೆಯ ಕರ್ತೃವಿಗೆ ಬುದ್ಧನ ಬುಡಕಟ್ಟು ಪ್ರಜ್ಞೆ ಬಾಧಿಸುತ್ತಿದೆ (೧.೪೦: ಕುಲಕ್ಷಯೇ ಪ್ರಣಶ್ಯಂತಿ ಕುಲಧರ್ಮಾಃ ಸನಾತನಾಃ). ಅವನ ಇಕ್ಕಟ್ಟು ಅಸ್ತಿತ್ವದಲ್ಲಿರುವ ವ್ಯವಸ್ಥೆಯ ಬಗೆಗಿನದು (ಕುಲಂ ಕೃತ್ಸ್ನಂ–೧.೪೦). ಇರುವುದು ಧರ್ಮ, ಅದರ ಉತ್ಪಾಟನೆ ಅಥವಾ ಬದಲಾವಣೆ ಅಧರ್ಮಕ್ಕೆ ಹಾದಿ ಮಾಡಿಕೊಡುತ್ತದೆ. ಸ್ಥಿರವೆಂದು ಭಾವಿಸಲಾದ, ಸ್ಥಿರವಾಗಿರಬೇಕೆಂದು ಆಶಿಸಲಾದ, ವ್ಯವಸ್ಥೆಯು ವರ್ಣ ವಿಭಜಿತ ಸಮಾಜ. ಆದರೆ ಅದು ಅಸ್ಥಿರವೆಂಬಂತೆ ತೋರುತ್ತಿದೆ, ಅಸ್ಥಿರಗೊಳಿಸುವ ಶಕ್ತಿಗಳು ಮುಂದಾಗುತ್ತಿವೆ. ಅದೇ ದುಗುಡಕ್ಕೆ ಕಾರಣ. ಅದನ್ನು ತಡೆಯುವ ಅಭೀಪ್ಸೆ ಇದೆ. ಅದಕ್ಕೆ ಅನುವಾಗುವಂತಹ ತತ್ತ್ವವನ್ನು ರೂಪಿಸಬೇಕು, ಜನಮನದಲ್ಲಿ ಬಿತ್ತಬೇಕು. ಗೀತೆಯ ಕರ್ತೃವಿನ ಮುಂದಿರುವ ಸವಾಲು ಅದು. ಗೀತೆಯು ಸವಾಲನ್ನು ಸ್ವೀಕರಿಸಿದೆ, ಅತಿಯಾದ ಚಮತ್ಕಾರದಿಂದ ಯಶಸ್ವಿಯಾಗಿದೆ ಕೂಡ. ಇಲ್ಲಿರುವ ವಿರೋಧಾಭಾಸ ನೋಡಿ ಹೇಗಿದೆ: ಜಾತಿ ಧರ್ಮಗಳು ಮತ್ತು ಕುಲಧರ್ಮಗಳು ಶಾಶ್ವತ (ಅಥವಾ ಶಾಶ್ವತವಾಗಿರಬೇಕು), ಆದರೆ ಅವು ಉತ್ಪಾಟಿಸಲ್ಪಡುತ್ತವೆ (೧.೪೩: ಉತ್ಸಾದ್ಯಂತೇ ಜಾತಿಧರ್ಮಾಃ ಕುಲಧರ್ಮಾಶ್ಚ ಶಾಶ್ವತಾಃ). ಶಾಶ್ವತವೆಂಬುದು ನಿಜವಾದರೆ, ಅವುಗಳ ಉತ್ಪಾಟನೆಯಾಗುತ್ತದೆಂಬ ಭೀತಿ ಏಕೆ ? ಏಕೆಂದರೆ, ಉತ್ಪಾಟಿಸಲು ಕೆಲವು ಮನಸ್ಸುಗಳು ತಹತಹಿಸುತ್ತಿವೆ. ಇದು ಇಂದಿನ ಆಶಯ ಮಾತ್ರವೇ ಅಲ್ಲ, ಅಂದಿನದೂ ಆಗಿತ್ತು. ಕೆಲವರಿಗಾದರೂ ಕೂಡ. ಅದನ್ನು ವಿರೋಧಿಸಿ ಅಸ್ತಿತ್ವದಲ್ಲಿದ್ದ ವ್ಯವಸ್ಥೆಯನ್ನು ಆರಾಧಿಸಿ ಅದನ್ನು ಹಾಗೆಯೇ ಉಳಿಸಿಕೊಳ್ಳಬೇಕೆಂಬ ಪ್ರಬಲ ಆಕಾಂಕ್ಷೆಯನ್ನು ಹೊಂದಿದ್ದವರೂ ಇದ್ದರು. ಅದೇ ಭಗವದ್ಗೀತೆಯು ಎದುರಿಸಬೇಕಾದ ದ್ವಂದ್ವ. ಆ ದ್ವಂದ್ವವನ್ನು ಗೀತೆಯ ಕರ್ತೃವು ಅರ್ಜುನನ ಮುಖಾಂತರ ವ್ಯಕ್ತಪಡಿಸಿದ್ದಾನೆ. ದ್ವಂದ್ವವು ಬೇಡ, ಇರುವ ವರ್ಣವಿಭಜನಾ ವ್ಯವಸ್ಥೆಯನ್ನು ಉಳಿಸಿಕೊಳ್ಳೋಣ, ಬಲಪಡಿಸೋಣ, ಎಂದು ಭಗವಾನ್ ವಾದಿಸುತ್ತಾನೆ. ಅದು ಶಾಶ್ವತವಾಗಿ ಉಳಿಯಬೇಕು, ಆದರೆ ಉಳಿಸಲು ವಿರೋಧವೂ ಇದೆ. ಇದು ಹೇಗಿದೆಯೆಂದರೆ, "ವೇದವು ನಷ್ಟವಾಗಿಹೋಗುತ್ತದೆ" ಎಂಬ ಭೀತಿ ವ್ಯಕ್ತಪಡಿಸುತ್ತಾರಲ್ಲಾ ಹಾಗೆ. "ವೇದವು ನಿತ್ಯ" ಎಂಬ ವಾದವನ್ನು ಪ್ರಬಲವಾಗಿ ಮಂಡಿಸಿ, ಆಮೇಲೆ ಅದು ಖಿಲವಾಗಿ ಹೋಗುತ್ತದಲ್ಲಾ ಎಂದು ವ್ಯಥಿಸುವುದು ಅತಾರ್ಕಿಕ. ಹಾಗಿದ್ದರೆ 'ನಿತ್ಯ' ಎಂಬ ವಾದವೇ ತಪ್ಪಾಗಿ ಹೋಗುತ್ತದಲ್ಲ! ಗೀತೆಯ ಕರ್ತೃವಿನ ಆಶಯ ಜಾತಿಧರ್ಮಗಳು ಸ್ಥಿರವಾಗಿರಬೇಕೆಂಬುದು, ಆದರೆ ಅದಕ್ಕೇನೋ ಭಂಗ ಬರುವ ಸನ್ನಿವೇಶ ಉಂಟಾಗುತ್ತಿದೆಯಲ್ಲಾ ಎಂಬುದು ಆತಂಕ. ಈ ಚಾರಿತ್ರಿಕ–ಸಾಮಾಜಿಕ ಸಂಗತಿಯನ್ನು ಉಪೇಕ್ಷಿಸಿ ಗೀತೆಯನ್ನು ಅರ್ಥೈಸುವುದು ಸರ್ವಥಾ ಯೋಗ್ಯವಲ್ಲ. ಅಲ್ಲಾಡುತ್ತಿರುವ ವ್ಯವಸ್ಥೆಯನ್ನು ಭದ್ರಗೊಳಿಸುವುದು ಗೀತೆಯ ಮಹೋದ್ದೇಶ. ಆದ್ದರಿಂದಲೇ ಹೇಳಿದ್ದು, ಬುದ್ಧನಿಲ್ಲದಿರುತ್ತಿದ್ದರೆ ಗೀತೆಯು ಅನಗತ್ಯ ವಾಗಿರುತ್ತಿತ್ತು ಎಂದು. ಲೋಕಾಯತರು ಮತ್ತು ಬುದ್ಧ ವರ್ಣ ವಿಭಜನೆಯನ್ನು ಸಾರಾಸಗಟಾಗಿ ವಿರೋಧಿಸಿ ಅದನ್ನು ಉತ್ಪಾಟಿಸಬೇಕೆಂಬ ಬಣದ ಧೀರೋದಾತ್ತ ನಾಯಕರು.

**ಜಿ. ರಾಮಕೃಷ್ಣ**
೨–ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್
೨೨/೧, ೪ನೇ ಕ್ರಾಸ್, ಕಾವೇರಿನಗರ, ಬನಶಂಕರಿ ೩ನೇ ಹಂತ, ಬೆಂಗಳೂರು – ೫೬೦ ೦೮೫

## ನಮನ

### ಖ್ಯಾತ ಚಿತ್ರಕಲಾವಿದ ಯೂಸುಫ್ ಅರಕ್ಕಲ್ ಕಣ್ಮರೆ



ಬೆಂಗಳೂರಿನವರೇ ಆಗಿಬಿಟ್ಟಿದ್ದ ಕೇರಳ ಮೂಲದ ಯೂಸುಫ್ ಅರಕ್ಕಲ್ ೦೪.೧೦.೨೦೧೬ರಂದು ನಿಧನರಾಗಿದ್ದಾರೆ. ಚಿತ್ರಕಲಾ ಪರಿಷತ್‌ನಲ್ಲಿ ಪೇಂಟಿಂಗ್ ಡಿಪ್ಲೋಮ ಪಡೆದ ಅರಕ್ಕಲ್ ದೆಹಲಿಯಲ್ಲಿ ಗ್ರಾಫಿಕ್ ಮುದ್ರಣ ಕಲೆಯಲ್ಲಿ ವಿಶೇಷ ಪರಿಣತಿ ಪಡೆದು ಮ್ಯೂರಲ್, ಅಮೂರ್ತ ಶೈಲಿ... ಮುಂತಾದ ಚಿತ್ರಕಲೆಯ ನಾನಾ ಪ್ರಕಾರಗಳಲ್ಲಿ ಅಪೂರ್ವ ಸಾಧನೆ ಗಳಿಸಿ ಕಲಾ ಜಗತ್ತಿನ ದಿಗ್ಗಜರ ಮೆಚ್ಚುಗೆಗೆ ಪಾತ್ರರಾಗಿದ್ದರು. ಹತ್ತು ಹಲವು ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಪ್ರಶಸ್ತಿಗಳಿಗೆ ಭಾಜನರು ಯೂಸುಫ್. ಸಾಹಿತ್ಯ ಕ್ಷೇತ್ರದಲ್ಲೂ ತೊಡಗಿಕೊಂಡು ಹಲವು ಕೃತಿಗಳನ್ನು ರಚಿಸಿರುವ ಯೂಸುಫ್ ಅವರ ಲೇಖನಿಯಿಂದ ಇಂಗ್ಲಿಷ್‌ನಲ್ಲಿ ಕವನಗಳೂ ಮೂಡಿಬಂದಿವೆ. ಮಾನವೀಯ ಮೌಲ್ಯ ಮೆರೆದು ಎಲ್ಲರೊಡನೆ ಸ್ಪಂದಿಸುತ್ತಿದ್ದ ಅರಕ್ಕಲ್ ಕಲಾಕೃತಿಗಳ ಪ್ರದರ್ಶನಗಳು ವಿದೇಶಗಳಲ್ಲಿ ಜರುಗಿವೆ. ೧೯೭೬-೭೭ರ ಸುಮಾರಿಗೆ ಅಂದಿನ ಸೋವಿಯೆತ್ ಒಕ್ಕೂಟದ ಬೈಲೋರಷ್ಯಾದಲ್ಲಿ ಜರುಗಿದ ಅಂತರರಾಷ್ಟ್ರೀಯ ಚಿತ್ರಕಲಾ ಪ್ರದರ್ಶನದಲ್ಲಿ ಯೂಸುಫ್ ಅವರ ಕೃತಿಗಳು ವಿಶೇಷ ಮನ್ನಣೆ ಗಳಿಸಿದ್ದವು. ಅಖಿಲ ಭಾರತ ಶಾಂತಿ ಮತ್ತು ಸೌಹಾರ್ದತಾ ಸಂಘಟನೆಯ ಸಮ್ಮೇಳನ ೧೯೮೬ರಲ್ಲಿ ಬೆಂಗಳೂರಿನಲ್ಲಿ ಜರುಗಿದ ಸಂದರ್ಭದಲ್ಲಿ ತಾವೇ ವಿಶೇಷ ಆಸ್ಥೆ ವಹಿಸಿ ಪರಮಾಣು ಯುದ್ಧದಿಂದ ಸಂಭವಿಸಬಹುದಾದ ವಿನಾಶಕಾರಿ ಪರಿಣಾಮಗಳ ಕುರಿತು ಹಾಗೂ ಮನುಕುಲದ ಭವಿಷ್ಯಕ್ಕೆ ವಿಶ್ವಶಾಂತಿಯೇ ಮೂಲ ಎಂಬ ಸಂದೇಶವನ್ನು ಸಾರುವ ಅದ್ಭುತ ಕಲಾಕೃತಿಗಳನ್ನು ರಚಿಸಿಕೊಟ್ಟಿದ್ದರು.

ನಮ್ಮನ್ನಗಲಿರುವ ಪ್ರಗತಿಪರ ಕಲಾವಿದ ಯೂಸುಫ್ ಅರಕ್ಕಲ್ ಅವರಿಗೆ 'ಹೊಸತು' ಮತ್ತು 'ನವಕರ್ನಾಟಕ ಪ್ರಕಾಶನ' ಬಳಗದ ನಮನಗಳು.

## ಟಿ. ವಿ. ಲೋಕ

# ಅರ್ಥವಿಲ್ಲದ ಚರ್ಚೆ ಅಬ್ಬರವೇ ಪ್ರಧಾನ



ಸುದ್ದಿವಾಹಿನಿಗಳು ಊಹಾಪೋಹಗಳಿಗೆ ದನಿಗೂಡಿಸಿದಾಗ ಅದರ ವಿಶ್ವಾಸಾರ್ಹತೆಗೆ ಭಂಗ ಬರುತ್ತದೆ. ಘಟನೆ ಸಂಭವಿಸಿದ ಕೆಲವೇ ಕ್ಷಣಗಳಲ್ಲಿ ದೃಶ್ಯಮಾಧ್ಯಮಗಳು ಪ್ರತಿಕ್ರಿಯಿಸುವುದು ಕೆಲವೊಮ್ಮೆ ಅನಾಹುತಗಳಿಗೆ, ದುರ್ಘಟನೆಗಳಿಗೆ, ಪ್ರಚೋದನೆಗಳಿಗೆ ಎಡೆಕೊಡುತ್ತದೆ. ಕಾವೇರಿ ವಿವಾದದ ಸಂದರ್ಭದಲ್ಲಿ ಇತ್ತೀಚೆಗೆ ಕರ್ನಾಟಕದಲ್ಲಿ, ಅದರಲ್ಲೂ ಬೆಂಗಳೂರು ನಗರದಲ್ಲಿ ಸಂಭವಿಸಿದ ಘಟನೆಗಳು ಅದಕ್ಕೆ ಉದಾಹರಣೆ. ಭಾವನಾತ್ಮಕವಾಗಿ ಜನರನ್ನು ಕೆರಳಿಸುವಂಥ ಉತ್ಪ್ರೇಕ್ಷಿತ ವರದಿಗಳು ಟಿ.ಆರ್.ಪಿ. ಹೆಚ್ಚಿಸೀತು, ಆದರೆ ನಂಬಿಕೆ ಹುಟ್ಟಿಸುವುದಿಲ್ಲ. ಈಚೆಗೆ ಭಾರತ–ಪಾಕ್ ಗಡಿಯಲ್ಲಿ ಸಂಭವಿಸುತ್ತಿರುವ ಗುಂಡಿನ ಚಕಮಕಿ, 'ಸರ್ಜಿಕಲ್ ಸ್ಟ್ರೈಕ್ಸ್' ಎಂದು ಹೆಸರಿಸುವ ಕಾರ್ಯಾಚರಣೆಗಳು ಮೊದಲಾದುವನ್ನು, ಇನ್ನೇನು ಎರಡೂ ದೇಶಗಳ ನಡುವೆ ಯುದ್ಧ ಸಂಭವನೀಯ ಎಂದು ಬಿಂಬಿಸುವುದು ಸರಿಯಲ್ಲ. ಹಾಗೆಯೇ ತಮಿಳುನಾಡು ಮುಖ್ಯಮಂತ್ರಿ ಜಯಲಲಿತ ಅವರ ಆರೋಗ್ಯದ ಕುರಿತ ವರದಿಗಳೂ ಕೂಡ ಊಹಾಪೋಹಗಳ ಆಧಾರಿತ. ಮಾಧ್ಯಮಗಳ ಕುಗ್ಗುತ್ತಿರುವ ವಿಶ್ವಾಸಾರ್ಹತೆ ಕುರಿತು ಅಮೆರಿಕದ ಪ್ರಮುಖ ಪತ್ರಿಕೆ 'ವಾಷಿಂಗ್ಟನ್ ಪೋಸ್ಟ್'ನಲ್ಲಿ ಪ್ರಕಟಗೊಂಡಿದ್ದ ಸಂದರ್ಶನವೊಂದರಲ್ಲಿ ವ್ಯಕ್ತಗೊಳಿಸಿರುವ ಅಭಿಪ್ರಾಯ ಇಲ್ಲಿ ಉಲ್ಲೇಖನಾರ್ಹ. ಅದರಲ್ಲಿ ಹೀಗೆ ಹೇಳಲಾಗಿದೆ : "ನಂಬಿಕೆ ನಾವು ಎದುರಿಸುತ್ತಿರುವ ಅತಿ ದೊಡ್ಡ ಸವಾಲು. ವಿಷಯ ಏನು ಎಂದರೆ ಮಾಧ್ಯಮವನ್ನು ಯಾರೂ ನಂಬುತ್ತಿಲ್ಲ. ಅಮೆರಿಕದಲ್ಲಿ ಮಾತ್ರವಲ್ಲ, ಇನ್ನೂ ಅನೇಕ ದೇಶಗಳಲ್ಲಿ ಜನರು ಮುಖ್ಯ ವಾಹಿನಿಯ ಮಾಧ್ಯಮಗಳನ್ನು ಅನುಮಾನದಿಂದಲೇ ನೋಡುತ್ತಿದ್ದಾರೆ. ಯಾರು ಏನೇ ಬರೆಯಲಿ, ಯಾರು ಎಷ್ಟೇ ನಿಜಸಂಗತಿಗಳನ್ನು ತಿಳಿಸಲಿ, ಜನರು ಮಾತ್ರ ಅದನ್ನು ಸಾರಾಸಗಟಾಗಿ ತಳ್ಳಿಹಾಕುತ್ತಿದ್ದಾರೆ. ಅವರು ತಮ್ಮ ಕಣ್ಣು ಮತ್ತು ಕಿವಿಗಳನ್ನು ಮುಚ್ಚಿಕೊಂಡಿದ್ದಾರೆ. ಏನೇ ಅಪ್ಪಿತಪ್ಪಿ ಅವರ ಕಣ್ಣು ನೋಡಿದರೂ, ಕಿವಿ ಕೇಳಿಸಿಕೊಂಡರೂ ಅವರು ಅದನ್ನು ನಂಬುತ್ತಿಲ್ಲ. ಇದು ನಾವು ಈಗ ಬದುಕುತ್ತಿರುವ ಕಾಲ."

ಚಾನೆಲ್‌ಗಳ ಸುದ್ದಿವಾಚಕರು ಸುದ್ದಿಗೆ ಒತ್ತುಕೊಡುವುದು ಎಂದರೆ ದನಿ ಏರಿಸುವುದು ಎಂದುಕೊಂಡಿದ್ದಾರೆ. ಅಬ್ಬರಿಸಿ ಹೇಳಿದರೆ ಪರಿಣಾಮಕಾರಿಯಾಗುತ್ತೆ ಎಂದು ನಂಬಿದ್ದಾರೆ. ಸುದ್ದಿಯ ಜೊತೆಗೆ ತಮ್ಮ ಅಭಿಪ್ರಾಯವನ್ನೂ ಸೇರಿಸಿ, ಬಣ್ಣ ಕಟ್ಟಿ ಹೇಳುವುದನ್ನು ರೂಢಿಸಿಕೊಂಡು ಬಿಟ್ಟಿದ್ದಾರೆ. ಟೆಲಿವಿಷನ್‌ನಲ್ಲಿ 'ಪ್ರೈಮ್ ಟೈಮ್' ಅಂದರೆ ಅತ್ಯಧಿಕ ವೀಕ್ಷಕರು ನೋಡುವ ಸಮಯ, ರಾತ್ರಿ ಎಂಟು ಗಂಟೆಯಿಂದ ಹತ್ತು ಹನ್ನೊಂದು ಗಂಟೆವರೆಗೆ ಎಂದಿಟ್ಟುಕೊಳ್ಳಬಹುದು. ಆಗ ಪ್ರಕಟವಾಗುವ ಸುದ್ದಿಗಳ ಜೊತೆಗೆ ನಡೆಯುವ ಚರ್ಚೆಗಳು ಬರೀ ಗದ್ದಲವೇ ಹೊರತು ವಿಶೇಷ ಮಾಹಿತಿಯನ್ನೇನೂ ಒದಗಿಸುವುದಿಲ್ಲ. ಇಂಥ ಚರ್ಚೆಗಳನ್ನು ನಾನು ಒಣ ಚರ್ಚೆ ಎಂದು ಕರೆಯುತ್ತೇನೆ. ಇದರಲ್ಲಿ ಭಾಗವಹಿಸುವವರು ಸಾಮಾನ್ಯವಾಗಿ ಬೇರೆ ಬೇರೆ ಪಕ್ಷಗಳ ವಕ್ತಾರರು. ಹಾಗಾಗಿ ಅವರ ಅಭಿಪ್ರಾಯಗಳೂ ಪೂರ್ವನಿರ್ಧಾರಿತ. ವಿಷಯ ಕುರಿತ ಚರ್ಚೆಗಿಂತಲೂ ದನಿ ಏರಿಸಿ ಅಬ್ಬರಿಸುವುದೇ ಹೆಚ್ಚು. ದಿನಪತ್ರಿಕೆಯೊಂದರ ಅಂಕಣಕಾರರು ಇಂಥ ಚರ್ಚೆಗಳ ವಾಹಿನಿಯ ನಿರ್ವಾಹಕರನ್ನು 'ಕೂಗುಮಾರಿ' ಎಂಬ ನುಡಿಕಟ್ಟಿನಿಂದ ಬಣ್ಣಿಸಿದ್ದಾರೆ. ಅವರೇ ಹೇಳುವ ಹಾಗೆ ಈ ಮಾದರಿಯವರು ದೇಶದಾದ್ಯಂತ ಹುಟ್ಟಿಕೊಂಡಿದ್ದಾರೆ. "ಯಾರಿಗೂ ಸತ್ಯವನ್ನು ಪರಿಶೋಧಿಸುವ ವ್ಯವಧಾನವಿಲ್ಲ. ಪರಾಂಬರಿಸಿದ ಸತ್ಯಗಳನ್ನು ಆಧರಿಸಿ ವಿಪರೀತ ಹೊಗಳುವುದು ಮತ್ತು ವಿಪರೀತ ತೆಗಳುವುದು ಇಲ್ಲಿನ ಬಂಡವಾಳ. ವರ್ಷದ ಹಿಂದೆ ಐಎಎಸ್ ಅಧಿಕಾರಿಯೊಬ್ಬರು ಆತ್ಮಹತ್ಯೆ ಮಾಡಿಕೊಂಡಾಗ ಕನ್ನಡ ಟಿ.ವಿ. ಚಾನೆಲ್‌ಗಳು ಮಾಡಿದ್ದೆಲ್ಲವನ್ನೂ ನೆನಪಿಸಿಕೊಂಡರೆ ಈ ಮಾದರಿ ಸುಲಭವಾಗಿ ಅರ್ಥವಾಗುತ್ತದೆ." ಇದು ಇಂಗ್ಲಿಷ್ ಚಾನೆಲ್‌ಗಳಿಗೂ ಅನ್ವಯ. ಸುದ್ದಿಮಾಧ್ಯಮಗಳು ಕೈಗೆತ್ತಿಕೊಳ್ಳುವ ವಿಷಯದಲ್ಲಿ ಅವರೇ ಫಿರ್ಯಾದುದಾರರು, ಅವರೇ ತನಿಖಾಧಿಕಾರಿ, ಅವರೇ ವಕೀಲ, ಅವರೇ ನ್ಯಾಯಾಧೀಶ. ಮಾತ್ರವಲ್ಲ ತಪ್ಪಿತಸ್ಥರನ್ನು ಗಲ್ಲಿಗೇರಿಸಲು ಕುಣಿಕೆ ಬಿಗಿಯುವವರೂ ಅವರೇ, ಕೊನೆಗೆ ಶವಸಂಸ್ಕಾರ ಮಾಡುವವರೂ ಅವರೇ ಎಂದು ಒಬ್ಬ ವಿಮರ್ಶಕರು ಹೇಳಿರುವುದು ಸಮರ್ಥನೀಯ.

ಇದಕ್ಕೆ ಬೇಕಾದಷ್ಟು ಉದಾಹರಣೆಗಳಿವೆ. ಸುನಂದಾ ಪುಷ್ಕರ್ ತರೂರ್ ಪ್ರಕರಣ, ಆರುಷಿ ಕೊಲೆ, ಇಂದ್ರಾಣಿ ಮುಖರ್ಜಿ ಕೊಲೆ, ಅತ್ಯಾಚಾರ ಪ್ರಕರಣಗಳು ಇವುಗಳನ್ನು ಕುರಿತು ತಿಂಗಳುಗಟ್ಟಲೆ ಪ್ರೈಮ್ ಟೈಮ್‌ನಲ್ಲಿ ಚರ್ಚೆಗಳು ನಡೆದಿವೆ. ಪ್ರತಿದಿನ ಏನಾದರೊಂದು ವಿಷಯ ತೆಗೆದುಕೊಂಡು ವಾದವಿವಾದಗಳು, ಆ್ಯಂಕರುಗಳ ಅಬ್ಬರ ಇದ್ದದ್ದೇ. ಜವಹರಲಾಲ್ ನೆಹರೂ ವಿಶ್ವವಿದ್ಯಾನಿಲಯದ ಪ್ರಕರಣದಲ್ಲಿ ಮಾಧ್ಯಮಗಳು ನಡೆದುಕೊಂಡ ರೀತಿ ನಿಜಕ್ಕೂ ತಲೆತಗ್ಗಿಸುವಂಥದ್ದು. ಇಂಗ್ಲಿಷ್ ಚಾನೆಲ್‌ಗಳನ್ನು ಅನುಸರಿಸಿ ಕನ್ನಡ ಚಾನೆಲ್‌ಗಳು ಕಡಿಮೆ ಏನಿಲ್ಲ. ಐಎಎಸ್ ಅಧಿಕಾರಿ ಡಿ. ಕೆ. ರವಿ ಆತ್ಮಹತ್ಯೆ, ಮಡಕೇರಿಯಲ್ಲಿ ಪೊಲೀಸ್ ಇನ್ಸ್‌ಪೆಕ್ಟರ್ ಗಣಪತಿ ಆತ್ಮಹತ್ಯೆ, ಮೈಸೂರಿನಲ್ಲಿ ಭಾಜಪ ಕಾರ್ಯಕರ್ತನ ಕೊಲೆ ಮುಂತಾದ ಪ್ರಕರಣಗಳಲ್ಲಿ ಟಿ.ವಿ. ಮಾಧ್ಯಮಗಳು, ಪತ್ರಿಕೆಗಳು ನಡೆದುಕೊಂಡ ರೀತಿ ನಮ್ಮ ನೆನಪಿನಿಂದ ಮಾಸಿಲ್ಲ. ಎಲ್ಲವೂ ಪೂರ್ವನಿರ್ಧಾರಿತ. ಚಾನೆಲ್‌ಗಳ ಸುದ್ದಿವಾಚಕರು ಯಾವುದೇ ಪ್ರಕರಣ ಕುರಿತು ಒಂದು ತೀರ್ಮಾನಕ್ಕೆ ಬಂದಿರುತ್ತಾರೆ. ಅದಕ್ಕೆ ಸಮರ್ಥನೆ ನೀಡುವಂತೆ ಚರ್ಚೆ ನಡೆಯಬೇಕು. ಭಾಗವಹಿಸುವವರು ಸ್ವಲ್ಪ ಆಚೀಚೆ ಹೋದರೂ ಅಬ್ಬರಿಸಿ ಅವರನ್ನು ನಿರ್ಧಾರಿತ ಜಾಡಿಗೆ ಎಳೆಯುತ್ತಾರೆ. ನನ್ನ ಮಿತ್ರರೊಬ್ಬರು ಇಂಥ ಚರ್ಚೆಗೆ ಆಹ್ವಾನಿತರಾಗಿದ್ದರು. ಅವರು ತಳೆದಿದ್ದ ನಿಲುವು ಬೇರೆಯಾಗಿದ್ದರಿಂದ ವಾಹಿನಿಯವರು ಅವರಿಗೆ ಮಾತನಾಡಲು ಅವಕಾಶವನ್ನೇ ನೀಡಲಿಲ್ಲ. ಕಡೆಗೆ ಆ್ಯಂಕರ್ ಜೊತೆ ಜಗಳವಾಡಿ ಇನ್ನು ಮುಂದೆ ಭಾಗವಹಿಸುವುದಿಲ್ಲ ಎಂದು ಹೇಳಿದರು. ಇಂಥ ಅನುಭವ ಹಲವರಿಗೆ ಆಗಿವೆ. ಕನ್ನಡ ನ್ಯೂಸ್ ಚಾನೆಲ್ ಒಂದರಲ್ಲಿ ಸುದ್ದಿಯ ಜೊತೆಗೆ ಅದರ ಕುರಿತು ಹರಿಕತೆಯೇ ಇರುತ್ತದೆ. ಪ್ರತಿದಿನ ಸುದ್ದಿಯ ಜೊತೆಗೆ ಪ್ರವಚನವೂ ಇರುತ್ತದೆ. ಪ್ರೈಮ್ ಟೈಮ್ ಸುದ್ದಿಯಲ್ಲಿ ಒಬ್ಬರು ಸುದ್ದಿ ವಾಚಿಸಿದರೆ, ಇನ್ನೊಬ್ಬರು ಅದನ್ನು ವ್ಯಾಖ್ಯಾನಿಸುತ್ತಾರೆ. ಅಂಥವುಗಳಲ್ಲಿ ಹುರಳೂ ತಿರುಳೂ ಏನೂ ಇರುವುದಿಲ್ಲ.

ಇಷ್ಟೆಲ್ಲ ಹೇಳಿದ ಮೇಲೆ ಟಿ.ವಿ. ಚಾನೆಲ್‌ಗಳಲ್ಲಿ ಪ್ರಸಾರವಾಗುವ ಕಾರ್ಯಕ್ರಮಗಳೆಲ್ಲವೂ ಕಳಪೆ ಎಂದೇನಲ್ಲ. ಕೆಲವು ಕಾರ್ಯಕ್ರಮಗಳು ನೋಡುವಂಥದ್ದಾಗಿರುತ್ತವೆ. ಇನ್ನು ಟಿ.ವಿ. ಚಾನೆಲ್‌ಗಳು ಬಳಸುವ ಭಾಷೆಯ ಕುರಿತು ಹೇಳದೆ ಇರುವುದೇ ವಾಸಿ. ಕಾರಣ ಅವರು ಬಳಸಿದ್ದೇ ಭಾಷೆ ಎನಿಸಿಕೊಳ್ಳುತ್ತದೆ. ಒಟ್ಟಿನಲ್ಲಿ ಟೆಲಿವಿಷನ್ ಪ್ರವೇಶ ಮಾಡಿದಾಗ ಒಬ್ಬ ಮಹನೀಯ ಅದನ್ನು 'ಈಡಿಯಟ್ ಬಾಕ್ಸ್' ಎಂದು ಕರೆದಿದ್ದ. ಅದು ನಿಜವಾಗುತ್ತಿದೆಯೇ ಎಂಬ ಅನುಮಾನ ಕಾಡದಿರದು.

*(ಮುಗಿಯಿತು)*

**ಸಿ. ಆರ್. ಕೃಷ್ಣರಾವ್**
'ಚೌಬೀನ', ೮೪೯, ೭ನೇ ಕ್ರಾಸ್, ಬನಶಂಕರಿ ೩ನೇ ಹಂತ, ೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು–೮೫




# ಬರ್ಗರ್

ಕೊಂಕಣಿ ಮೂಲ
**ದಾಮೋಧರ ಮೌಜೋ**

ಕನ್ನಡಕ್ಕೆ
**ಡಾ॥ ಬಸವರಾಜ ಸಾದರ**




"ಏನು !! ನೀನು ಅದನ್ನು ಶರ್ಮಿಳಾಗೆ ಕೊಟ್ಟುಬಿಟ್ಟೆಯಾ ?" ತಾಯಿ ಒಮ್ಮೆಲೇ ಪಟಾಕಿಯಂತೆ ಸಿಡಿದಳು.

ಅದರ ಹಿಂದೆಯೇ ಎರಡನೆಯ ಪಟಾಕಿ ಕೂಡ ಸಿಡಿಯಿತು – "ಮತ್ತೆ, ಅದನ್ನವಳು ತಿಂದುಬಿಟ್ಟಳಾ ?"

"ತಿಂದರೇನಾಯ್ತಮ್ಮ? ಅವಳು ನನ್ನ ಗೆಳತಿ..." ಇರ್ನೆ ದೃಢವಾದ ಮಾತುಗಳಲ್ಲಿ ಪ್ರತಿಕ್ರಿಯಿಸಿದಳು.

"ಪ್ರೀತಿಯ ಮಗಳೆ... ಅವಳೊಬ್ಬ ಹಿಂದೂ..."

"ಅವಳು ಹಿಂದೂ ಆದರೆ ಏನಾಯ್ತು? ಅವಳು ತರುವ ಪಲಾವನ್ನು ನಾನೂ ತಿನ್ನುತ್ತೇನೆ. ನಾವು ದಿನಾಲೂ ಹೀಗೆ ಒಬ್ಬರಿಗೊಬ್ಬರು ಹಂಚಿಕೊಂಡೇ ತಿನ್ನೋದು, ಅಮ್ಮ..." ಇರ್ನೆ ಇನ್ನಷ್ಟು ಖಚಿತವಾಗಿ ಹೇಳಿದಳು.

"ಆದರೆ ಹಿಂದೂಗಳು ಗೋಮಾಂಸವನ್ನು ತಿನ್ನೋದಿಲ್ಲ. ಗೋಮಾಂಸವನ್ನು ತಿಂದ ವಿಷಯ ಏನಾದರೂ ಅವಳ ತಂದೆ–ತಾಯಿಗೆ ಗೊತ್ತಾದರೆ, ಖಂಡಿತವಾಗಿ ಅವರು ನಿರಾಶರಾಗುತ್ತಾರೆ. ನೀನು ಮತ್ತು ಶರ್ಮಿಳಾ ಇಬ್ಬರೂ ಅವರಿಂದ ಬೈಯ್ಗುಳ ತಿನ್ನಬೇಕಾಗುತ್ತದೆ"

"ಆದರೆ ?"....

ಇಷ್ಟು ನಡೆಯುವುದರೊಳಗೆ ಇರ್ನೆ ಇನ್ನೂ ಕೆರಳಿ ಬಿಟ್ಟಿದ್ದಳು. ಆದರೂ ತನ್ನನ್ನು ತಾನು ನಿಯಂತ್ರಿಸಿಕೊಳ್ಳುವ ಮನೋಭಾವ ಹೊಂದಿದ್ದ ಆಕೆ,

"ಅಲ್ಲಮ್ಮ, ಅವಳು ಗೋಮಾಂಸದ ಬರ್ಗರ್ ತಿಂದರೆ ಏನು ಸಮಸ್ಯೆ ?" – ಎಂದು ಗಡುಸಾಗಿಯೇ ಪ್ರಶ್ನಿಸಿದಳು.

"ಅದು ಪಾಪ !!"

"ಅದು ಪಾಪವೆಂದಾದರೆ ಅವಳಿಗಾಯ್ತು. ಆದರೆ ನನಗಲ್ಲವಲ್ಲ ?"

"ಕಾರಣವೇನೆಂದರೆ, ಅವರ ದೇವರು ಅವರಿಗೆ ಗೋಮಾಂಸವನ್ನು ತಿನ್ನಬೇಡಿ ಎಂದು ಹೇಳಿದ್ದಾನೆ" ತಾಯಿ ಇರ್ನೆಗೆ ವಿವರಿಸಿದಳು.

"ಆದರೆ ಅಮ್ಮ, ದೇವರು ಒಬ್ಬನೇ ಎಂದು ನಮಗೆ ಕಲಿಸಿದ್ದಾರಲ್ಲ ?"

ಈಗ ಅವಳ ತಾಯಿಗೆ ಎಲ್ಲಿಲ್ಲದ ಸಿಟ್ಟು "...ನನಗೇ ಉಪದೇಶ ಮಾಡ್ಲಿಕ್ಕೆ ಬರಬೇಡ. ನಿಮ್ಮ ತಂದೆ ಬಂದ ಮೇಲೆ ಎಲ್ಲಾ ಅವರನ್ನೇ ಕೇಳು" ದನಿ ಎತ್ತರಿಸಿದಳು.

ಗೋಮಾಂಸದ ಬರ್ಗರ್ ತಿಂದ ಕಾರಣಕ್ಕಾಗಿ ಶರ್ಮಿಳಾ ಪಾಪಿಯಾಗುತ್ತಾಳೆಂಬುದನ್ನು ಹಾಗೂ ಅದಕ್ಕಾಗಿ ಅವಳ ತಂದೆ–ತಾಯಿ ಅವಳ ಮೇಲೆ ಕೋಪಗೊಳ್ಳುತ್ತಾರೆಂಬುದನ್ನು ತಿಳಿದ ಇರ್ನೆಗೆ ತುಂಬ ನಿರಾಶೆಯಾಯಿತು. ಈ ಘಟನೆಯ ಬಗೆಗೆ ತಂದೆಯವರು ಮನೆಗೆ ಬಂದ ಮೇಲೆ ವಿಚಾರಿಸಬೇಕೆಂದು ನಿರ್ಧರಿಸಿದ ಆಕೆ ತನ್ನ ಆ ದಿನದ ಹೋಂವರ್ಕ್‌ನಲ್ಲಿ ತೊಡಗಿದಳು. ಓದಲೆಂದು ಪುಸ್ತಕದ ಚೀಲವನ್ನು ತೆಗೆದ ತಕ್ಷಣ ಮೊದಲು ಅವಳ ಕಣ್ಣಿಗೆ ಬಿದ್ದದ್ದು ನಾಲ್ಕೈದು ದಿನಗಳ ಹಿಂದೆ ಶರ್ಮಿಳಾ ತನಗೆ ಕೊಟ್ಟಿದ್ದ ಪುಸ್ತಕ. ಶರ್ಮಿಳಾ ಓದುವುದನ್ನು ತುಂಬ ಇಷ್ಟಪಡುತ್ತಿದ್ದಳು. ಅವಳ ತಂದೆ ಆಕೆಗೆ ಓದಲೆಂದು ಒಳ್ಳೊಳ್ಳೆಯ ಪುಸ್ತಕಗಳನ್ನು ತಂದುಕೊಡುತ್ತಿದ್ದರು. ಇರ್ನೆ ಕೂಡ ಓದುವುದನ್ನು

**"ಊಹೂಂ... ಖಂಡಿತ ಅಲ್ಲ. ಇದು ಬರ್ಗರ್ ಕಣೇ...ನಿಮ್ಮ ಅಮ್ಮ ಮಾಡಿದ್ದರಲ್ಲ; ಅಂಥದ್ದೇ ಬರ್ಗರ್ ಇದು !!" ಎನ್ನುತ್ತ ಬಾಕ್ಸ್‌ನ್ನು ಬಿಚ್ಚಿದಳು ಶರ್ಮಿಳಾ. "ನೋಡು ನಮ್ಮ ಮನೆಯ ಹತ್ತಿರವೇ ತಿಂಡಿ–ತಿನಿಸುಗಳ ಒಂದು ಅಂಗಡಿ ಇದೆ. ನಾನು ಕೇಳಿದೆ ಅಂತ ನನ್ನ ತಂದೆ ಮೊನ್ನೆ ಅಲ್ಲಿಗೆ ಹೋಗಿ ನನಗಾಗಿ ಒಂದು ಬರ್ಗರ್‌ನ್ನು ತಂದಿದ್ದರು. ಅದನ್ನು ನೋಡಿದ ನಾನು – ಅಪ್ಪ, ನನಗೆ ಬೇಕಾಗಿರುವ ಬರ್ಗರ್ ಇದಲ್ಲ; ಇರ್ನೆ ನನಗೆ ಕೊಟ್ಟಿದ್ದಳಲ್ಲ ಅದು ಇದಕ್ಕಿಂತ ಬೇರೆಯದೇ ಆಗಿತ್ತು" ಎಂದಿದ್ದೆ. ನನ್ನ ಮಾತನ್ನು ಕೇಳಿದ ಅವರು "ಓಹೋ... ಬಹುಶಃ ಅದು ಗೋಮಾಂಸದ ಬರ್ಗರ್ ಆಗಿದ್ದಿರಬೇಕು" ಎಂದರಷ್ಟೇ.**

ಇಷ್ಟಪಡುತ್ತಿದ್ದಳಾದರೂ ಅವಳು ಎನಿಡ್ ಬ್ಲೈಟನ್ ಮತ್ತು ಹ್ಯಾರಿ ಪಾಟರ್‌ನ ಪುಸ್ತಕಗಳ ಹೊರತಾಗಿ ಮತ್ತೇನನ್ನೂ ಓದಿರಲಿಲ್ಲ. ಕಳೆದ ವರ್ಷ ಎಂಟನೆಯ ತರಗತಿಯಲ್ಲಿದ್ದಾಗ ಅವಳು ಓದುವ ಹವ್ಯಾಸವನ್ನು ಬೆಳೆಸಿಕೊಂಡಳು. ಆಮೇಲೆ ಶರ್ಮಿಳಾಳ ಗೆಳೆತನ ಸಂಪಾದಿಸಿದ ನಂತರ ಅವಳ ಓದಿನ ದಿಕ್ಕೇ ಬದಲಾಯ್ತು. ಮೊದಮೊದಲು ಶರ್ಮಿಳಾ ಅವಳಿಗೆ ಚಾರ್ಲಸ್ ಡಿಕನ್ಸ್‌ನ 'ಆಲಿವರ್ ಟ್ವಿಸ್ಟ್' ಪುಸ್ತಕ ಕೊಟ್ಟಳು. ನಂತರ ಕೊಟ್ಟ ಸಣ್ಣ ಪುಸ್ತಕ ಡ್ಯುಮಾನ 'ದಿ ಥ್ರೀ ಮಸ್ಕೆಟಿಯರ್ಸ್'. ಇವೆಲ್ಲ ಮೂಲದಿಂದ ಸಂಕ್ಷೇಪಗೊಂಡ ಆವೃತ್ತಿಗಳು. ಓದುವ ಹವ್ಯಾಸ ಬೆಳೆದಂತೆ ಇರ್ನೆ ಒಳ್ಳೆಯ ಹಾಗೂ ಸಾಧಾರಣ ಪುಸ್ತಕಗಳ ನಡುವಿನ ವ್ಯತ್ಯಾಸವನ್ನು ಗುರುತಿಸಲು ಕಲಿತಳು. ಇತ್ತೀಚೆಗಂತೂ ಶಾಲೆಯಲ್ಲಿ ಬಿಡುವು ಸಿಕ್ಕಾಗಲೆಲ್ಲಾ ಇರ್ನೆ ಮತ್ತು ಶರ್ಮಿಳಾ ಮಾತಾಡುತ್ತಿದ್ದುದು ಕೇವಲ ಪುಸ್ತಕಗಳ ಬಗೆಗೆಯೇ. ಶರ್ಮಿಳಾ ಕೊಂಕಣಿ ಪುಸ್ತಕಗಳನ್ನು ಪ್ರೀತಿಯಿಂದ ಓದುತ್ತಿದ್ದಳು. ನಂತರ ಮನೋಹರ ಸರದೇಸಾಯಿ ಅವರ ಕವಿತೆಗಳನ್ನು ಇರ್ನೆಗೆ ಓದಿ ಹೇಳತೊಡಗಿದಳು. ಶರ್ಮಿಳಾಳ ಸಹವಾಸದಲ್ಲಿ ಇರ್ನೆ ಕೂಡ ಕೊಂಕಣಿ ಪುಸ್ತಕಗಳನ್ನು ಓದಲು ಶುರು ಮಾಡಿದಳು. ಪುಸ್ತಕಗಳ ಚರ್ಚೆಯಲ್ಲಿ ಮುಳುಗಿಹೋಗುತ್ತಿದ್ದ ಅವರಿಬ್ಬರಿಗೂ ಮಧ್ಯಾಹ್ನದ ಬಿಡುವಿನ ವೇಳೆ ಹೋದದ್ದೇ ಗೊತ್ತಾಗುತ್ತಿರಲಿಲ್ಲ.

"ನೀನೀಗ ಓದುತ್ತಿರುವುದು ಒಂಭತ್ತನೆಯ ಕ್ಲಾಸಿನಲ್ಲಿ. ಮುಂದಿನ ವರ್ಷ ಎಸ್.ಎಸ್.ಎಲ್.ಸಿ. ವರ್ಗಕ್ಕೆ ಹೋಗುತ್ತಿ. ಇಂಥ ಹೊತ್ತಲ್ಲಿ ನೀನು ಅನವಶ್ಯಕವಾದ ಬೇರೆ ಪುಸ್ತಕಗಳನ್ನು ಓದುತ್ತ ಸಮಯ ಹಾಳುಮಾಡಕೂಡದು. ಪಬ್ಲಿಕ್ ಪರೀಕ್ಷೆಯಲ್ಲಿ ಒಳ್ಳೆಯ ಮಾರ್ಕ್ಸ್ ಗಳಿಸಬೇಕೆಂದರೆ ನೀನು ಈಗಿನಿಂದಲೇ ಮನಸ್ಸುಗೊಟ್ಟು ಚೆನ್ನಾಗಿ ಓದಬೇಕು" ಎಂದು ತಾಯಿ ಆಗಾಗ ಎಚ್ಚರಿಸುತ್ತಿದ್ದಳಾದರೂ, ಇರ್ನೆ ಅದಾವುದರ ಬಗೆಗೂ ಚಿಂತಿಸುತ್ತಿರಲಿಲ್ಲ. ಶರ್ಮಿಳಾಳೊಂದಿಗೆ ಗೆಳೆತನ ಶುರುವಾದ ನಂತರ ಅವಳು ಮೊದಲಿಗಿಂತಲೂ ಹೆಚ್ಚಿನ ಅಂಕಗಳನ್ನು ಗಳಿಸತೊಡಗಿದ್ದಳು. ಇರ್ನೆ ಗಣಿತದಲ್ಲಿ ತುಂಬ ಬುದ್ಧಿವಂತೆ. ನೂರಕ್ಕೆ ಒಂದೆರಡೇ ಅಂಕ ಕಡಿಮೆ ಬಂದರೂ ಅವಳು ಸಿಡಿಮಿಡಿಗೊಳ್ಳುತ್ತಿದ್ದಳು. ಶರ್ಮಿಳಾ ಇಂಗ್ಲಿಷ್ ಮತ್ತು ಕೊಂಕಣಿ ವಿಷಯಗಳಲ್ಲಿ ಹೆಚ್ಚು ಜಾಣೆ. ಇರ್ನೆಯ ಗೆಳೆತನದ ಪರಿಣಾಮವಾಗಿ ಅವಳೂ ಗಣಿತದಲ್ಲಿ ಒಳ್ಳೆಯ ಸಾಧನೆ ಮಾಡತೊಡಗಿದ್ದಳು. ಅವರಿಬ್ಬರ ಗೆಳೆತನ ಹೀಗೆ ತುಂಬ ಅನ್ಯೋನ್ಯವಾಗಿರುವಾಗಲೇ ಗೋಮಾಂಸದ ಬರ್ಗರಿನ ಆ ಘಟನೆ ಅಚಾನಕ್ಕಾಗಿ ಅಡ್ಡಬಂದು ಯಾಕಾದರೂ ಇದು ಹೀಗಾಯಿತೋ ಎನಿಸತೊಡಗಿತು.

ಶಾಲೆಯವರು ಮಕ್ಕಳನ್ನೆಲ್ಲ ಒಮ್ಮೆ 'ಕಾಬೋ ಡೆ ರಾಮಾ'ಗೆ ವನಭೋಜನಕ್ಕೆಂದು ಕರೆದುಕೊಂಡು ಹೋಗಿದ್ದರು. ಶರ್ಮಿಳಾ, ಇರ್ನೆ ಕೂಡ ಇದ್ದರು. ಅಲ್ಲಿಗೆ ಹೋದಾಗ ಅವರಿಗೆ ತಾವು ಚಿಕ್ಕವರಿದ್ದಾಗ ಓದಿದ್ದ ಕಿಲ್ಲೆ–ಕೋಟೆ–ಕೊತ್ತಲಗಳ ಆಕರ್ಷಕ ಕತೆಗಳು ನೆನಪಾದವು. ಸುಮಾರು ಹೊತ್ತು ಅವರು ಆ ಜಾಗೆಯಲ್ಲಿ ಸಂತೋಷದಿಂದ ನಲಿದಾಡಿದರು. ಮಧ್ಯಾಹ್ನದ ಹೊತ್ತಿಗೆ ಹಸಿವಾದಾಗ ಮಕ್ಕಳೆಲ್ಲ ತಮ್ಮ ತಮ್ಮ ಊಟದ ಡಬ್ಬಿಗಳನ್ನು ಬಿಚ್ಚಿ ತಿನ್ನತೊಡಗಿದರು. ಇರ್ನೆ ಮತ್ತು ಶರ್ಮಿಳಾ ಅಲ್ಲಿಯೇ ಇದ್ದ ಹುಣಸೆಮರದ ನೆರಳಲ್ಲಿ ಕುಳಿತು ತಮ್ಮ ಊಟದ ಡಬ್ಬಿಗಳನ್ನು ತೆರೆದರು. "ನಾವಿಬ್ಬರೂ ನಮ್ಮ ನಮ್ಮ ಡಬ್ಬಿಗಳಲ್ಲಿರುವ ತಿಂಡಿಯನ್ನು ಹಂಚಿಕೊಂಡು ತಿನ್ನೋಣ" ಎಂದ ಶರ್ಮಿಳಾ, ತನ್ನ ತಾಯಿ ಕಳಿಸಿದ್ದ ಪಲಾವ್‌ನಲ್ಲಿ ಒಂದಿಷ್ಟನ್ನು ಇರ್ನೆಗೆ ಕೊಟ್ಟಳಲ್ಲದೆ, "ನೀನು ಏನು ತಂದಿರುವಿ ? ಎಷ್ಟೊಂದು ಗಮಗಮ ವಾಸನೆ ಬರುತ್ತಿದೆಯಲ್ಲ ?" ಎಂದು ಕುತೂಹಲದಿಂದ ಕೇಳಿದಳು. ಅವಳು ಹಾಗೆನ್ನುವಷ್ಟರಲ್ಲಿಯೇ ಇರ್ನೆ ತಾನು ತಂದಿದ್ದ ಬರ್ಗರ್‌ಗಳಲ್ಲಿಯ ಒಂದು ತುಂಡನ್ನು ಶರ್ಮಿಳಾಳ ಬಾಕ್ಸ್‌ನಲ್ಲಿ ಹಾಕಿಬಿಟ್ಟಳು. ಅದಕ್ಕೆ ಔಪಚಾರಿಕವಾಗಿ ಶರ್ಮಿಳಾ, "ಬೇಡ ಬೇಡ... ನೀನು ತಿನ್ನು..." ಎನ್ನುತ್ತಿರುವಾಗಲೇ ಇರ್ನೆ "ಇರಲಿ ತೊಗೋ, ಏನೂ ಸಂಕೋಚಪಟ್ಟುಕೊಳ್ಳಬೇಡ. ತಿನ್ನು. ನಾನು ಎರಡು ಬರ್ಗರ್‌ಗಳನ್ನು ತಂದಿರುವೆ" ಎಂದು ಪ್ರತಿಕ್ರಿಯಿಸಿದಳು.

ಬರ್ಗರ್‌ನ ಘಟನೆ ಈ ಹಂತಕ್ಕೆ ತಲುಪಬಹುದೆಂಬ ಕಲ್ಪನೆ ಇರ್ನೆಗೆ ವನಭೋಜನದ ಸಮಯದಲ್ಲಿ ಅಪ್ಪಿತಪ್ಪಿ ಕೂಡ ಬಂದಿರಲಿಲ್ಲ. ಅವಳು ಹಾಗೆ ಮಾಡಿದ್ದು ಖಂಡಿತ ನಿರುದ್ದೇಶಪೂರ್ವಕವಾಗಿತ್ತು. ಆದರೆ ಅದು ಶರ್ಮಿಳಾಗೆ ಪಾಪವಾಗಿ ಪರಿಣಮಿಸಿಬಿಟ್ಟಿತ್ತು. ಅವಳ ತಂದೆ–ತಾಯಿ ಆಕೆಯನ್ನು ಬೈಯ್ದರೆ ಏನು ಮಾಡುವುದು ಎಂಬ ಚಿಂತೆ ಕಾಡಹತ್ತಿತು.

ಇರ್ನೆ ಹಾಗೆ ಯೋಚಿಸುತ್ತಿರುವಾಗಲೇ ತಂದೆ ಮನೆಗೆ ಬಂದರು. ಆಕೆ ಅವರನ್ನು ಕೇಳಬೇಕೆನ್ನುವಷ್ಟರಲ್ಲಿ ಅವಳ ತಾಯಿಯೇ ನಡೆದುದನ್ನೆಲ್ಲ ಸವಿವರವಾಗಿ ಅವರಿಗೆ ತಿಳಿಸಿಬಿಟ್ಟಳು.

"ಅಪ್ಪಾ, ಹಿಂದೂಗಳು ಗೋಮಾಂಸ ತಿನ್ನುವುದಿಲ್ಲವೆಂದು ನನಗೆ ಗೊತ್ತಿರಲಿಲ್ಲ" ಇರ್ನೆ ಸಣ್ಣ ದನಿಯಲ್ಲಿ ಗುನುಗುನಿಸಿದಳು. "ಇರಬಹುದು ಮಗಳೆ, ಆದರೆ ಅವಳಿಗೆ ಇದು ಗೊತ್ತಿರಲಿಲ್ಲವೇ ? ಗೊತ್ತಿದ್ದೂ ಅದನ್ನೇಕೆ ತಿಂದಳು ಅವಳು ?" ಅಪ್ಪ ಕೇಳಿದ್ದು ಸರಿಯಾಗಿಯೇ ಇತ್ತು. ಗೊತ್ತಿದ್ದೂ ಶರ್ಮಿಳಾ ಯಾಕೆ ಆ ಬರ್ಗರನ್ನು ತಿಂದಳು ?

"ಅದು ಗೋಮಾಂಸದ ಬರ್ಗರ್ ಎಂದು ನೀನು ಅವಳಿಗೆ ಹೇಳಿದ್ದೆಯಾ ?"

ತಂದೆ ಹೀಗೆ ಪ್ರಶ್ನಿಸಿದಾಗ ಇರ್ನೆ ಕಣ್ಣೀರು ಸುರಿಸುತ್ತ ಗದ್ಗದಿತ ದನಿಯಲ್ಲಿ,

"ಇಲ್ಲ ಅಪ್ಪ ... ನಾನು ಅವಳಿಗೆ ಹಾಗೆ ಹೇಳಲಿಲ್ಲ. ಬರ್ಗರ್ ಎಂದು ಮಾತ್ರ ಹೇಳಿದೆ... ಅದು ನನ್ನ ತಪ್ಪು ..." ಎಂದಳು.

"ನೋಡು ಮಗಳೆ, ತಪ್ಪು ಎರಡೂ ಕಡೆಯಿಂದ ಆಗಿದೆ. ಇರಲಿ ಬಿಡು. ಅದನ್ನೇ ನೀನು ಮನಸ್ಸಿಗೆ ಹಚ್ಚಿಕೊಳ್ಳಬೇಡ. ಮತ್ತೆ ನೀನು ಈಗ ಹೋಗಿ, ಅದು ಗೋಮಾಂಸದ ಬರ್ಗರ್ ಆಗಿತ್ತೆಂದು ಮಾತ್ರ ಹೇಳಬೇಡ" ಎಂದು ಎಚ್ಚರಿಸಿದರು.

ತಂದೆಯ ಮಾತಿನಿಂದ ಇರ್ನೆಗೆ ಸಮಾಧಾನವಾಗಲಿಲ್ಲ.

"ಅಲ್ಲ ಅಪ್ಪಾ, ಅವಳ ತಂದೆಗೆ ಇದು ಗೊತ್ತಾದರೆ ಅವರು ಅವಳನ್ನು ಖಂಡಿತ ಬೈಯ್ಯುತ್ತಾರೆ"

"ಅವರಿಗೆ ಗೊತ್ತಾಗುವುದಾದರೂ ಹೇಗೆ? ನೀನು ಹೇಳಿದರೆ ಮಾತ್ರ ತಾನೆ?"

"ಆಯ್ತು ಅಪ್ಪಾ. ಅದೆಲ್ಲಾ ಇರಲಿ, ನೋಡು ಈಗ ಅವಳು ಗೋಮಾಂಸವನ್ನು ತಿಂದುಬಿಟ್ಟಿದ್ದಾಳೆ. ಅವಳಿಗೆ ಪಾಪ ತಟ್ಟುವುದಿಲ್ಲವೆ? ಹಾಗಾಗಿಬಿಟ್ಟರೆ ಅವಳು ಇನ್ನು ಮುಂದೆ ನನ್ನೊಂದಿಗೆ ಮಾತಾಡೋದೇ ಇಲ್ಲ."

ಇರ್ನೆಯ ಹೊಟ್ಟೆಯಲ್ಲಿ ಪಾತರಗಿತ್ತಿಗಳು ಹಾರಾಡುವಂತೆ ಭಾಸವಾಯ್ತು. 'ತಾವು ವನಭೋಜನಕ್ಕೆ ಹೋಗಿದ್ದ ಆ ದಿನ ಅದೆಷ್ಟು ಖುಷಿಯದಾಗಿತ್ತು !! ಆದರೆ ತನ್ನಿಂದಾದ ಒಂದು ಸಣ್ಣ ತಪ್ಪಿನಿಂದಾಗಿ ಶರ್ಮಿಳಾ ಈಗ ಅದರ ಕೆಟ್ಟ ಪ್ರತಿಫಲವನ್ನು ಅನುಭವಿಸಬೇಕಾಯ್ತು' ಎಂದು ಅವಳು ಹಳಹಳಿಸತೊಡಗಿದಳು.

ಇರ್ನೆ ತುಂಬ ಕನಸುಣಿ ಹುಡುಗಿ. ಆದರೆ ಅವಳಿಗೆ ಇಂದು ಬಿದ್ದ ಕನಸು ಮಾತ್ರ ಎಂದಿಗಿಂತ ಭಯಾನಕವಾಗಿತ್ತು. ಕನಸಿನಲ್ಲಿ ಶರ್ಮಿಳಾಳ ತಂದೆ, ತಾಯಿ ಇಬ್ಬರೂ ಸೇರಿ ಅವಳಿಗೆ ಸರಿಯಾಗಿ ನೀರಿಳಿಸುತ್ತಿದ್ದರು. ಹೊರಗಡೆ ಭಯಂಕರವಾದ ಸಿಡಿಲು ಮಿಂಚುಗಳೊಂದಿಗೆ ಮಳೆ ಸುರಿಯುತ್ತಿತ್ತು. ಶರ್ಮಿಳಾ, ತನ್ನ ತಂದೆ–ತಾಯಿಯೆದುರು ಮಂಡಿಯೂರಿ ಕುಳಿತು ಅಳುತ್ತಿದ್ದಳು. "ನನ್ನಿಂದ, ತಪ್ಪಾಯ್ತು. ನನ್ನನ್ನು ಕ್ಷಮಿಸಿರಿ. ಇರ್ನೆ ನನಗೆ ಮೋಸ ಮಾಡಿದಳು. ಆ ಕಾರಣಕ್ಕಾಗಿಯೇ ನಾನು ಅದನ್ನು ತಿಂದೆ. ಇನ್ನು ಮುಂದೆ ನಾನೆಂದೂ ಗೋಮಾಂಸವನ್ನು ತಿನ್ನುವುದಿಲ್ಲ. ಅಷ್ಟೇ ಅಲ್ಲ, ನಾನು ಇರ್ನೆಯ ಜೊತೆಗಿನ ಸಂಬಂಧವನ್ನೇ ಮುರಿದುಕೊಳ್ಳುತ್ತೇನೆ. ಅವಳೊಂದಿಗೆ ಇನ್ನೆಂದಿಗೂ ನಾನು ಮತ್ತೆ ಮಾತಾಡುವುದಿಲ್ಲ... ಮಾತಾಡುವುದಿಲ್ಲ...' ಎಂದು ಅಂಗಲಾಚುತ್ತಿದ್ದಳು. ಅವಳು

## ಅಭಿನಂದನೆಗಳು .............

ಕರ್ನಾಟಕ ಸಾಹಿತ್ಯ ಅಕಾಡೆಮಿಯು ೨೦೧೮ನೇ ವರ್ಷದ ಪುಸ್ತಕ ಬಹುಮಾನವನ್ನು ನವಕರ್ನಾಟಕ ಪ್ರಕಾಶನದ 'ನಂಬಿಕೆ, ಮೂಢನಂಬಿಕೆ, ವೈಜ್ಞಾನಿಕ ಮನೋವೃತ್ತಿ' ಕೃತಿಗಾಗಿ ಲೇಖಕರಾದ ಎಂ. ಅಬ್ದುಲ್ ರೆಹಮಾನ್ ಪಾಷ ಅವರಿಗೆ ನೀಡಲಾಗಿದೆ. ಜಿ. ಎನ್. ಮೋಹನ್ ಅವರ 'ಕಾಫಿ ಕಪ್ಪಿನೊಳಗೆ ಕೊಲಂಬಸ್' ಕೃತಿಗೂ ಪುಸ್ತಕ ಬಹುಮಾನ ಸಂದಿದೆ. ರಾಮಲಿಂಗಪ್ಪ ಟಿ. ಬೇಗೂರು ಅವರ 'ಮಹಿಳೆ ಚರಿತ್ರೆ ಪುರಾಣ' ಎಂಬ ಸಾಹಿತ್ಯ ಕೃತಿಗೆ ಪಿ. ಶ್ರೀನಿವಾಸರಾವ್ ದತ್ತಿನಿಧಿ ಬಹುಮಾನ ಲಭಿಸಿದೆ. ಇವರೆಲ್ಲರಿಗೂ 'ನವಕರ್ನಾಟಕ' ಹಾಗೂ 'ಹೊಸತು'ವಿನ ಅಭಿನಂದನೆಗಳು.

ಒಳಗಡೆ ಹೀಗೆ ರೋದಿಸುತ್ತಿರುವಾಗಲೇ ಹೊರಗಡೆ ಸಿಡಿಲು–ಮಿಂಚು ಠಳಾಯಿಸುತ್ತಿದ್ದವು. ಅವುಗಳ ಅಬ್ಬರದಲ್ಲಿ ಇರ್ನೆಯ ಕಣ್ಣು ಮಂಜಾದವು, ಕಿವಿ ಕೇಳಿಸದಂತಾದವು. 'ಅಯ್ಯೋ ಆ ಸಿಡಿಲು ಎಲ್ಲಿ ಬಿತ್ತೋ... ಅದೇನಾದರೂ ಶರ್ಮಿಳಾಳ ಮೇಲೆಯೇ ಬಿದ್ದಿತೋ...ಈಗ ಶರ್ಮಿಳಾ ಎಲ್ಲಿದ್ದಾಳೋ...!!' ಒಮ್ಮೆಲೇ ಬೆಚ್ಚಿ ಎಚ್ಚರಾದ ಇರ್ನೆಯ ಮೈತುಂಬ ಬೆವರು ಹರಿಯುತ್ತಿತ್ತು.

ಇರ್ನೆಯ ಮನಸ್ಸಿನಲ್ಲೆದ್ದ ಬಿರುಗಾಳಿ ಇನ್ನೂ ಜೋರಾಗಿಯೇ ಬೀಸುತ್ತಿತ್ತು. ಬಹುಶಃ ಅವಳ ತಂದೆ, ತಾಯಿ ಆ ವಿಷಯವನ್ನೇ ಮರೆತಂತಿದ್ದರು. ಅವಳೂ ಏನೂ ನಡೆದೇ ಇಲ್ಲವೆಂಬಂತೆ ಇರಲು ನಿರ್ಧರಿಸಿದಳು. ನಿನ್ನೆ ವನಭೋಜನಕ್ಕೆಂದು ಕರೆದುಕೊಂಡುಹೋದ ಕಾರಣಕ್ಕಾಗಿ ಇವತ್ತು ಶಾಲೆಯವರು ರಜೆ ಘೋಷಿಸಿದ್ದರು. ನಾಳೆಯಂತೂ ರವಿವಾರ. 'ಇನ್ನು ಸೋಮವಾರವೇ ಶರ್ಮಿಳಾಳ ಭೆಟ್ಟಿಯಾಗುವುದು...' ಹೀಗೆ ಯೋಚಿಸುತ್ತಿರುವಾಗಲೇ ಅವಳ ಕೈಯಲ್ಲಿದ್ದ ಮೊಬೈಲ್ ರಿಂಗಣಿಸತೊಡಗಿತು. ಅದರ ಶಬ್ದ ಕೇಳಿದ ತಕ್ಷಣ ಆ ಕರೆ ಯಾರದಿರಬಹುದೆಂದು ಗೊತ್ತಾಗಿ ಇರ್ನೆಗೆ ಆ ಕರೆಯನ್ನು ತೆಗೆದುಕೊಳ್ಳುವ ಧೈರ್ಯ ಬರಲಿಲ್ಲ. ಅದು ಹಾಗೇ ಬಾರಿಸುತ್ತಲೇ ಇತ್ತು. ಅವಳ ಹೃದಯ ಡಬ್ ಡಬ್ ಎಂದು ಹೊಡೆದುಕೊಳ್ಳತೊಡಗಿತು. ಜೊತೆಗೆ ಎದೆ ಕಂಪಿಸತೊಡಗಿತು.

"ನಿನ್ನ ಫೋನ್ ಒಂದೇ ಸಮನೆ ಹೊಡೆದುಕೊಳ್ಳುತ್ತಿದೆ... ಅದನ್ನು ತೊಗೋ..." ತಾಯಿ ಇರ್ನೆಗೆ ಕೂಗಿ ಹೇಳಿದಳು. ಆದರೆ ಇರ್ನೆ ಆ ಫೋನ್ ಕರೆಯನ್ನು ಕಟ್ ಮಾಡಿಬಿಟ್ಟಳು. ಹಾಗೆ ಕಟ್ ಮಾಡಿ ಒಂದು ನಿಟ್ಟುಸಿರುಬಿಡಬೇಕೆನ್ನುವಷ್ಟ ರಲ್ಲಿಯೇ ಮತ್ತೆ ಫೋನ್ ರಿಂಗಣಿಸತೊಡಗಿತು. ಈ ಸಲ ತಾಯಿ ಕೂಗಿ ಹೇಳುವ ಮೊದಲೇ ಇರ್ನೆ ಫೋನ್ ಕಟ್‌ಮಾಡಿದಳಷ್ಟೇ ಅಲ್ಲ, ಅದನ್ನು ಸ್ವಿಚ್ ಆಫ್ ಮಾಡಿಬಿಟ್ಟಳು. ಇಂಥ ಹೊತ್ತಲ್ಲಿ ಶರ್ಮಿಳಾಳನ್ನು ಬಿಟ್ಟು ಅವಳಿಗೆ ಇನ್ನಾರು ಫೋನ್ ಮಾಡಲು ಸಾಧ್ಯ?

ಮುಂಜಾನೆಯ ಉಪಾಹಾರದಲ್ಲಿ ಇರ್ನೆ ಬರ್ಗರ್‌ನ್ನು ತುಂಬ ಇಷ್ಟಪಡುತ್ತಿದ್ದಳಾದ ಕಾರಣ ಅವಳ ತಾಯಿ ನಿನ್ನೆ ಮಾಡಿ ಉಳಿದಿದ್ದ ಬರ್ಗರನ್ನೇ ಓವನ್‌ನಲ್ಲಿಟ್ಟು ಬಿಸಿ ಮಾಡಿ ಅವಳಿಗೆ ತಿನ್ನಲು ಕೊಟ್ಟಳು. ಅವುಗಳತ್ತ ದೃಷ್ಟಿಯನ್ನೂ ಕೂಡ ಹರಿಸದ ಇರ್ನೆ ಬರ್ಗರ್‌ಗಳ ಆ ಪ್ಲೇಟನ್ನೇ ದೂರ ತಳ್ಳಿಬಿಟ್ಟು ಟೇಬಲ್ ಮೇಲೆ ಇಟ್ಟಿದ್ದ ಬ್ರೆಡ್ಡಿನಲ್ಲಿ ಒಂದು ತುಂಡನ್ನು ತೆಗೆದುಕೊಂಡು ಚಹಾದಲ್ಲಿ ಅದ್ದಿ ಅದನ್ನೇ ಬಾಯಾಡಿಸತೊಡಗಿದಳು. ತಾಯಿ ಇದನ್ನೆಲ್ಲ ಗಮನಿಸುವ ಮೊದಲೇ ಒಂದೇ ಗುಟುಕಿನಲ್ಲಿ ಚಹಾ ಕುಡಿದು ಪುಸ್ತಕವನ್ನೋದುತ್ತ ಕುಳಿತುಬಿಟ್ಟಳು.

ಶರ್ಮಿಳಾಳಿಂದ ಓದಲು ಪಡೆದಿದ್ದ ಪುಸ್ತಕವನ್ನು ಇರ್ನೆ ಅವಳಿಗೆ ಹಿಂದಿರುಗಿಸಬೇಕಾಗಿತ್ತು. 'ಈಗ ಶರ್ಮಿಳಾ ತನ್ನ ಜೊತೆ ಮಾತಾಡುವಳೆ?' ಎಂಬುದೇ ಇರ್ನೆಗೆ ದೊಡ್ಡ ಚಿಂತೆ. ಅವಳು ಮಾತಾಡದಿದ್ದರೆ ಆಕೆಗೆ ಪುಸ್ತಕವನ್ನು ಹಿಂದಿರುಗಿಸುವುದು ಹೇಗೆ? ಏನೇ ಇರಲಿ, ಪುಸ್ತಕ ಹಿಂದಿರುಗಿಸುವ ನೆವವಾದರೂ ತಾವಿಬ್ಬರೂ ಮತ್ತೆ ಮಾತನಾಡುವ ಅವಕಾಶವನ್ನು ತಂದುಕೊಡಬಹುದು. ಹಾಗೆ ಅವಳು ನನ್ನೊಂದಿಗೆ ಮಾತನಾಡಿದರೆ ನಾನು ಅವಳಲ್ಲಿ ಖಂಡಿತ ಕ್ಷಮೆ ಬೇಡುತ್ತೇನೆ. ಶರ್ಮಿಳಾ ವೈರತ್ವ ಸಾಧಿಸುವ ವ್ಯಕ್ತಿಯಲ್ಲ... ಅವಳು ಹಾಗಿರುವುದೇನೋ ನಿಜ. ಆದರೆ ಅವಳ ತಂದೆ–ತಾಯಿ ನನ್ನ ಮೇಲೆ ದ್ವೇಷ ಸಾಧಿಸಲು ಅವಳಿಗೆ ಒತ್ತಾಯ ಮಾಡಿದರೆ ಹೇಗೆ?... ಅವಳು ಹಿಂದೂ ಎಂಬುದೇನೋ ನನಗೆ ಗೊತ್ತು. ಆದರೆ ತಾನು ಅವಳಿಂದ ಬೇರೆ ಎಂಬ ಭಾವನೆ ಬರಲಾರದಷ್ಟು ತಾವಿಬ್ಬರೂ ಹತ್ತಿರವಾಗಿದ್ದವರು. ಅಷ್ಟಕ್ಕೂ, ತಾನು ತಿನ್ನುವುದನ್ನು ಅವಳೂ ತಿಂದರೆ ಅದು ಪಾಪವಾಗುತ್ತದೆಯೆಂದು ತನಗೆ ಎಂದೂ, ಯಾರೂ ಹೇಳಿಲ್ಲ. ಹಾಗೆ ಯಾರಾದರೂ ಹೇಳಿದ್ದರೂ ತಾನು ಅದನ್ನು ನಂಬುತ್ತಿದ್ದೆನೆ? ಅವಳಾಗಿಯೇ ಬರ್ಗರ್‌ಅನ್ನು ಇಷ್ಟಪಡದಿದ್ದರೆ ತಾನು ಅದನ್ನು ಅರ್ಥಮಾಡಿಕೊಳ್ಳಬಹುದಿತ್ತು. ಆದರೆ ಶರ್ಮಿಳಾ ಬರ್ಗರ್‌ಅನ್ನು ಬರೀ ಇಷ್ಟಪಟ್ಟು ತಿಂದದ್ದಷ್ಟೇ ಅಲ್ಲ, ಅದರ ರುಚಿಯನ್ನು ಮನಸಾರೆ ಹೊಗಳಿದಳು ಕೂಡ. ಬರ್ಗರ್ ತಿನ್ನುವಾಗ ಅವಳು ಖುಷಿ ಪಟ್ಟಿದ್ದನ್ನು ತಾನು ಅಮ್ಮನಿಗೂ ಹೇಳಿದ್ದೇನೆ. ಶರ್ಮಿಳಾ ಕೂಡ ತನ್ನ ತಾಯಿಗೆ ಅದರ ರುಚಿಯ ಬಗ್ಗೆ ಹೇಳಿರಲೂಬಹುದು. ಅಷ್ಟೇ ಅಲ್ಲ, ಅವಳ ತಾಯಿ ಅದು ಯಾವುದರ ಬರ್ಗರ್ ಎಂದು ಕೇಳಿರಲೂ ಸಾಕು. ಶರ್ಮಿಳಾ ಆ ಪ್ರಶ್ನೆಗೆ ಏನು ಉತ್ತರ ಕೊಟ್ಟಳೊ!! ಅವಳ ತಾಯಿ ಏನು ತಿಳಿದುಕೊಂಡಳೊ!! ಶರ್ಮಿಳಾ ಅಂದರೆ ಅವಳ ತಂದೆಗೆ ತುಂಬ ಪ್ರೀತಿ. ಹಾಗಿರುವಾಗ ಅವಳು ಇಂಥ ಪಾಪ




## ನಾವು ಬಯಲಾದೆವು

ಅಡಿಗಡಿಗೆ ತಳಮಳಿಸಿದಾಗ ಕಂಡ ಪುತ್ಥಳಿಯಾದೆವು.
ಆಗೊಬ್ಬ , ಅದೇನೋ ಬೇರೊಬ್ಬ ,
ಎದೆಯಲ್ಲೊಂದು ಕನವರಿಕೆ,
ಕಾಡಿದ್ದು ಮರೆಯಾದ ಇಂಗಿತ,
ಸುಳ್ಳುಗಳು ಸತ್ಯವಾಗಿದ್ದು ,
ಮತ್ತೆ ಸತ್ಯಗಳೆಲ್ಲಾ ಸುಳ್ಳಾಗಿದ್ದು ,
ಎದ್ದು ನಿಂತು ಸತ್ಯಗಳನ್ನೆಲ್ಲಾ ಸುಳ್ಳು ಎಂದು ತಳ್ಳಿ ,
ತನ್ನ ಪಾಡಿಗೆ ಬಂದು ಗೂಡು ಸೇರಿದ್ದು.

ರೋಮಾಂಚನಗಳೇ ಇಲ್ಲದೆ ಬೆವೆತಿದ್ದು ,
ಭಯದಿಂದ ಕುಣಿದು ಕುಪ್ಪಳಿಸಿ,
ಬೆದೆಗೆ ಬಂದು ಕೆದಕಿ, ಹುಳುಗಳೊಳಗೆ ಹುಳುವಾಗಿ,
ವರವಿತ್ತ ದೇವನ ಮೈಮರೆತು,
ಮರಳಿ ಮರಳಿ ದಣಿದು,
ಉಳಿದದ್ದು ಶರಣಾದದ್ದು.
ಅದೇನು ಬಯಕೆಗಳು,
ಒಲವ ಮಿಡಿತಗಳೋ,
ಕರುಣೆಯ ಕರಾಳ ಮೋಕ್ಷಗಳೋ, ನಾಟಕಗಳೋ.
ಹೆಚ್ಚೆಚ್ಚು ಸೋಲು, ಸೋಲಲ್ಲೇ ನಡೆದು
ತ್ರಿವಿಕ್ರಮನಿನ್ನಾರು, ನಾನು.
ಎತ್ತಲೆತ್ತಲೋ ಸಾಗುವ ಗಾಳಿಯಂತೆ ಬೀಸಲಾಗದೆ,

ಸಹಿಸಲಾಗದೆ, ನುಣುಚಿ ನಡೆಯಲಾಗದೆ, ಮಣಿದು ಮುದುಡಲಾಗದೆ,
ಅದೇನು, ಇನ್ನಿನ್ನೇನು
ಕೊಸರಾಡಿ,
ಮುಂತಾಗಿ,
ಎಂತೋ ಆಗಿ,
ನಡೆ ದುಡಿ, ನಡೆ.
ಗೆಲುವಾಗುತ್ತಲೇ ನಡೆ.
ಸೋಲಾಗುತ್ತದೋ ಇಲ್ಲ ಗೆಲುವಾಗುತ್ತದೋ.

**ನಳಿನ ಡಿ.**
'ಜನನಿ ನಿಲಯ', ಬೋಜೇಗೌಡ ಲೇಔಟ್
ಎಐಟಿ ಇಂಜಿನಿಯರಿಂಗ್ ಕಾಲೇಜ್ ರಸ್ತೆ
ಜ್ಯೋತಿನಗರ ಪೋಸ್ಟ್
ಚಿಕ್ಕಮಗಳೂರು –೫೭೭ ೧೦೨

ಮಾಡಿದ್ದು ಅವರಿಗೆ ಗೊತ್ತಾದರೆ ಅವರು ಸುಮ್ಮನಿದ್ದಾರೆಯೆ...? ಅವರು ಶರ್ಮಿಳಾಳನ್ನು ಹೇಗೆ ಶಿಕ್ಷಿಸಬಹುದು ?' ಆಳವಾದ ಚಿಂತೆಯಲ್ಲಿ ಮುಳುಗಿದ ಇರ್ನೆ ಅದರಿಂದ ಹೊರಬಂದದ್ದು ತಾಯಿ ಕಕ್ಕುಲಾತಿಯಿಂದ ಮಾತನಾಡಿಸಿದಾಗಲೆ.

"ಇರ್ನೆ, ಏನಾಗಿದೆ ನಿನಗೆ ? ಮುಂಜಾನೆ ನೀನು ಬರ್ಗರ್‌ಅನ್ನೂ ತಿನ್ನಲಿಲ್ಲ. ಈಗ ನೋಡಿದರೆ ನಿನಗೆ ಮಧ್ಯಾಹ್ನದ ಊಟ ಮಾಡಲೂ ಮನಸ್ಸಿದ್ದಂತಿಲ್ಲ...?"

ತಾಯಿಗೆ ಬೇಸರವಾಗದಿರಲೆಂದು ಇರ್ನೆ ಏನೋ ಒಂದಿಷ್ಟು ತಿಂದಂತೆ ಮಾಡಿದಳು. ಅಂದು ಅರ್ಧ ದಿನ ರಜೆಯಿದ್ದ ಕಾರಣ ತಂದೆ ಅಷ್ಟೊತ್ತಿಗಾಗಲೇ ಮನೆಗೆ ಬಂದಿದ್ದರು. ಅವರು ಇನ್ನೇನು ಊಟ ಮಾಡಬೇಕೆನ್ನುವಷ್ಟರಲ್ಲಿಯೇ ಇರ್ನೆಯ ತಾಯಿ,

"ನೋಡಿ, ಇವಳು ನಿನ್ನೆ ತನ್ನ ಹಿಂದೂ ಗೆಳತಿಗೆ ಗೋಮಾಂಸದ ಬರ್ಗರ್‌ನ್ನು ತಿನ್ನಲು ಕೊಟ್ಟೆ ಎಂಬ ಕಾರಣಕ್ಕಾಗಿ ಇವತ್ತು ಮಂಕು ಹಿಡಿದವರಂತೆ ಕುಳಿತುಬಿಟ್ಟಿದ್ದಾಳೆ" ಎಂದು ಅಹವಾಲು ಹೇಳಿದರು. ಅದಕ್ಕೆ ಅವಳ ತಂದೆ ನಗುತ್ತ,

"...ಇರ್ಲಿ ಬಿಡು ಇರ್ನೆ, ನೀನು ಅದಕ್ಕಾಗಿ ಹೆಚ್ಚು ಚಿಂತೆ ಮಾಡಬೇಡ. ನೋಡು, ಹೇಗೂ ನೀನೀಗ ನಿನ್ನ ಗೆಳತಿಯನ್ನು ಅಪವಿತ್ರ ಮಾಡಿಬಿಟ್ಟಿದ್ದೀಯಾ. ಈಗ ನಾವು ಅವಳನ್ನು ಮದುವೆಯಾಗುವ ಒಬ್ಬ ಒಳ್ಳೆಯ ಕ್ಯಾಥೊಲಿಕ್ ವರನನ್ನು ಹುಡಿಕಿದರಾಯ್ತು" ಎಂದು ಪರಿಸ್ಥಿತಿಯನ್ನು ಹಗುರಗೊಳಿಸಲು ಪ್ರಯತ್ನಿಸಿದರು.

ತನ್ನ ತಂದೆ ಸಂದರ್ಭ ಏನೆಂಬುದರ ಬಗ್ಗೆ ಗಂಭೀರವಾಗಿದ್ದಾರೋ ಇಲ್ಲವೋ ಅಥವಾ ತನ್ನ ಕಾಲೆಳೆಯಲೆಂದು ಅವರು ಬೇಕಂತಲೇ ಹೀಗೆ ಮಾಡುತ್ತಿದ್ದಾರೋ ಎಂದು ಇರ್ನೆಗೆ ಯಾವುದೂ ತಿಳಿಯದಂತಾಯ್ತು. ನೇರವಾಗಿ ಅವರನ್ನೇ ಕೇಳಬೇಕೆಂದುಕೊಂಡ ಆಕೆಗೆ ಮತ್ತೇನೆನ್ನಿಸಿತೋ, ಎದ್ದವಳೇ ಒಳಗೆ ನಡೆದುಬಿಟ್ಟಳು.

'ಅಂದರೆ, ತಾನು ಶರ್ಮಿಳಾಳನ್ನು ಅಪವಿತ್ರ ಮಾಡಿದೆ ಎಂದಾಯಿತು !! ಆದರೆ ತಾನು ನಿಜವಾಗಿ ಮಾಡಿದ್ದೇನು ? ಅದಕ್ಕೆ ಅಪವಿತ್ರತೆಯ ಕಳಂಕ ಅಂಟಿಕೊಂಡಿತು. ಅಪವಿತ್ರ ಮಾಡಿದೆ ಎಂದರೆ, ತಾನು ಅವಳನ್ನು ಕೆಡಿಸಿದೆ ಎಂದಾಯ್ತು. ಅಪ್ಪ ಹೇಳುತ್ತಾರೆ ಅವಳನ್ನು ಮದುವೆಯಾಗಲು ಒಬ್ಬ ಕ್ಯಾಥೊಲಿಕ್ ವರನನ್ನು ಹುಡುಕಬೇಕು ಎಂದು. ಆದರೆ ಇದು ಸಾಧ್ಯವೆ ? ಮದುವೆ ಎಂಬುದು ಅವರವರ ವೈಯಕ್ತಿಕ ಆಯ್ಕೆಗೆ ಸಂಬಂಧಿಸಿದ ಪ್ರಶ್ನೆ. ಇದೀಗ ಪಾಲಕರು ತಮ್ಮ ಮಕ್ಕಳಿಗಾಗಿ ಸಂಗಾತಿಗಳನ್ನು ಹುಡುಕುವ ದಿನಗಳೂ ದೂರ ಹೋಗಿವೆ ಎಂದೂ ಅಪ್ಪ ಹೇಳುತ್ತಾರೆ. ಪುಸ್ತಕಗಳಲ್ಲಿಯೂ ನಾವು ಇದನ್ನೇ ಓದುತ್ತಿದ್ದೇವೆ. ಶರ್ಮಿಳಾ ಪಾಪದ ಹುಡುಗಿ. ದೇವರೆ, ಅವಳಿಗೆ ಮಾತ್ರ ಏನೂ ಆಗದಿರಲೆಂದು ಬೇಡುವೆ." ಎಂದು ಮನಸ್ಸಿನಲ್ಲಿಯೇ ಅಂದುಕೊಂಡಳು.

ಸಂಜೆ ಇರ್ನೆ ಹೊರಗೆ ಹೋಗಲೆಂದು ಬಟ್ಟೆ ಬದಲಾಯಿಸಿದಳು. ಅವಳನ್ನು ನೋಡಿದ ತಾಯಿ "ಎಲ್ಲಿಗೆ ಹೊರಟಿರುವೆ ಇರ್ನೆ ?" ಎಂದು ಆಶ್ಚರ್ಯದಿಂದ ಕೇಳುತ್ತಲೇ, "ಓಹೋ... ನಿನ್ನ ಗೆಳತಿಯ ಮನೆಗಾ ?..." ಎಂದು ಉದ್ದೇಶಪೂರ್ವಕವಾಗಿ ಮತ್ತೊಂದು ಮಾತು ಸೇರಿಸಿದಳು.

"ನಾನು ಪ್ರಾರ್ಥನೆಗಾಗಿ ಚರ್ಚ್‌ಗೆ ಹೋಗುತ್ತಿದ್ದೇನಮ್ಮ" ಎಂದಳು ಇರ್ನೆ. ರವಿವಾರದ ಕಡ್ಡಾಯ ಪ್ರಾರ್ಥನೆಗೆ ಹೋಗಲು ಆಗದಿರುವವರಿಗಾಗಿ ಶನಿವಾರ ಸಾಯಂಕಾಲ ಪ್ರಾರ್ಥನಾ ಸಭೆ ಇರುತ್ತಿತ್ತು. ಅಂದು ಸಾಮಾನ್ಯವಾಗಿ ಹೆಚ್ಚು ಜನರ ಗದ್ದಲ ಇರುತ್ತಿರಲಿಲ್ಲವಾದ ಕಾರಣ ಇರ್ನೆ ಆ ದಿನವೇ ಪ್ರಾರ್ಥನೆ ಸೇವೆಗೆ ಹೋಗುತ್ತಿದ್ದಳು.

ಸಾಧ್ಯವಿರುವಷ್ಟು ತನ್ನನ್ನೇ ತಾನು ಸಮಾಧಾನ ಪಡಿಸಿಕೊಳ್ಳುತ್ತ ಇರ್ನೆ ಪ್ರಾರ್ಥನಾ ಸಭೆಯಲ್ಲಿ ಪಾಲ್ಗೊಂಡಳು. ಪ್ರಾರ್ಥನೆ ಮುಗಿದ ನಂತರ ಚರ್ಚ್ ಖಾಲಿಯಾಗುವುದನ್ನು ಕಾಯ್ದು ಅವಳು ಪೂಜ್ಯ ಫಾದರ್ ಅವರನ್ನು ಹಿಂಬಾಲಿಸಿ ಪವಿತ್ರ ಸನ್ನಿಧಾನದೊಳಗೆ ಪ್ರವೇಶಿಸಿದಳು. ಅಲ್ಲಿ ಅವರಿಬ್ಬರನ್ನುಳಿದು ಬೇರಾರೂ ಇರಲಿಲ್ಲ.

"ಫಾದರ್, ನಾನೊಂದು ತಪ್ಪೊಪ್ಪಿಗೆ ಮಾಡಿಕೊಳ್ಳ ಬಯಸುತ್ತೇನೆ" ಇರ್ನೆ ಕೇಳಿಕೊಂಡಳು. ಒಂದು ಕ್ಷಣ ಆಶ್ಚರ್ಯಚಕಿತರಾದ ಫಾದರ್ ಅವಳತ್ತ ನೋಡಿ, ತಲೆ ಅಲ್ಲಾಡಿಸುತ್ತ "ಬಾ ಮಗೂ" ಎಂದರು. ತಮ್ಮ ಶಲ್ಯವನ್ನು ಕುತ್ತಿಗೆಯ ಸುತ್ತ ಸರಿಪಡಿಸಿಕೊಳ್ಳುತ್ತ ಅವರು ಕುಳಿತುಕೊಂಡರು. ಇರ್ನೆ ಅವರೆದುರು ಮಂಡಿಯೂರಿ ಕುಳಿತು, ಎದೆ ಹಾಗೂ ಭುಜ ಮುಟ್ಟಿಕೊಂಡು ಕ್ರಾಸ್ ಚಿಹ್ನೆಗೆ ಗೌರವ ಸಲ್ಲಿಸುವುದರೊಂದಿಗೆ ಬಾಗಿ "ಫಾದರ್, ನಾನೊಂದು ಪಾಪಕೃತ್ಯ ಮಾಡಿರುವೆ. ನನ್ನನ್ನು ಆಶೀರ್ವದಿಸಿ ಕ್ಷಮಿಸಿರಿ" ಎಂದಳು ದೈನ್ಯದಿಂದ.

"ಮಗಳೆ, ನೀನು ಈ ಹಿಂದೆ ಯಾವಾಗ ತಪ್ಪೊಪ್ಪಿಗೆ ಕೇಳಿದ್ದು?"

ಇರ್ನೆ ಅವರ ಪ್ರಶ್ನೆಗೆ ಉತ್ತರಿಸುತ್ತಲೇ "ಫಾದರ್, ನಿನ್ನೆ ನಾನು ಒಂದು ಪಾಪ ಮಾಡಿರುವೆ" ಎಂದು ಮತ್ತೆ ಹೇಳಿದಳು. "ಮಗಳೆ, ದೇವರಲ್ಲಿ ನಂಬಿಕೆ ಇಡು. ನಿನ್ನ ಹೃದಯವನ್ನು ತೆರೆದುಕೋ. ಅಂದರೆ ನೀನು ದೇವರಿಂದ ಕ್ಷಮೆ ಹೊಂದುವಿ" ಫಾದರ್ ಅವರ ಪ್ರೇರಣಾತ್ಮಕ ಮಾತುಗಳಿಂದ ಇರ್ನೆಗೆ ಹೊಸ ಧೈರ್ಯ ಬಂದಂತಾಯ್ತು. ಮತ್ತೆ ಹೇಳತೊಡಗಿದಳು. "ಫಾದರ್, ನಿನ್ನೆ ನಾವು ಶಾಲೆಯ ವತಿಯಿಂದ ವನಭೋಜನಕ್ಕೆ ಹೋಗಿದ್ದೆವು. ನನ್ನ ಗೆಳತಿ ಶರ್ಮಿಳಾ ನನ್ನೊಂದಿಗಿದ್ದಳು. ಊಟ ಮಾಡಲೆಂದು ನಾವಿಬ್ಬರೂ ಒಟ್ಟಿಗೆ ಕುಳಿತೆವು. ನಾನು ಒಯ್ದಿದ್ದ ಗೋಮಾಂಸದ ಬರ್ಗರ್‌ಅನ್ನು ಅವಳಿಗೆ ಕೊಟ್ಟೆ. ಅವಳು ಅದನ್ನು ತಿಂದಳು. ಹಿಂದೂಗಳು ಗೋಮಾಂಸ ತಿನ್ನುವುದಿಲ್ಲ ಎಂದು ನನಗೆ ಗೊತ್ತಿರಲಿಲ್ಲ. ಅದಕ್ಕಾಗಿ ನಾನು ತಪ್ಪು ಮಾಡಿಬಿಟ್ಟೆ. ಫಾದರ್ ನನ್ನನ್ನು ಕ್ಷಮಿಸಿರಿ."

ಫಾದರ್ ಮುಖದ ಮೇಲೆ ನಗುವಿನ ಅಲೆಯೊಂದು ಸುಳಿದಾಡಿತು.

"ಅಷ್ಟೇ ತಾನೆ, ಮಗಳೆ ನೀನೇನೂ ಚಿಂತಿಸಬೇಡ. ಇದು ಕ್ಷಮಾರ್ಹವಾದ ಸಣ್ಣ ಅಪರಾಧ. ಇದಕ್ಕಾಗಿ ನೀನು ಕ್ಷಮೆ ಕೇಳುತ್ತಿರುವಿಯಲ್ಲವೆ ? ನಿನ್ನ ಹೃದಯ ಈಗ ಪರಿಶುದ್ಧವಾಯಿತು."

"ಆದರೆ, ಫಾದರ್, ಇದು ನನ್ನಿಂದಾಗಿ ಅವಳಿಗೆ ತಟ್ಟಿದ ಪಾಪ !!

ಇರ್ನೆಯ ಮಾತನ್ನು ನಡುವೆಯೇ ತಡೆದ ಫಾದರ್ ಅವಳಿಗೆ ಪ್ರಾಯಶ್ಚಿತ್ತ ಮಾಡಿಕೊಳ್ಳಲು ಹೇಳಿದರು. "ಮಗೂ, ನೀನೇನೂ ಚಿಂತೆ ಮಾಡಬೇಡ. ಎಲ್ಲ ಸಮಸ್ಯೆಯನ್ನೂ ಪರಿಹರಿಸಲಾಗುವುದು" ಎನ್ನುತ್ತ ದೇವರಲ್ಲಿ ಪ್ರಾರ್ಥಿಸಿದ ಅವರು, "ದೇವರು ನಿನ್ನನ್ನು ಕ್ಷಮಿಸಿದ್ದಾರೆ. ನೀನೀಗ ದೇವರ ಕೃಪೆಗೆ ಪಾತ್ರಳಾಗಿದ್ದಿ. ಶಾಂತಳಾಗು" ಎಂದು ಆಶೀರ್ವಾದ ಮಾಡಿ ಎದ್ದು ನಿಂತರು.

'ಅದು ಹೇಗೆ ? ದೇವರು ತನ್ನನ್ನೇನೋ ಕ್ಷಮಿಸಿರಬಹುದು. ಆದರೆ ಶರ್ಮಿಳಾಳ ತಂದೆ–ತಾಯಿ ಅವಳನ್ನು ಕ್ಷಮಿಸುತ್ತಾರೆಯೆ ? ಅಥವಾ ದೇವರು ಅವಳನ್ನು ಕ್ಷಮಿಸುತ್ತಾನೆಯೆ ?' ...ಹೀಗೆ ಮತ್ತೆ ಯೋಚನೆಗಳ ತಾಕಲಾಟದ ಮನಃಸ್ಥಿತಿಯಲ್ಲಿಯೇ ಇರ್ನೆ ಮನೆಯ ಕಡೆ ಹೊರಟಳು. ರಾತ್ರಿಯಾಯಿತು... ಮತ್ತೆ ಅದೇ... ಕನಸು ಮರಳಿ ಬಂತು.

ಈ ಸಲದ ಕನಸಿನಲ್ಲಿ ಇರ್ನೆ ಶರ್ಮಿಳಾಳ ಎದುರು ಮಂಡಿಯೂರಿ ಕುಳಿತು ಕ್ಷಮೆ ಬೇಡುತ್ತಿದ್ದಾಳೆ. ಶರ್ಮಿಳಾ ಮಾತ್ರ ಅವಳತ್ತ ಗಮನ ಕೊಡದೆ ತಿರಸ್ಕಾರದ ಮಾತುಗಳನ್ನಾಡುತ್ತಿದ್ದಾಳೆ. "ತಪ್ಪು ಮಾಡಿದ್ದು ನೀನು, ಅದಕ್ಕಾಗಿ ನಾನು ದಂಡ ತೆರಬೇಕೆ ? ನೋಡಿಲ್ಲಿ ಹೇಗಿವೆ..." ಎನ್ನುತ್ತ ತನ್ನ ಬೆನ್ನು ಮತ್ತು ಕೈ–ಕಾಲುಗಳ ಮೇಲೆ ಮೂಡಿದ್ದ ಹೊಡೆತದ ಬಾರುಗಳನ್ನು ತೋರಿಸುತ್ತಾಳೆ. "ಅಯ್ಯೋ ಶರ್ಮಿಳಾ, ನನ್ನಿಂದ ತಪ್ಪಾಯ್ತು. ನೀನು ನಿಷ್ಪಾಪಿ ಹುಡುಗಿ. ಯಾರು ನಿನ್ನನ್ನು ಹೊಡೆದದ್ದು ? ನಿಜವಾಗಿ ನೋಡಿದರೆ ಈ ಹೊಡೆತ ನನಗೆ ಬೀಳಬೇಕು..." "ನೊಂದುಕೊಂಡ ಇರ್ನೆ ಹೀಗೆನ್ನುತ್ತಿರುವಾಗಲೆ ದೊಡ್ಡ ದನಿಯೊಂದು ಕೇಳಿಬರುತ್ತದೆ. '...ಹಾಂ ...ನಿನಗೂ ಕಾದಿದೆ... ನೀನೇನೂ ಹೊಡೆತಗಳಿಂದ



ತಪ್ಪಿಸಿಕೊಳ್ಳುವೆನೆಂದು ಭಾವಿಸಬೇಡ..." ಹೀಗೆ ಚೀರುತ್ತ ಧಡೂತಿ ಆಸಾಮಿಯೊಂದು ತನ್ನ ಕೆಂಗಣ್ಣುಗಳನ್ನು ತಿರುಗಿಸುತ್ತ, ಇರ್ನೆಯನ್ನು ದುರುಗುಟ್ಟಿ ನೋಡುತ್ತ ಅವಳ ಎದುರಿಗೇ ಬಂದು ನಿಂತಿದೆ. ಬಹುಶಃ ಅವರು ಶರ್ಮಿಳಾಳ ತಂದೆಯೇ ಇರಬೇಕು. "ಶರ್ಮಿಳಾಳನ್ನು ಅಪವಿತ್ರಗೊಳಿಸಿದ್ದು ನೀನೆ ತಾನೆ ?... ಹೌದೋ ಅಲ್ಲವೋ...?"

"ಇಲ್ಲ...ಇಲ್ಲ...ಇಲ್ಲ...."

"ಇಲ್ಲ ಅನ್ನುತ್ತೀಯಾ ?... ನೀನೇ ಮಾಡಿದ್ದಲ್ಲವೇ ಆ ಕೆಲಸವನ್ನು? ...ಹೌದು ನೀನೇ ಮಾಡಿದ್ದು..." ಎನ್ನುತ್ತ ಆ ಧಡೂತಿ ಮನುಷ್ಯ ತನ್ನ ಕೈಯಲ್ಲಿದ್ದ ಕೋಲನ್ನು ಮೇಲಕ್ಕೆತ್ತಿತು. ಇನ್ನೇನು ತನಗೆ ಹೊಡೆತ ಬೀಳುತ್ತದೆಯೆಂದು ಹೆದರಿದ ಇರ್ನೆ ಗಂಟಲಲ್ಲಿ ಉಸಿರು ಕಟ್ಟಿದಂತಾಗಿ ಕಿಟಾರನೇ ಚೀರಿಕೊಳ್ಳಲು ಪ್ರಯತ್ನಿಸುತ್ತಾಳೆ. ಆದರೆ...

"ಯಾಕೆ ಮಗಳೆ ಏನಾಯ್ತು ? ಏನಾದ್ರೂ ಕೆಟ್ಟ ಕನಸು ಬಿತ್ತೆ ?" ತಾಯಿ ಅವಳನ್ನು ಹತ್ತಿರಕ್ಕೆ ಎಳೆದು ಅಪ್ಪಿಕೊಳ್ಳುತ್ತ ಕೇಳಿದಳು. ಇರ್ನೆ ಜೋರಾಗಿ ಅಳತೊಡಗಿದಳು.

"ಏ...ಅದಕ್ಯಾಕಮ್ಮ ಹೆದರ್ತೀ ? ಏನೋ ಕೆಟ್ಟ ಕನಸು ಬಿದ್ದಿರಬೇಕು. ಮುಗಿದು ಹೋಯ್ತಲ್ಲ ಈಗ ಅದು. ಏಳು ಒಂದಿಷ್ಟು ನೀರು ಕುಡಿದು ಮಲಗಿಕೋ, ಏನೂ ಆಗೋದಿಲ್ಲ" ಎಂದು ಸಮಾಧಾನಪಡಿಸಿದಳು ಅವಳ ತಾಯಿ.

ರವಿವಾರ ಇಡೀ ದಿನ ಇರ್ನೆ ತನ್ನ ಫೋನನ್ನು ಬಂದ್ ಮಾಡಿ ಇಟ್ಟುಬಿಟ್ಟಳು. 'ಶರ್ಮಿಳಾ ತನ್ನನ್ನು ಏನಾದರೂ ಪ್ರಶ್ನಿಸಿದರೆ ಅವಳಿಗೇನು ಉತ್ತರ ಹೇಳುವುದು ? ಹೌದು, ನಾಳೆ ಶಾಲೆಯಲ್ಲಿ ಶರ್ಮಿಳಾ ಕಂಡಕೂಡಲೇ ಅವಳಲ್ಲಿ ಕ್ಷಮೆ ಕೇಳಬೇಕು. ಆದರೆ... ಅವಳು ಈಗಲೇ ಇಲ್ಲಿಗೆ ಬಂದರೆ ಏನು ಮಾಡುವುದು ? ಅವಳ ತಂದೆ, ತಾಯಿ ಕೂಡ ಅವಳೊಂದಿಗೆ ಬಂದರೆ ಏನು ಗತಿ ? ಅವರು ನನ್ನ ತಂದೆ–ತಾಯಿಯರೊಂದಿಗೆ ಹೊಡೆದಾಡಿದರೆ ಹೇಗೆ ? ಇಂಥ ಹೊತ್ತಲ್ಲಿ ನಾನು ಹೊರಗೆ ಹೋಗಿ ಸಿಲೇನಾ ಆಂಟಿಯೊಂದಿಗೆ ಇಡೀ ದಿನ ಕಳೆದರೆ ಒಳ್ಳೆಯ ದಲ್ಲವೆ ?... ಅಯ್ಯೋ ...ನಾನು ಹಾಗೇನಾದರೂ ಮಾಡಿದರೆ ಶರ್ಮಿಳಾಳ ತಂದೆ, ತಾಯಂದಿರನ್ನು ನನ್ನ ಅಪ್ಪ, ಅಮ್ಮ ಮಾತ್ರ ಎದುರಿಸಬೇಕಾಗುತ್ತದೆ ಯಲ್ಲವೆ ? ...ಇರಲಿ, ಏನಾಗುತ್ತದೆಯೋ ಆಗಲಿ...' ಹೀಗೆ ಏನೇನನ್ನೋ ಯೋಚನೆ ಮಾಡುತ್ತ ಇರ್ನೆ ತನ್ನ ತಾಯಿಯನ್ನು ಗಟ್ಟಿಯಾಗಿ ಅಪ್ಪಿಕೊಂಡು ಮಲಗಿಬಿಟ್ಟಳು. ತಾಯಿಯ ಬಿಸಿ ಅಪ್ಪುಗೆಯಲ್ಲಿ ಮಲಗಿದ ಅವಳಿಗೆ ಆ ರಾತ್ರಿ ಯಾವ ಕನಸೂ ಬೀಳಲಿಲ್ಲ. ಅವಳಿಗೆ ಒಳ್ಳೆಯ ನಿದ್ದೆಯೇನೂ ಬರಲಿಲ್ಲ.

ಬೇಗನೇ ಶಾಲೆ ತಲುಪಿದ ಇರ್ನೆ ಪ್ರಾರ್ಥನಾ ಸಭೆಯ ಸಮಯದವರೆಗೆ ಯಾರಿಗೂ ಕಾಣದಂತೆ ಕುಳಿತಳು. ಶರ್ಮಿಳಾ ತನಗಾಗಿ ಕಾಯುತ್ತಿರಬಹುದೆಂದು ಊಹಿಸಿದ ಅವಳು, ಅವಳ ಕಣ್ಣಿಗೆ ಬೀಳದ ಹಾಗೆ ದೂರದಿಂದಲೇ ಅವಳನ್ನು ನೋಡುತ್ತಿದ್ದಳು. ಪ್ರಾರ್ಥನೆ ಮುಗಿದ ನಂತರ ಇರ್ನೆ




ಸಾಂದ್ರಾಳೊಂದಿಗೆ ಮಾತನಾಡುತ್ತ ನಡೆಯ ತೊಡಗಿದಳು. ಶರ್ಮಿಳಾ ತನ್ನನ್ನು ದೂರದಿಂದ ಕರೆಯುತ್ತಿದ್ದರೂ ಅದು ಕೇಳಿಸದವರ ಹಾಗೆ ನಟಿಸುತ್ತ ವರ್ಗದ ಕೋಣೆಯ ಒಳಗೆ ನಡೆದುಬಿಟ್ಟಳು. ಆದರೆ ಅವಳು ಬೆಂಚ್ ಮೇಲೆ ಕುಳಿತುಕೊಳ್ಳಬೇಕು ಎನ್ನುವಷ್ಟರಲ್ಲಿಯೇ ಶರ್ಮಿಳಾ ಅವಳ ಬಳಿಗೆ ಓಡುತ್ತ ಬಂದು "ಅರೆ, ಇರ್ನೆ ನಿನ್ನೆ ಮತ್ತು ಮೊನ್ನೆ ನೀನು ಎಲ್ಲಿದ್ದಿಯೇ ? ನಾನು ನಿನಗೆ ಅದೆಷ್ಟು ಸಲ ಫೋನ್ ಮಾಡಿದೆ ಗೊತ್ತಾ ? ಏನೇ ಯಾಕೆ ಫೋನ್ ತೊಗೊಳ್ಳಿಲ್ಲ ? ಹಾಗೇಕೆ ಮಾಡಿದೆ ? ...ಏ !! ಇದೇನೇ...ನಿನ್ನ ಕಣ್ಣು ನೋಡಿದರೆ ನೀನು ನಿನ್ನೆ ರಾತ್ರಿ ತಡವಾಗಿ ಮಲಗಿದಂತೆ ಕಾಣುತ್ತೆ !! ನನಗೆ ಗೊತ್ತು ಒಂದು ಸಲ ನೀನು ಪುಸ್ತಕ ಓದಲು ಶುರು ಮಾಡಿದೆಯೆಂದರೆ ಮುಗಿದೇ ಹೋಯ್ತು. ಅದು ಮುಗಿಯುವವರೆಗೂ ಮಲಗುವವಳಲ್ಲ ನೀನು. ನಿನ್ನೆ ಎಷ್ಟೊತ್ತಿಗೆ ಮಲಗಿದೆಯೇ ? ಆ ಪುಸ್ತಕವನ್ನು ಓದಿ ಮುಗಿಸಿಯೇ ಬಿಟ್ಟೆಯಾ ?..." ಹೀಗೇ ಬಿಟ್ಟೂ ಬಿಡದೆ ಪ್ರಶ್ನೆಗಳನ್ನು ಕೇಳುತ್ತಲೇ ಇದ್ದಳು ಶರ್ಮಿಳಾ. ಇನ್ನೇನು ಅವಳ ಪ್ರಶ್ನೆಗಳಿಗೆ ಇರ್ನೆ ಉತ್ತರಿಸಬೇಕು ಎನ್ನುವಷ್ಟರಲ್ಲಿಯೇ ಟೀಚರ್ ಕ್ಲಾಸ್‌ರೂಮಿನ ಒಳಗೆ ಬಂದುಬಿಟ್ಟಿದ್ದರಾದ ಕಾರಣ ಶರ್ಮಿಳಾ ಅಲ್ಲಿಂದ ಹೊರಟು, ತನ್ನ ಜಾಗೆಯಲ್ಲಿ ಕುಳಿತುಕೊಂಡುಬಿಟ್ಟಳು "ಓ... ದೇವರೆ, ಪುಣ್ಯಕ್ಕೆ ಬರ್ಗರ್‌ನ ವಿಷಯ ಬರಲಿಲ್ಲವಲ್ಲ !!... ನಿನಗೆ ಧನ್ಯವಾದ. ...ಅಂದರೆ, ಶರ್ಮಿಳಾಳ ಮನೆಯಲ್ಲಿ ಅದರ ಬಗ್ಗೆ ಏನೂ ಗದ್ದಲ ನಡೆದಿಲ್ಲ ಎಂದಾಯಿತು. ...ಅಬ್ಬಾ, ಒಳ್ಳೆಯದೇ ಆಯ್ತು" ಎಂದುಕೊಳ್ಳುತ್ತ ಇರ್ನೆ ತನ್ನ ಪುಸ್ತಕವನ್ನು ತೆರೆದಳು.

ಮಧ್ಯಾಹ್ನದ ಬಿಡುವಿನ ಸಮಯದಲ್ಲಿ ಇರ್ನೆ ಇನ್ನೇನು ಎದ್ದು ನಿಲ್ಲಬೇಕೆನ್ನುವಷ್ಟರಲ್ಲಿಯೇ ಶರ್ಮಿಳಾ ಅವಳ ಹತ್ತಿರವೇ ಓಡಿ ಬಂದಳು. ಅವಳ ಕೈಗಳನ್ನು ಗಟ್ಟಿಯಾಗಿ ಹಿಡಿದುಕೊಂಡು, "ಬಾ, ನಿನ್ನೊಂದಿಗೆ ಮಾತಾಡುವುದಿದೆ" ಎನ್ನುತ್ತ ಅವಳನ್ನು ಹೊರಗೆ ಕರೆದೊಯ್ದಳು.

"ಹೇಳು... ನಿನ್ನಿನ ಆ ಬರ್ಗರ್ ಇತ್ತಲ್ಲ. ...ಓ...!!" ಇರ್ನೆಯ ಹೃದಯ ಜೋರಾಗಿ ಬಡಿದುಕೊಳ್ಳ ತೊಡಗಿತು. "ಅದು ನಿನ್ನ ಅಮ್ಮ ತಯ್ಯಾರಿಸಿದ್ದಾ...?" ಶರ್ಮಿಳಾ ಮತ್ತೊಂದು ಪ್ರಶ್ನೆ ಕೇಳಿದಳು.

ಇರ್ನೆಗೆ ಏನು ಹೇಳಬೇಕೆಂಬುದೇ ಹೊಳೆಯುತ್ತಿಲ್ಲ. ಸುಳ್ಳು ಮಾತ್ರ ಹೇಳಬಾರದೆಂದುಕೊಂಡ ಅವಳು "ಆಂ ...ಹೌದು" ಎಂದಷ್ಟೇ ಉತ್ತರಿಸಿದಳು.

"ಆ ಬರ್ಗರ್‌ನ್ನು ಹೇಗೆ ಮಾಡುತ್ತಾರೆ ?" ಶರ್ಮಿಳಾಳ ದನಿಯಲ್ಲಿ ಬರ್ಗರ್‌ನ ವಿವರಗಳನ್ನು ತಿಳಿದುಕೊಳ್ಳುವ ಕುತೂಹಲ ಇತ್ತು. ಅವಳ ತಾಯಿಗೆ ಸಂಶಯ ಬಂದು, ಅದರ ರಹಸ್ಯವೇನೆಂಬುದನ್ನು ತಿಳಿದುಕೊಳ್ಳಲು ಹೇಳಿದ್ದರೆಂದು ತೋರುತ್ತದೆ. "ಅದನ್ನು ಹೇಗೆ ಮಾಡುತ್ತಾರೋ ಏನೋ... ನನಗೆ ಗೊತ್ತಿಲ್ಲ..." ಎಂದಷ್ಟೇ ಉತ್ತರಿಸಿದಳು ಇರ್ನೆ.

"ಓಹೋ... ಹಾಗಾ ? ...ಇರಲಿ ಬಿಡು. ನಾನು ನಿನಗೆ ನಂತರ ಫೋನ್ ಮಾಡುತ್ತೇನೆ. ಬರ್ಗರ್‌ನ ಬಗೆಗೆ ನಿನ್ನ ತಾಯಿಯ ಜೊತೆ ಮಾತಾಡಿ ನನಗೆ ಹೇಳು. ಇದೇ ತರದ ರುಚಿಯ ಬರ್ಗರ್ ತಯಾರಿಸಿ ಕೊಡಲು ನಾನು ನನ್ನ ತಾಯಿಗೆ ಕೇಳಿರುವೆ. ಆ ಬರ್ಗರ್‌ಅನ್ನು ನಾನು ಎಷ್ಟು ಖುಷಿ ಪಟ್ಟು ತಿಂದೆ ಗೊತ್ತಾ ? ಓಹ್ !! ಅದು ತುಂಬ ರುಚಿಕರವಾಗಿತ್ತು" ಎಂದಳು ಶರ್ಮಿಳಾ.

ಸಂಜೆ ಹೇಳಿದ ಸಮಯಕ್ಕೆ ಸರಿಯಾಗಿ ಶರ್ಮಿಳಾ ಫೋನ್ ಮಾಡಿಯೇ ಬಿಟ್ಟಳು. ಇರ್ನೆಗೆ ಸುಳ್ಳು ಹೇಳುವುದು ಇಷ್ಟವಿರಲಿಲ್ಲವಾದರೂ ಅವಳು ಫೋನ್‌ನಲ್ಲಿ, "ಕ್ಷಮಿಸು ಶರ್ಮಿಳಾ. ಅಮ್ಮ ಎಲ್ಲೋ ಹೊರಗೆ ಹೋಗಿದ್ದಾರೆ. ಆದರೆ ನಾನು ಅವರನ್ನು ಕೇಳಿದಾಗ, ಇದೇ ಬಗೆಯ ರುಚಿಕರ ಬರ್ಗರ್‌ಗಳು ಆಹಾರ ಪದಾರ್ಥ ಮಾರುವ ಯಾವುದೇ ಅಂಗಡಿಗಳಲ್ಲೂ ಸಿಗುತ್ತವೆ ಎಂದು ಹೇಳಿದರು" ಎಂದು ಸುಳ್ಳು ಹೇಳಿದಳು.

"ಹೌದು ಇರ್ನೆ, ಬರ್ಗರ್‌ಗಳು ಯಾವುದೇ ಅಂಗಡಿಗಳಲ್ಲೂ ಸಿಗುತ್ತವೆ ಎಂಬುದು ನನಗೂ ಗೊತ್ತು. ಆದರೆ ನಿಮ್ಮ ಅಮ್ಮ ಮಾಡಿದ ಆ ಬರ್ಗರ್‌ಅನ್ನು ಯಾವ ಹೆಸರಿನಿಂದ ಕರೆಯುತ್ತಾರೆ ?" ಶರ್ಮಿಳಾ ಮತ್ತೆ ಕೇಳಿದಳು.

ಇರ್ನೆ ಈಗ ಇಕ್ಕಟ್ಟಿನಲ್ಲಿ ಸಿಕ್ಕಿಕೊಂಡಳು. ಆದರೆ ಆ ಸಮಯಕ್ಕೆ ಏನಾದರೊಂದು ಉತ್ತರ ಹೇಳಲೇಬೇಕಲ್ಲವೆ ?

"ಶರ್ಮಿಳಾ, ಖಂಡಿತ ನನಗದು ಗೊತ್ತಿಲ್ಲ. ಒಂದು ಕೆಲಸ ಮಾಡು, ಯಾವುದಾದರೂ ಅಂಗಡಿಗೆ ನೀನೇ ಹೋಗಿ ಕೇಳಿ ಪ್ರಯತ್ನಿಸು" ಎಂದು ಆ ಸಂಭಾಷಣೆಗೆ ಕೊನೆ ಹೇಳಿದಳು.

ಮರುದಿನ ಇರ್ನೆ, ಶರ್ಮಿಳಾಳ ಪುಸ್ತಕವನ್ನು ವಾಪಸು ಕೊಡುವ ನೆವದಲ್ಲಿ ಆ ಪುಸ್ತಕದ ಬಗೆಗೇ ಹೆಚ್ಚು ಮಾತಾಡುತ್ತ, "ನಿನ್ನೆ ನನ್ನ ಅಪ್ಪ, ಏನಮ್ಮ, ಈಗ ಏನು ಓದ್ತಾ ಇದ್ದೀ ಎಂದು ಕೇಳಿದರು. ನಾನು 'ಪ್ರೈಡ್ ಅಂಡ್ ಪ್ರಿಜುಡೀಸ್' ಓದ್ತಾ ಇದ್ದೇನೆಂದು ಹೇಳಿದೆ. ಅವರು ಆಶ್ಚರ್ಯಪಟ್ಟು, ನೋಡೋಣ ಆ ಪುಸ್ತಕ ತೋರಿಸು ಎಂದರು. ನಾನು ಅವರಿಗೆ ಆ

ಪುಸ್ತಕವನ್ನು ತೋರಿಸಿದೆ. ಅವರು ತುಂಬ ಖುಷಿಪಟ್ಟು, "ಓ, ಗುಡ್, ನೀನು ಇಂಥ ಒಳ್ಳೆಯ ಪುಸ್ತಕಗಳನ್ನೇ ಓದಬೇಕು" ಎನ್ನುತ್ತ, "ನೋಡು ನೀನು ಓದುತ್ತಿರುವುದು ಸಂಗ್ರಹಿತ ಆವೃತ್ತಿ. ಇದು ಓದಲು ತುಂಬ ಸುಲಭ. ಆದರೆ ದೊಡ್ಡವಳಾದ ಮೇಲೆ ನೀನು ಮೂಲ ಕಾದಂಬರಿಯನ್ನು ಪೂರ್ತಿಯಾಗಿ ಓದಬೇಕು ಎಂದರು" ಎಂದೆಲ್ಲಾ ವಿವರ ಕೊಡುತ್ತ ಅವಳು ಬರ್ಗರ್‌ನ ವಿಷಯದ ಪ್ರಸ್ತಾಪ ಬಾರದ ಹಾಗೆ ನೋಡಿಕೊಂಡಳು.

"ಹೌದು, ನನ್ನ ತಂದೆ ಕೂಡ ಹಾಗೇ ಹೇಳುತ್ತಾರೆ. ನಾವೀಗ ಚಾರ್ಲಸ್ ಡಿಕನ್ಸ್‌ನ 'ಆಲಿವರ್ ಟ್ವಿಸ್ಟ್' ಓದಿದೆವಲ್ಲವೆ ? ಇಂಥ ಎಷ್ಟೋ ಒಳ್ಳೆಯ ಪುಸ್ತಕಗಳಿವೆ. ಅಂಥವುಗಳನ್ನು ನನಗಾಗಿ ತಂದುಕೊಡುತ್ತೇನೆಂದು ಅಪ್ಪ ಹೇಳಿದ್ದಾರೆ."

ಶರ್ಮಿಳಾಳ ಮನೆಯಲ್ಲಿ ಅವಳು ಗೋಮಾಂಸದ ಬರ್ಗರ್ ತಿಂದ ವಿಷಯವೇ ಗೊತ್ತಾಗಿಲ್ಲವೆಂದು ತಿಳಿದ ಇರ್ನೆಗೆ ಒಂದು ಕಡೆ ಸ್ವಲ್ಪ ಸಮಾಧಾನವಾದರೂ, ಅವಳೊಳಗಿನ ಅಪರಾಧಿ ಪ್ರಜ್ಞೆ ಕಡಿಮೆಯಾಗಲಿಲ್ಲ. 'ಗೊತ್ತಿದ್ದೋ, ಇಲ್ಲ ಗೊತ್ತಿಲ್ಲದೆಯೋ ಶರ್ಮಿಳಾ ಪಾಪವನ್ನಂತೂ ಮಾಡಿದ್ದಾಳಲ್ಲವೆ ? ...ಹಾಗಿದ್ದರೆ, ಗೊತ್ತಿಲ್ಲದೆಯೇ ಮಾಡಿದ್ದು ಪಾಪವಾಗಬಲ್ಲುದೆ ? ಸದ್ಯದ ಮಾತು ಏನೇ ಇರಲಿ, ಮುಂದೆ ಕೆಲವು ದಿನಗಳ ನಂತರ ಸತ್ಯವೇನೆಂಬುದು ಅವಳಿಗೆ ಗೊತ್ತಾದರೆ ಹೇಗೆ ?' ಇರ್ನೆಯ ತಲೆಯಲ್ಲಿ ಮತ್ತೆ ತಾಕಲಾಟ ಸುರುವಾಯಿತು.

ಇದೆಲ್ಲವನ್ನೂ ತಾಯಿಗೆ ಹೇಳಿದಾಗ ಅವರು "ಇರ್ನೆ, ನೀನು ಸದ್ಯ ನಿನ್ನ ಗೆಳತಿಯಿಂದ ದೂರ ಇದ್ದುಬಿಡು. ಯಾಕಂದರೆ, ಇಂದಲ್ಲ ನಾಳೆ ಈ ವಿಷಯ ಅವರ ಮನೆಯಲ್ಲಿ ಗೊತ್ತಾಗಿಬಿಟ್ಟರೆ, ಅದಕ್ಕೆ ನೀನೇ ಹೊಣೆಗಾರಳಾಗುತ್ತಿ. ಅದಕ್ಕಾಗಿ ನೀನೇ ಅವಳೊಂದಿಗೆ ಒಂದಿಷ್ಟು ಅಂತರವನ್ನು ಕಾಯ್ದುಕೊಂಡುಬಿಟ್ಟರೆ ಒಳ್ಳೆಯದಲ್ಲವೇ ?" ಎಂದು ಉಪದೇಶ ಮಾಡಿದ್ದರು.

ಆದರೆ ಇರ್ನೆಗೆ ತಾಯಿಯ ಉಪದೇಶ ಹಿಡಿಸಿರಲಿಲ್ಲ. ಆದರೂ ಅವರ ಮಾತಿನಲ್ಲಿಯ ಸತ್ಯಾಂಶ ಮಾತ್ರ ಅವಳಿಗೆ ಅರ್ಥವಾಗಿತ್ತು. ಅದಾದ ನಂತರ ಅವಳು ಶರ್ಮಿಳಾಳನ್ನು ದೂರವಿಡತೊಡಗಿದಳು. ಅವಳು ತನ್ನ ಹತ್ತಿರ ಬರುವ ಸಂದರ್ಭಗಳಲ್ಲಿ ತಾನು ಮತ್ತೊಬ್ಬರ ಜೊತೆಗೆ ಮಾತಾಡುತ್ತಿರುವಂತೆ ನಟಿಸ ತೊಡಗಿದಳು. ಮುಖ್ಯವಾಗಿ ಮಧ್ಯಾಹ್ನದ ಊಟದ ಹೊತ್ತಿನಲ್ಲಿ ಅವಳು ಶರ್ಮಿಳಾಳನ್ನು ಸೂಕ್ಷ್ಮವಾಗಿ ಗಮನಿಸತೊಡಗಿದಳು. ಆದರೆ ಅವಳೊಂದಿಗೆ ಮರೆಯಾಗಿ ದೂರ ಇರುವುದು ಇರ್ನೆಗೆ ಸುಲಭದ ಮಾತಾಗಿರಲಿಲ್ಲ. ಏಕೆಂದರೆ ಅವರು ತುಂಬ ಹತ್ತಿರದ ಸ್ನೇಹಿತೆಯರಾಗಿ ಒಬ್ಬರಿಗೊಬ್ಬರು ಹೊಂದಿಕೊಂಡಿದ್ದರು. ಈ ಬಗೆಯ ಗಾಢ ಸ್ನೇಹವೇ ಅವಳನ್ನು ಶರ್ಮಿಳಾಳಿಂದ ದೂರ ಇಡುವಲ್ಲಿ ಅಡ್ಡ ಬಂದಿತ್ತು.

ಮರುದಿನ ಮಧ್ಯಾಹ್ನ ಇರ್ನೆ ತನ್ನ ಟಿಫಿನ್ ಬಾಕ್ಸನ್ನು ತೆರೆದು ತಿಂಡಿ ತಿನ್ನುವ ಹೊತ್ತಲ್ಲಿ ಶರ್ಮಿಳಾ ಅವಳ ಹತ್ತಿರ ಬರತೊಡಗಿದಳು. ಅವಳು ಹಾಗೆ ಬರುತ್ತಿರುವುದನ್ನು ಗಮನಿಸಿದ ಇರ್ನೆ ತನ್ನ ಬಾಕ್ಸ್‌ನಲ್ಲಿದ್ದ ಗೋಮಾಂಸದ ತಿಂಡಿಯ ಕೊನೆಯ ತುಂಡನ್ನು ಒಮ್ಮೆಲೇ ಇಡಿಯಾಗಿ ಬಾಯಲ್ಲಿ ತುರುಕಿಕೊಂಡು ಅವಸರವಸರವಾಗಿ ತಿನ್ನತೊಡಗಿದಳು. ಅದನ್ನು ನೋಡಿದ ಶರ್ಮಿಳಾ,

"ಏ... ಆಸೆಬುರುಕ ಗುಡ್ಡೆ... ಹಾಗೇಕೆ ಗಬಗಬ ತಿನ್ನುತ್ತಿರುವಿ ? ನಿಧಾನವಾಗಿ ತಿನ್ನೇ... ನೋಡಿಲ್ಲಿ; ನನ್ನ ತಾಯಿ ಏನು ಮಾಡಿದ್ದಾರೆ ಗೊತ್ತಾ ?... ಕುಂಬಳಕಾಯಿಯ ಕಡಬು !!" ಎನ್ನುತ್ತಲೇ ಅದರ ಒಂದು ತುಂಡನ್ನು ಖುಷಿಯಿಂದ ಇರ್ನೆಯ ಬಾಕ್ಸ್‌ನಲ್ಲಿ ಇಟ್ಟಳು. ಆ ಸಿಹಿಕಡುಬನ್ನು ತಿಂದ ಇರ್ನೆಯ ಕಣ್ಣು ಏಕಾಏಕಿ ತುಂಬಿಬಂದವು. ಅದರ ಕಾರಣವೇನೆಂಬುದನ್ನು ಅವಳಿಗೆ ತಿಳಿಯಲಾಗಲಿಲ್ಲ.

ಮರುದಿನ ಮುಂಜಾನೆ ಶಾಲೆಯಲ್ಲಿ ಶರ್ಮಿಳಾ ಇರ್ನೆಯ ಹತ್ತಿರ ಓಡಿ ಬಂದವಳೇ, "ಇವತ್ತು ನಿನಗೊಂದು ಅಚ್ಚರಿ ಕೊಡುವೆ !! ಮಧ್ಯಾಹ್ನದ ಬಿಡುವಿನಲ್ಲಿ ಭೆಟ್ಟಿಯಾಗೋಣ" ಎಂದವಳೇ ತಿರುಗಿ ಹೋಗಿಬಿಟ್ಟಳು. ಏನಾದರೂ ಒಳ್ಳೆಯ ಸುದ್ದಿ ಇರಬಹುದೆಂದುಕೊಂಡ ಇರ್ನೆಗೆ ಬಿಡುವಿನ ಸಮಯದವರೆಗೆ ಕಾಯಲಾಗದಷ್ಟು ಕುತೂಹಲ !! ಮೊದಲನೆಯ ಪೀರಿಯಡ್ ಮುಗಿದ ಕೂಡಲೇ ಅವಳು ಶರ್ಮಿಳಾಳ ಡೆಸ್ಕ್‌ನ ಹತ್ತಿರ ಹೋಗಿ, "ಹೇಳು... ಏನದು ಅಚ್ಚರಿಯ ವಿಷಯ ?" ಎಂದು ಕೇಳಿದಳು.

ಶರ್ಮಿಳಾ ಒಮ್ಮೆಲೇ ತನ್ನ ಬ್ಯಾಗನ್ನು ತೆರೆದಳು. ಅದರ ಮೇಲ್ಭಾಗದಲ್ಲಿಯೇ ಪ್ರಾಣಿಗಳು ಗುಂಪುಗೂಡಿ ನಿಂತ ಒಂದು ಚಿತ್ರ ಕಾಣಿಸಿತು. ಅದನ್ನು ನೋಡಬೇಕೆನ್ನುವುದರೊಳಗೇ ಟೀಚರ್ ಒಳಗೆ ಬಂದ ಕಾರಣ ಇರ್ನೆ ಮತ್ತೆ ತಿರುಗಿ ತನ್ನ ಜಾಗೆಯತ್ತ ಹೋಗಿಬಿಟ್ಟಳು. 'ಶರ್ಮಿಳಾ ಕೆಲವು ದಿನಗಳಿಂದ ಯಾವುದೋ ಒಂದು ಪುಸ್ತಕದ ಬಗ್ಗೆ ಮಾತಾಡುತ್ತಲೇ ಇದ್ದಾಳೆ. ಬಹುಶಃ ಅವಳು ತೋರಿಸಿದ ಆ ಚಿತ್ರ ಹಲವಾರು ಪ್ರಾಣಿಗಳು ಹೊಲದಲ್ಲಿ ಗುಂಪಾಗಿ ಒಂದೇ ಕಡೆ ವಾಸವಿದ್ದ ಕಥೆಯ ಪುಸ್ತಕದ್ದಾಗಿರಬೇಕು. ಒಂದೇ ಕಡೆ ಇದ್ದರೂ ಮಾನವರು ಒಬ್ಬರಿಗೊಬ್ಬರು ಹೊಡೆದಾಡುವ ಹಾಗೂ ವೈರತ್ವದಿಂದ ಒಬ್ಬರು ಇನ್ನೊಬ್ಬರ ಕಾಲನ್ನು ಎಳೆಯುವ ಸ್ಥಿತಿಗೆ ವ್ಯಂಗ್ಯ ಮಾಡುತ್ತಿರುವ ಹಾಗಿರಬೇಕು ಆ ಚಿತ್ರದ ಪುಸ್ತಕ' – ಹೀಗೆಂದು ಊಹಿಸಿದ ಇರ್ನೆಗೆ ಆ ಪುಸ್ತಕವನ್ನು ಓದಬೇಕೆಂಬ ತೀವ್ರ ಹಂಬಲ ಉಂಟಾಯಿತು.

ಊಟದ ಬಿಡುವಿನಲ್ಲಿ ಶರ್ಮಿಳಾ, ಇರ್ನೆಯ ಕೈ ಗಟ್ಟಿಯಾಗಿ ಹಿಡಿದು ಅವಳನ್ನು ಎಳೆದುಕೊಂಡೇ ಹೊರಗೆ ಬಂದು "ನೋಡು... ಆಶ್ಚರ್ಯವನ್ನು..." ಎಂದಳು.

"ಇದು ಪ್ರಾಣಿಗಳು ಒಂದೇ ಕಡೆ ವಾಸವಿರುವ ಹೊಲದ ಪುಸ್ತಕ... ಅಲ್ಲವೇ ? ಎಂದಳು ಇರ್ನೆ.

"ಊಹೂಂ... ಖಂಡಿತ ಅಲ್ಲ. ಇದು ಬರ್ಗರ್ ಕಣೇ... ನಿಮ್ಮ ಅಮ್ಮ ಮಾಡಿದ್ದರಲ್ಲ; ಅಂಥದ್ದೇ ಬರ್ಗರ್ ಇದು !!" ಎನ್ನುತ್ತ ಬಾಕ್ಸನ್ನು ಬಿಚ್ಚಿದಳು ಶರ್ಮಿಳಾ. "ನೋಡು ನಮ್ಮ ಮನೆಯ ಹತ್ತಿರವೇ ತಿಂಡಿ–ತಿನಿಸುಗಳ ಒಂದು ಅಂಗಡಿ ಇದೆ. ನಾನು ಕೇಳಿದೆ ಅಂತ ನನ್ನ ತಂದೆ ಮೊನ್ನೆ ಅಲ್ಲಿಗೆ ಹೋಗಿ ನನಗಾಗಿ ಒಂದು ಬರ್ಗರ್‌ಅನ್ನು ತಂದಿದ್ದರು. ಅದನ್ನು ನೋಡಿದ ನಾನು – ಅಪ್ಪ, ನನಗೆ ಬೇಕಾಗಿರುವ ಬರ್ಗರ್ ಇದಲ್ಲ; ಇರ್ನೆ ನನಗೆ ಕೊಟ್ಟಿದ್ದಳಲ್ಲ ಅದು ಇದಕ್ಕಿಂತ ಬೇರೆಯದೇ ಆಗಿತ್ತು" ಎಂದಿದ್ದೆ. ನನ್ನ ಮಾತನ್ನು ಕೇಳಿದ ಅವರು "ಓಹೋ... ಬಹುಶಃ ಅದು ಗೋಮಾಂಸದ ಬರ್ಗರ್ ಆಗಿದ್ದಿರಬೇಕು" ಎಂದರಷ್ಟೇ ಅಲ್ಲ, ಮತ್ತೆ ಅದೇ ಅಂಗಡಿಗೆ ಹೋಗಿ ಈ ಬರ್ಗರ್‌ಗಳನ್ನು ತಂದರು. ಇವುಗಳಿಗೆ, ನೀನು ಕೊಟ್ಟಿದ್ದೆಯಲ್ಲ ಆ ಬರ್ಗರ್‌ಗಳ ರುಚಿಯೇ ಇದೆ. ಇಲ್ನೋಡು, ನಾನು ಅದರಲ್ಲಿ ಎರಡು ಬರ್ಗರ್‌ಗಳನ್ನು ತಂದಿರುವೆ. ಒಂದು ನಿನಗೆ ಮತ್ತೊಂದು ನನಗೆ.

ಇರ್ನೆಗೋ ಅತ್ಯಾಶ್ಚರ್ಯ !! ಮುಖದ ಮೇಲೆ ಮುಗುಳ್ನಗೆ ತಂದುಕೊಂಡು, "ಅರೆ...!! ಹಾಗಿದ್ದರೆ ನೀವು ಮನೆಯಲ್ಲಿ ಗೋಮಾಂಸದ ಬರ್ಗರ್‌ಗಳನ್ನು ತಿನ್ನುತ್ತೀರಾ ?..." ಎಂದು ಕುತೂಹಲದಿಂದ ಕೇಳಿದಳು.

"ಖಂಡಿತವಾಗಿ. ಆದರೆ ನಮ್ಮ ಅಜ್ಜಿ ಮಾತ್ರ ತಿನ್ನುವುದಿಲ್ಲ. ಉಳಿದ ನಾವೆಲ್ಲರೂ ಖುಷಿಯಿಂದ ತಿನ್ನುತ್ತೇವೆ" ಖಚಿತ ದನಿಯಲ್ಲಿ ಉತ್ತರಿಸಿದಳು ಶರ್ಮಿಳಾ.


ಕೊಂಕಣಿ ಮೂಲ : **ದಾಮೋಧರ ಮೌಜೋ**
ಕನ್ನಡಕ್ಕೆ : **ಡಾ॥ ಬಸವರಾಜ ಸಾದರ**
(ಆಕಾಶವಾಣಿಯ ನಿವೃತ್ತ ಕೇಂದ್ರ ನಿರ್ದೇಶಕ)
ನಂ. ೨೨೭/ಎ, ಮೊದಲ ಮಹಡಿ, ೩೭ನೇ ಅಡ್ಡರಸ್ತೆ
೨ನೆಯ ಬ್ಲಾಕ್, ರಾಜಾಜಿನಗರ, ಬೆಂಗಳೂರು – ೫೬೦ ೦೧೦

# ಅಂಬಾ ಶಪಥ

ಡಾ॥ ಸುಲತಾ ವಿದ್ಯಾಧರ್

ಬದುಕು ಎಂದರೆ ಹೀಗೇನೇ ! ಎಷ್ಟೊಂದು ಕಲೆಗಳಿದ್ದರೂ ಎಲ್ಲವೂ ಎಲ್ಲರಿಗೂ ಸಿದ್ಧಿಸುವುದಕ್ಕೆ ಸಾಧ್ಯವಿಲ್ಲ, ಸಿದ್ಧಿಸಲೂ ಬಾರದು. ಎಲ್ಲರೂ ಪರಿಪೂರ್ಣರಾದರೆ ಅಪರಿಪೂರ್ಣತೆ ಎಂಬುದು ಎಲ್ಲಿರುತ್ತದೆ ? ಇದು ಲೋಕದ ನಿಯಮ ಇಂದಿಗೂ ನನಗೊಲಿಯದ ಕಲೆಗಳಿಂದ ದೂರ ಉಳಿದಿದ್ದೇನೆ. ಅಂತಹ ಕಲೆಗಳ ಬಗೆಗೆ ಅತೀವ ಗೌರವವಿದೆ. ಪಾಲಿಗೆ ಬಂದದ್ದೇ ಪಂಚಾಮೃತ ಎಂದು ತಿಳಿದು ಬದುಕುವುದರಲ್ಲೇ ಬದುಕಿನ ಜಾಣತನವಿದೆ.

**ಮೊ**ನ್ನೆ ಮಧ್ಯಾಹ್ನ ಊಟಕ್ಕೆಂದು ಕಾಲೇಜಿನಿಂದ ಕೆಳಗಿಳಿದು ಬರುವಾಗ ಪಿ.ಯು.ಸಿ.ಯ ಹುಡುಗಿಯೊಬ್ಬಳು ಹಣೆಗೆ ಬ್ಯಾಂಡೇಜ್ ಸುತ್ತಿಕೊಂಡ ಸ್ಥಿತಿಯಲ್ಲಿ ಎದುರಾದಳು. "ಏನಾಯ್ತಮ್ಮಾ ಹಣೆಗೆ" ಎಂದೆ. "ಬಿದ್ದದ್ದು ಮಿಸ್" ಎಂದಳು. "ಎಲ್ಲಿ ? ಹೇಗೆ ? ತುಂಬಾ ಪೆಟ್ಟಾಗಿದೆಯಾ ?" ಪ್ರಶ್ನೆಯ ಮೇಲೆ ಪ್ರಶ್ನೆ ಹಾಕಿದೆ. "ಬಾತ್‌ರೂಂನಲ್ಲಿ ಜಾರಿ ಬಿದ್ದೆ. ಸ್ವಲ್ಪ ಗಾಯವಾಗಿದೆ. ಮೂರು ಸ್ಟಿಚ್ ಹಾಕಿದ್ದಾರೆ" ಎಂದಳು. "ಸ್ವಲ್ಪ ಜಾಗ್ರತೆಯಾಗಿ ನಡೀಬಾರ್ದಾ, ಎಂತಹ ಅನಾಹುತ ಮಾಡ್ಕೊಂಡೆ" ! ಎನ್ನುವಾಗ ಅವಳ ಜೊತೆಗಿದ್ದ ಹುಡುಗಿ ಕಿಸಕ್ಕನೆ ನಕ್ಕಳು. ನನಗೆ ತೆಳುವಾದ ಕೋಪ ಬಂದು, "ಅದರಲ್ಲಿ ನಗೊದೇನಿದೆ ? ಕಾಲು ಜಾರಿದ್ರೆ ಆನೆನೂ ಬೀಳುತ್ತೆ. ನೋವು ತಿಂದದ್ದು ಇವಳು, ನಿನಗೆ ನಗು ಅಲ್ವೇ" ಎಂದೆ. ಆಗ ಆಕೆಗೆ ಸ್ವಲ್ಪ ಮುಜುಗರವಾದಂತಾಗಿ "ಹಾಗಲ್ಲ ಮಿಸ್, ಅವಳು ಬಾಗಿಲು ಹಾಕಿಕೊಂಡು ಬಟ್ಟೆ ಒಗೀತಾ ಇದ್ಲು, ಆಗ ಬಿದ್ದದ್ದು" ಎಂದಳು. "ಏನಪ್ಪಾ , ಈ ಮಕ್ಕಳದ್ದು ಒಂದೂ ಅರ್ಥವಾಗುವುದಿಲ್ಲ. ಬೀಳೊದಕ್ಕೆ ಬಾಗಿಲು ಹಾಕಿಕೊಂಡ್ರೂ ಬೀಳ್ತೀವಿ, ಹಾಕದಿದ್ರೂ ಬೀಳ್ತೀವಿ ಅದರಲ್ಲೇನು ? ಎಂದೆ. ಆಗ ಬ್ಯಾಂಡೇಜ್ ಸುತ್ತಿಕೊಂಡಿದ್ದ ಹುಡುಗಿ, "ಮಿಸ್ ಅವಳು ನಗಾಡಿದ್ದು ಅದಕ್ಕಲ್ಲ ನನಗೆ ಬಟ್ಟೆ ಒಗಿಯೋದಕ್ಕೆ ಬರೋದಿಲ್ಲ. ನಾನು ಒಗಿಯೋದು ನೋಡಿದ್ರೆ ಎಲ್ಲರೂ ನಗ್ತಾರೆ ಅಂತ ಬಾಗಿಲು ಹಾಕ್ಕೊಂಡು ಒಗಿತಾ ಇದ್ದೆ. ಹಾಗಾಗಿ ನಾನು ಬಿದ್ದದ್ದು ಬೇರೆಯವರಿಗೆ ತಿಳಿಯುವುದು ತಡವಾಗಿ ಸ್ವಲ್ಪ ಜಾಸ್ತಿ ಬ್ಲಡ್ ಹೋಯಿತು. ನನಗೆ ಸ್ವಲ್ಪ ಹೊತ್ತು ಏನಾಯ್ತಂತಾನೇ ಗೊತ್ತಾಗಲಿಲ್ಲ. ಬಾಗಿಲು ತೆರೆದು ಬೇರೆಯವರನ್ನು ಕರೆದೆ" ಎಂದಳು. "ಓಹೋ ವಿಷಯ ಹೀಗಾ, ಸರಿ. ಎಲ್ಲರೂ ಎಲ್ಲವನ್ನೂ ಹುಟ್ಟುವಾಗ್ಲೇ ಕಲಿತುಕೊಂಡು ಬರೋದಿಲ್ಲ. ಯಾರೂ ಸರ್ವಜ್ಞರಿಲ್ಲ ಈ ಲೋಕದಲ್ಲಿ. ಕಲಿಯದೆ ಯಾವ ವಿದ್ಯೇನೂ ಬರೋಲ್ಲ. ತಪ್ಪು ಮಾಡಿಯೇ ಸರಿಯಾಗೋದು. ಅದಕ್ಕೆಲ್ಲ ತಲೆ ಬಿಸಿ ಮಾಡೋದು ಬ್ಯಾಡ. ಹೋಗು, ಜೋಪಾನ" ಎಂದು ಕಳಿಸಿಕೊಟ್ಟೆ .

ಈ ಹುಡುಗಿಯ ಪೇಚಾಟದ ಬಗ್ಗೆ ಯೋಚಿಸುತ್ತಾ ಹೆಜ್ಜೆ ಹಾಕುವಾಗ ನನಗೆ ತಕ್ಷಣ ನೆನಪಾದದ್ದು ನನ್ನ ಎಂ.ಎ. ವಿದ್ಯಾರ್ಥಿ ಜೀವನದಲ್ಲಿ ಮಾಡಿದ ಕಿತಾಪತಿ. ಮುಂಬಯಿಯ ಹಾಸ್ಟೆಲಿನಲ್ಲಿ ಇದ್ದಾಗ ಒಂದು ಸಂಜೆ ಗೆಳತಿ ವನಿತಾಳ ರೂಮಿಗೆ ಹೋಗಿ ಮಾಡಿದ ಸರ್ಕಸ್ ಇಂಥದ್ದೇ ಅಲ್ವೇ. ಯಕ್ಷಗಾನದ ಗಂಧ ಗಾಳಿಯೂ ಗೊತ್ತಿಲ್ಲದ ನನಗೆ ಒಮ್ಮಿಂದೊಮ್ಮೆಗೇ ಯಕ್ಷಗಾನದ ಹುಚ್ಚು ಹುಟ್ಟಿಕೊಂಡದ್ದೇ ಹಾಸ್ಟೆಲಿನಲ್ಲಿ. ಯಕ್ಷಗಾನ ಮಾತ್ರವಲ್ಲ, ಅನೇಕ ಹುಚ್ಚುಗಳಿಗೂ ಸಾಮಾನ್ಯವಾಗಿ ಹಾಸ್ಟೆಲ್‌ಗಳೇ ತವರೂರಾಗಿರುತ್ತವೆ. ಎಂ.ಎ. ಓದುವಾಗ ನಾನಿದ್ದ ಹಾಸ್ಟೆಲ್‌ನಲ್ಲಿ ಊರಿನಿಂದ ಹೋದ ನಾಲ್ಕು ಮಂದಿ ಹುಡುಗಿಯರಿದ್ದರು. ಪ್ರತಿದಿನ ಕ್ಲಾಸ್ ಮುಗಿಸಿ ಹೋದಮೇಲೆ ಯಾರಾದರೊಬ್ಬರ ರೂಮಲ್ಲಿ ಕುಳಿತು ಹರಟೆ ಹೊಡೆಯುವುದನ್ನು ರೂಢಿಸಿಕೊಂಡಿದ್ದೆವು. ಹೀಗೆ ಒಂದು ಸಂಜೆ ಹರಟೆ ಹೊಡೆಯುತ್ತಾ ಕೂತ ನಮಗೆ ಕುಣಿಯುವ ಹುಚ್ಚು ಹಿಡಿಯಿತು. ಹಾಗಾಗಿ ಒಬ್ಬೊಬ್ಬರೂ ತಮ್ಮ ತಮ್ಮ ಇಷ್ಟದ ಕಲೆಯನ್ನು ಸಾದರಪಡಿಸುವುದೆಂದು ತೀರ್ಮಾನಿಸಿದೆವು. ಪ್ರಜ್ಞಳೋ ಭರತನಾಟ್ಯ ಕಲಾವಿದೆ. ಹಾಗಾಗಿ ಗೆಜ್ಜೆ ಇಲ್ಲದೆಯೂ ಹೆಜ್ಜೆ ಹಾಕಿದಳು. ಉಷಾ, ಪ್ರತಿಮಾರಂತೂ ಹಾಡುವುದರಲ್ಲಿ ಎತ್ತಿದ ಕೈ. ಸುಶ್ರಾವ್ಯವಾಗಿ ಹಾಡಿ ಸಂಗೀತರಸವನ್ನೇ ಉಣಬಡಿಸಿದರು. ಅವರ ರಾಗಕ್ಕೆ ಪ್ರತಿಸ್ಪರ್ಧಿ ಎನ್ನುವಂತೆ ವನಿತಾಳ ರಾಗ ಆರಂಭವಾಯಿತು. ಕೊನೆಯ ಸರದಿ ನನ್ನದು. ಏನು ಮಾಡುವುದು ? ಸಂಗೀತ ಕಲೆ ನನಗೆ ಸಿದ್ಧಿಸಿರಲಿಲ್ಲ. ಸಂಗೀತ ಮಾತ್ರವಲ್ಲ, ಯಾವ ಕಲೆಯೂ ನನಗೆ ಪೂರ್ಣವಾಗಿ ಸಿದ್ಧಿಸಿರಲಿಲ್ಲ. ಈಗಲೂ ಸಿದ್ಧಿಸಿಲ್ಲ. ಆ ಮಾತು ಬೇರೆ. ಯಾಕೋ ಏನೋ ನನಗೆ ಯಕ್ಷಗಾನ ಕುಣಿಯುವ ಆಸೆಯಾಯಿತು.



ಎಲ್ಲೋ ರಾತ್ರಿಯ ತೂಕಡಿಕೆಯಲ್ಲಿ ಕೆಲವೊಂದು ಯಕ್ಷಗಾನಗಳನ್ನು ಅರ್ಧಂಬರ್ಧ ನೋಡಿದ್ದೆನೇ ಹೊರತು ಆ ಕಲೆಗೆ ಅದರದ್ದೇ ಆದ ಒಂದು ಶಿಸ್ತಿದೆ ಎನ್ನುವುದು ನನ್ನಂತಹ ಎಡಬಿಡಂಗಿಗೆ ಹೇಗೆ ಗೊತ್ತಾಗಬೇಕು. ರೂಮಿನ ಬಾಗಿಲು ಹಾಕಿದರೆ ಮಾತ್ರ ಕುಣಿಯೋದು ಎಂದು ಮೊದಲೇ ತಾಕೀತು ಮಾಡಿದೆ. ಸರಿ, ನನ್ನ ಕುಣಿಕೆ ಶುರುವಾಯಿತು ಉಷಾ ಪ್ರತಿಮಾರಂತೂ ನಗು ತಡೆಯಲಾರದೆ ಎರಡೂ ಕೈಗಳನ್ನು ಬಾಯಿಗೊತ್ತಿಕೊಂಡು ಕಷ್ಟಪಟ್ಟು ಕುಳಿತರು. ಪ್ರೇಕ್ಷಕರ ಪ್ರೋತ್ಸಾಹ ಇಲ್ಲದಿದ್ದರೆ ಹುರುಪು ಬರುತ್ತದೆಯೇ ? ನನ್ನ ಕುಣಿತದ ವೇಗ ಹೆಚ್ಚುತ್ತಾ ಹೋದಂತೆ ಗೆಳತಿಯರ ಚಪ್ಪಾಳೆಗಳು ಜೋರಾದವು. ಗಿರಗಿರನೆ ತಿರುಗಲು ಆರಂಭಿಸಿದೆ. ತಿರುಗಿದ ರಭಸಕ್ಕೆ ಕಣ್ಣು ಕತ್ತಲೆಯಾದಂತಾಗಿ ಬಿದ್ದುಬಿಟ್ಟೆ. ಬದಿಯಲ್ಲಿದ್ದ ಟೇಬಲ್ಲಿನ ತುದಿಗೆ ಹಣೆ ಬಡಿಯಿತು. ಎಚ್ಚರಾಗುವಾಗ ನಾನು ವನಿತಾಳ ತೊಡೆಯ ಮೇಲೆ ತಲೆ ಇಟ್ಟು ಮಲಗಿದ್ದೆ. ಬಿದ್ದ ಹೊಡೆತಕ್ಕೆ ರಕ್ತ ಚಿಮ್ಮಿ ವನಿತಾಳ ಬಟ್ಟೆ, ನನ್ನ ಬಟ್ಟೆ ಎಲ್ಲಾ ರಕ್ತಮಯ. ಆದರೂ ಬಾಗಿಲು ತೆಗೆದು ಬೇರೆಯವರನ್ನು ಕರೆಯುವ ಮನಸ್ಸನ್ನು ಯಾರೂ ಮಾಡಲಿಲ್ಲ. ಪೆಟ್ಟಾದದ್ದಕಿಂತ ಎಲ್ಲರಲ್ಲೂ ಇದ್ದ ದೊಡ್ಡ ಚಿಂತೆಯೆಂದರೆ ಮರುದಿನ ಕೇಳುವವರಿಗೆಲ್ಲ ಯಾವ ಕಾರಣ ಹೇಳುವುದು ಎನ್ನುವುದಾಗಿತ್ತು. "ದಯವಿಟ್ಟು ಯಕ್ಷಗಾನ ಕುಣಿದು ಬಿದ್ದೆ ಅಂತ ಯಾರಿಗೂ ಹೇಳ್ಬೇಡಿ ಜಾರಿ ಬಿದ್ದಿದ್ದು ಎಂದು ಹೇಳಬೇಕು" ಎಂದು ಆಜ್ಞೆ ಮಾಡಿದೆ. ಹಾಸ್ಟೆಲಿನಲ್ಲಿ ಪ್ರತಿಯೊಬ್ಬರಿಗೂ ಪ್ರತ್ಯೇಕ ರೂಮು ಗಳಿದ್ದವು. ನಾನು ಮಾತ್ರ ಆ ರಾತ್ರಿ ವನಿತಾಳ ರೂಮಲ್ಲೇ ಮಲಗಿಬಿಟ್ಟೆ. ಗೆಳತಿಯರು ನನ್ನನ್ನು ಅಲ್ಲಿಯೇ ಹತ್ತಿರವಿದ್ದ ವೈದ್ಯರ ಹತ್ತಿರ ಕರೆದುಕೊಂಡು ಹೋಗಿ ಬ್ಯಾಂಡೇಜ್ ಹಾಕಿಸಿಕೊಂಡು ಬಂದರು. ಅಂತೂ ವೈದ್ಯರು ಹಣೆಗೆ ಮೂರು ಅಡ್ಡ ಪಟ್ಟಿ ಬಿಗಿದರು.

ಮರುದಿನ ಈ ನೋವಿನಿಂದ ಜ್ವರವೂ ಕಾಣಿಸಿಕೊಂಡು ತರಗತಿಗೆ ಹೋಗಲಾಗದೆ ರೂಮಲ್ಲೇ ಮಲಗಿದೆ. ನನ್ನ ಸೀನಿಯರ್ ಗೆಳತಿ ಸವಿತಾ ತನ್ನ ಮಾವನ ಮನೆಯಿಂದ ಯುನಿವರ್ಸಿಟಿಗೆ ಬರುತ್ತಿದ್ದಳು. ನನ್ನನ್ನು ಆ ದಿನ ಕ್ಯಾಂಪಸ್‌ನಲ್ಲಿ ನೋಡದ ಆಕೆ ಗೆಳತಿಯರಲ್ಲಿ ವಿಚಾರಿಸಿದಾಗ 'ಜಾರಿ ಬಿದ್ದು ಹಣೆಗೆ ಪೆಟ್ಟಾಗಿದೆ. ಸ್ವಲ್ಪ ಜ್ವರವೂ ಇದೆ. ಹಾಗಾಗಿ ಬರಲಿಲ್ಲ' ಎಂದರಂತೆ. ಈ ಸುದ್ದಿ ಜಗಜ್ಜಾಹೀರಾಗಿ ತರಗತಿಗಳು ಮುಗಿದ ಮೇಲೆ ಸ್ನೇಹಿತರೆಲ್ಲಾ ಹಾಸ್ಟೆಲಿಗೆ ಲಗ್ಗೆ ಇಟ್ಟರು. ಬಂದವರದ್ದೆಲ್ಲಾ ಒಂದೇ ಪ್ರಶ್ನೆ: "ಹೇಗೆ ಬಿದ್ದೆ ? ಎಲ್ಲಿ ಬಿದ್ದೆ ?" ನನಗೆ ಒಳಗೊಳಗೇ ನನ್ನ ಮೂರ್ಖತನಕ್ಕೆ ನಗು ಬರುತ್ತಿತ್ತಾದರೂ ಅದನ್ನು ಹೇಳಿಕೊಳ್ಳುವುದಕ್ಕಾಗದೆ ಒತ್ತರಿಸಿ ಬರುತ್ತಿದ್ದ ನಗುವನ್ನು ನಾನೂ, ನನ್ನ ಗೆಳತಿಯರೂ ತಡೆಹಿಡಿದುಕೊಂಡೆವು. ಇನ್ನೂ ತಮಾಷೆ ಯೆಂದರೆ ನನ್ನನ್ನು ಮಾತನಾಡಿಸುವುದಕ್ಕೆ ಹುಡುಗರ ದಂಡೂ ಬಂತು. ಪಾಪ ನಮ್ಮ ತರಗತಿಯ ಸಂಜೀವನಂತೂ ಬರುವಾಗ ಎರಡು ಪ್ಯಾಕೆಟ್ ಬ್ರೆಡ್ಡು ಹಾಗೂ ಒಂದು ಡಜ಼ನ್ ಬಾಳೆಹಣ್ಣನ್ನೂ ತೆಗೆದುಕೊಂಡು ಬಂದ. ಈಗ ಮಾತ್ರ ತಡೆಹಿಡಿದುಕೊಂಡಿದ್ದ ನನ್ನ ಹಾಗೂ ಗೆಳತಿಯರ ನಗು ಕನ್ನಂಬಾಡಿ ಅಣೆಕಟ್ಟು ಒಡೆದ ಹಾಗೇ ಒಮ್ಮೆಲೇ ಒಡೆದುಹೋಯಿತು. ಇನ್ನು ಸತ್ಯ ಹೇಳದೆ ಸುಮ್ಮನಿರುವುದಕ್ಕೆ ಸಾಧ್ಯವಾಗಲಿಲ್ಲ. ಎಲ್ಲರೂ ನಕ್ಕಿದ್ದೇ ನಕ್ಕಿದ್ದು. ಒಂದು ತಿಂಗಳವರೆಗೆ ಮೂರು ಅಡ್ಡ ಪಟ್ಟಿಗಳನ್ನು ಹಣೆಯ ಮೇಲಿಟ್ಟುಕೊಂಡೇ ತಿರುಗಿದೆ. ಯಕ್ಷಗಾನ ಕಲೆ ನನ್ನ ತಲೆಗೆ ಹತ್ತದಿದ್ದರೂ ಅದರ ಹುಚ್ಚು ಕುಣಿತ ಮಾತ್ರ ಹಣೆಯಲ್ಲಿ ಶಾಶ್ವತವಾದ ದಾಖಲೆಯೊಂದನ್ನು ಉಳಿಸಿ ಹೋಗಿದೆ. ಇಷ್ಟಾದರೂ ನನ್ನ ಯಕ್ಷಗಾನದ ಹುಚ್ಚು ಮುಗೀತು ಅಂತೀರಾ ? ಖಂಡಿತಾ ಇಲ್ಲ. ಎಂ.ಎ. ಮುಗಿಸಿದ ನಂತರ ಆಳ್ವಾಸ್ ಕಾಲೇಜಿನಲ್ಲಿ ಉಪನ್ಯಾಸಕಿಯಾಗಿ ಸೇರಿಕೊಂಡೆ. ನಮ್ಮ ಸಂಸ್ಥೆಯಲ್ಲಿ 'ಧೀಂಕಿಟ ಯಕ್ಷಗಾನ ತರಬೇತಿ ಕೇಂದ್ರ ಸ್ಥಾಪನೆಯಾದ ಆರಂಭದಲ್ಲಿ ಉಪನ್ಯಾಸಕ ವೃಂದಕ್ಕೆ ತರಬೇತಿ ನೀಡಿ ಯಕ್ಷಗಾನ ಪ್ರದರ್ಶನ ನಡೆಸುವುದೆಂದು ಸಂಸ್ಥೆ ತೀರ್ಮಾನಿಸಿತು. ನಾನೂ ಸೇರಿಕೊಂಡೆ ತಕ್ಕಮಟ್ಟಿಗೆ ಹೆಜ್ಜೆಗಳನ್ನು ಕಲಿತದ್ದಾಯಿತು. ಆ ಹೆಜ್ಜೆಗಳ ಪರಿಚಯ ದೇವರಾಣೆಗೂ ಈಗಿಲ್ಲ. 'ಅಂಬಾ ಶಪಥ' ಎಂಬ ಯಕ್ಷಗಾನ ಪ್ರಸಂಗವನ್ನು ನಿರ್ಧರಿಸಿ ನನಗೆ ಅಂಬೆಯ ಪಾತ್ರವನ್ನೂ ನೀಡಿದರು. ಪ್ರದರ್ಶನದ ದಿನ ಬಂದೇ ಬಿಟ್ಟಿತು. ನನ್ನ ಗ್ರಹಚಾರಕ್ಕೆ ಅಂಬೆಯ ವೇಷ ಹಾಕಿ ನಿಂತ ನನ್ನ ಕಾಲಿಗೆ ಗೆಜ್ಜೆಯೆನೋ ಬಂತು, ಆದರೆ ಹೆಜ್ಜೆಗಳೆಲ್ಲಾ ಮರೆತುಹೋಗಿ ಸಂಭಾಷಣೆಯಷ್ಟೇ ತಲೆಯಲ್ಲಿ ಉಳಿಯಿತು. ಅಂಬೆಯ ಪೇಚಾಟ ಕೇಳಬೇಕೇ ? ಸೊರಗಿದ ಮುಖದ ಅಂಬೆಯ ಶಕ್ತಿಹೀನ ಆರ್ಭಟ ಎಂಥವರಿಗೂ ನಗು ತರಿಸಬೇಕು. ಎಂತೆಂತಹ ಅದ್ಭುತ ಪ್ರದರ್ಶನಗಳು ಸಂಸ್ಥೆಯಲ್ಲಿ ನಡೆಯುವಾಗ ಅವುಗಳ ನಡುವೆ ನಾನು ಮಾತ್ರ ಪೇಚಾಟದ ಪಾತ್ರಗಳನ್ನೇ ಹುಡುಕುತ್ತೇನೆ. ಆಗ ನನ್ನೊಳಗಿನ ಅಂಬೆ ಅಣಕಿಸುತ್ತಾಳೆ. ಈ ಪೇಚಾಟಕ್ಕೆ ಸಿಲುಕಿದ ನಾನು ಅಂಬೆಯ ಹಾಗೆಯೇ ಶಪಥ ಮಾಡಿದೆ. 'ಇನ್ನು ಮುಂದೆ ನಾನು ಯಕ್ಷಗಾನದ ಪಾತ್ರ ಮಾಡುವುದೇ ಇಲ್ಲ' ಎಂಬುದೇ ನನ್ನ ಆ ಶಪಥ. ಆದರೆ ನನ್ನ ಶಪಥದ ಕಾರಣವೇ ಬೇರೆ. ಅಂಬೆ ಏನಾದರೂ ಎದುರಿಗೆ ಇರುತ್ತಿದ್ದರೆ ಒಂದೋ ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದಳು ಇಲ್ಲವೇ ನನ್ನ ವಿರುದ್ಧ ಮಾನನಷ್ಟ ಮೊಕದ್ದಮೆ ಹೂಡುತ್ತಿದ್ದಳು. ಅಂತೂ ಸಿದ್ಧಿಸದೆ ಇರುವ ಕಲೆಯನ್ನು ಬಲಾತ್ಕಾರವಾಗಿ ಮೈಮೇಲೆ ಎಳೆದುಕೊಳ್ಳುವುದು ಎಂತಹ ದೊಡ್ಡ ಅಪರಾಧ ಎನ್ನುವುದು ಗೊತ್ತಾದದ್ದು ಆಗಲೆ.

ಅಂದ ಹಾಗೆ ನಾನು ಬಾಗಿಲು ಹಾಕಿಕೊಂಡು ಯಕ್ಷಗಾನ ಕುಣಿದು ಬಿದ್ದದ್ದು ಹಾಗೂ ನನ್ನ ವಿದ್ಯಾರ್ಥಿನಿ ಬಾಗಿಲು ಹಾಕಿಕೊಂಡು ಬಟ್ಟೆ ಒಗಿಯಲು ಹೋಗಿ ಬಿದ್ದದ್ದು ಇವೆರಡರ ಸಂದರ್ಭ ಬೇರೆ ಬೇರೆಯಾದರೂ ಸ್ವಾರಸ್ಯ ಒಂದೇ ಅಲ್ಲವೇ? ಬಟ್ಟೆ ಒಗಿಯುವ ಕಲೆ ನನಗೆ ಬಾಲ್ಯದಿಂದಲೇ ಸಿದ್ಧಿಸಿತ್ತು. ಹಾಗಿರುವಾಗ ಯಕ್ಷಗಾನದ ವಿಷಯದಲ್ಲಿ ಯಾಕೆ ಹೀಗೆ ? ಯೋಚಿಸುತ್ತಾ ಹೋದಂತೆ ಅರ್ಥವಾಯಿತು. ಬಟ್ಟೆ ಒಗಿಯುವುದೂ ಎಷ್ಟಾದರೂ ಹೆಣ್ಣು ಕಲೆಯಲ್ಲವೇ ? ಅದು ಸಿದ್ಧಿಸಲೇಬೇಕು ತಾನೇ? ಆದರೆ ಯಕ್ಷಗಾನವೋ ! ಅದೂ ಗಂಡು ಕಲೆ. ಹೆಣ್ಣಾದ ನನಗೆ ಅಷ್ಟು ಸುಲಭದಲ್ಲಿ ಸಿದ್ಧಿಸಬೇಕೆಂದರೆ ಹೇಗೆ ? ಹಾಗಾಗಿ ನನ್ನಂಥವರಿಂದ ಗಂಡು ಕಲೆಯಾದ ಯಕ್ಷಗಾನಕ್ಕೆ ಅಪಚಾರವಾಗುವುದು ಬೇಡ ಎಂಬ ತೀರ್ಮಾನಕ್ಕೆ ಬರಲೇಬೇಕಾಯಿತು.

ಈ ಕಲೆಗಳಲ್ಲೂ ಎಷ್ಟೊಂದು ತಾರತಮ್ಯ ಅಲ್ವೇ ! ಕೆಲವು ವರ್ಷಗಳ ಹಿಂದೆ ನಮ್ಮ ಸಂಸ್ಥೆಗೆ ಬಂದಿದ್ದ ಸ್ವತಃ ಕಲಾವಿದರೂ ಆಗಿದ್ದ ಪುರುಷ ಶ್ರೇಷ್ಠರೊಬ್ಬರು 'ತಾಳಮದ್ದಲೆ'ಯ ಬಗ್ಗೆ ಮಾತನಾಡುತ್ತ, "ನಮ್ಮ ಹೆಂಗಸರು ಬಾಯಿಪಾಠ ಮಾಡಿ ತಾಳಮದ್ದಲೆಗೆ ಅರ್ಥ ಹೇಳುತ್ತಾರೆ" ಎಂದು ವ್ಯಂಗ್ಯವಾಡಿದ್ದರು. ಅವರ ಈ ಮಾತಿಗೆ ಅಲ್ಲಿದ್ದ ಪುರುಷ ಶ್ರೇಷ್ಠರೊಂದಿಗೆ ಕೆಲವು ಹೆಂಗಸರೂ ಜೋರಾಗಿ ಚಪ್ಪಾಳೆ ಹೊಡೆದರು. ಅಲ್ಲಾ, ಈ ಚಪ್ಪಾಳೆಗಳನ್ನು ಎಲ್ಲಿ, ಹೇಗೆ ಹೊಡೆಯಬೇಕೆಂಬ ಸಾಮಾನ್ಯ ಜ್ಞಾನ ಕೆಲವೊಮ್ಮೆ ವಿದ್ಯಾವಂತರಾದವರಲ್ಲೂ ಇರುವುದಿಲ್ಲ, ಅಲ್ವೇ ? ಚಪ್ಪಾಳೆ ಎನ್ನುವುದನ್ನು ಸಭೆಯಲ್ಲಿ ಕಡ್ಡಾಯವಾಗಿ ಪಾಲಿಸಲೇಬೇಕಾದ ನಿಯಮ ಎಂದು ಭಾವಿಸುವವರೂ ಇದ್ದಾರೆ. ಈ ಚಪ್ಪಾಳೆಯ ಶಬ್ದದಿಂದ ಆ ಕಲಾವಿದರಂತೂ ತಾವು ಜಗತ್ತಿನ ವಿಸ್ಮಯಗಳಲ್ಲಿ ಒಂದನ್ನು ಅನ್ವೇಷಣೆ ಮಾಡಿದೆ ಎನ್ನುವಂತೆ ಉಬ್ಬಿದರು. ಬಾಯಿಪಾಠ ಮಾಡದೆ ಯಾವುದಾಗುತ್ತೇ ಹೇಳಿ ? ಪ್ರಾಥಮಿಕ ಶಾಲೆಯಲ್ಲಿ ಅಧ್ಯಾಪಕರು ಮಗ್ಗಿ ಬಾಯಿಪಾಠ ಮಾಡಿಸಿದ್ದರಿಂದಲ್ಲವೇ ನಾವೀಗ ಲೆಕ್ಕದಲ್ಲಿ ಪರಿಣತರಾಗಿರುವುದು ? ಬದುಕಿನ ಕೂಡು, ಕಳೆ, ಗುಣಿಸು, ಭಾಗಿಸು ಇವಕ್ಕೆಲ್ಲಾ ಅದೇ ಮೂಲ ಅಲ್ಲವೇ ?

ಹೌದು, ಬದುಕು ಎಂದರೆ ಹೀಗೇನೇ ! ಎಷ್ಟೊಂದು ಕಲೆಗಳಿದ್ದರೂ ಎಲ್ಲವೂ ಎಲ್ಲರಿಗೂ ಸಿದ್ಧಿಸುವುದಕ್ಕೆ ಸಾಧ್ಯವಿಲ್ಲ, ಸಿದ್ಧಿಸಲೂ ಬಾರದು. ಎಲ್ಲರೂ ಪರಿಪೂರ್ಣ ರಾದರೆ ಅಪರಿಪೂರ್ಣತೆ ಎಂಬುದು ಎಲ್ಲಿರುತ್ತದೆ ? ಇದು ಲೋಕದ ನಿಯಮ ಇಂದಿಗೂ ನನಗೊಲಿಯದ ಕಲೆಗಳಿಂದ ದೂರ ಉಳಿದಿದ್ದೇನೆ. ಅಂತಹ ಕಲೆಗಳ ಬಗೆಗೆ ಅತೀವ ಗೌರವವಿದೆ. ಪಾಲಿಗೆ ಬಂದದ್ದೇ ಪಂಚಾಮೃತ ಎಂದು ತಿಳಿದು ಬದುಕುವುದರಲ್ಲೇ ಬದುಕಿನ ಜಾಣತನವಿದೆ. ಏನಂತೀರಿ ?

ಡಾ॥ ಸುಲತಾ ವಿದ್ಯಾಧರ್
'ವಾತ್ಸಲ್ಯ', ಒಂಟಿಕಟ್ಟೆ, ಮೂಡಬಿದರೆ – ೫೭೪ ೨೨೭, ದಕ್ಷಿಣ ಕನ್ನಡ ಜಿಲ್ಲೆ

## ಅಭಿನಂದನೆಗಳು ...........

ಕರ್ನಾಟಕ ಲೇಖಕಿಯರ ಸಂಘದ ೨೦೧೪–೧೫ನೇ ಸಾಲಿನ 'ಎಚ್. ವಿ. ಸಾವಿತ್ರಮ್ಮ ದತ್ತಿ ಪ್ರಶಸ್ತಿ' ಹಾಗೂ ೨೦೧೬–೧೭ರ ಸಾಲಿನ ಕರ್ನಾಟಕ ಸರ್ಕಾರದ 'ಕುವೆಂಪು ಭಾಷಾ ಭಾರತಿ ಪ್ರಾಧಿಕಾರದ ಪುಸ್ತಕ ಬಹುಮಾನ' ನವಕರ್ನಾಟಕ ಪ್ರಕಾಶನದ 'ಲೋಕತತ್ತ್ವಶಾಸ್ತ್ರ ಪ್ರವೇಶಿಕೆ' ಮಾಲಿಕೆಯ ಮೊದಲ ಸಂಪುಟ 'ಆರಂಭಿಕ ಹಂತಗಳು' ಎಂಬ ಕೃತಿಯ ಅನುವಾದಕಿ ಡಾ॥ ಎನ್. ಗಾಯತ್ರಿ ಅವರಿಗೆ ಲಭಿಸಿದೆ. ಅನುವಾದಕಿಗೆ 'ಹೊಸತು' ಹಾಗೂ 'ನವಕರ್ನಾಟಕ' ಬಳಗದ ಅಭಿನಂದನೆಗಳು.



# ಕಯ್ಯೂರಿನ ರೈತಕ್ರಾಂತಿ ಕಹಳೆ : ಚಿರಸ್ಮರಣೆ

ಕನ್ನಡ ಪ್ರಗತಿಶೀಲ ಪಂಥದ ಪ್ರಜ್ಞಾವಂತ ಕಾದಂಬರಿಕಾರರು ನಿರಂಜನರು. ಕುಳಕುಂದ ಶಿವರಾಯರು ನಿರಂಜನರಾಗಿ ಕನ್ನಡ ಸಾರಸ್ವತ ಲೋಕದಲ್ಲಿ ಚಿರಪರಿಚಿತರಾಗಿರುವುದೇ ಅವರ ಹೋರಾಟದ ಬದುಕಿಗೆ ಸಾಕ್ಷೀಭೂತವಾಗಿದೆ. ಬಡತನವನ್ನು ಉಂಡು ಬೆಳೆದ, ಸ್ವಾತಂತ್ರ್ಯ ಹೋರಾಟದಲ್ಲಿ ಮುಳುಗಿ ಮೇಲೆದ್ದ, ಕಮ್ಯುನಿಸ್ಟ್ ವಿಚಾರಗಳಲ್ಲಿ ಮಿಂದು ಹೊರಬಂದ ನಿರಂಜನರು ತಮ್ಮ ಅಪಾರ ಅನುಭವದ ನೆಲೆಯಲ್ಲಿ ಕನ್ನಡ ಸಾಹಿತ್ಯಕ್ಕೆ ಅಪಾರ ಕಾಣಿಕೆಗಳನ್ನಿತ್ತಿದ್ದಾರೆ. ಕಥೆ, ಕಾದಂಬರಿ, ನಾಟಕ, ಜೀವನಚರಿತ್ರೆ, ಅಂಕಣ ಬರಹ ....ಹೀಗೆ ನಾನಾ ಕ್ಷೇತ್ರಗಳಲ್ಲಿ ಕೃಷಿಗೈದಿದ್ದಾರೆ. ವಿಮೋಚನೆ, ಬನಶಂಕರಿ, ರಂಗಮ್ಮನ ವಠಾರ, ಅಭಯ, ನಂದಗೋಕುಲ, ಕಲ್ಯಾಣಸ್ವಾಮಿ, ಸ್ವಾಮಿ ಅಪರಂಪಾರ, ಚಿರಸ್ಮರಣೆ, ಮೃತ್ಯುಂಜಯ ಮೊದಲಾದ ಕಾದಂಬರಿಗಳಲ್ಲಿ ಅವರ ಅಪಾರ ಪ್ರತಿಭೆ, ಅನುಭವಗಳು ಹರಿದುಬಂದಿವೆ. ಕನ್ನಡದ ಮೃತ್ಯುಂಜಯನಾದ ನಿರಂಜನರು ಕನ್ನಡಿಗರ ಮನೆಮನಗಳಲ್ಲಿ ಚಿರಕಾಲ ಸ್ಮರಣೆಯಲ್ಲಿ ಉಳಿಯುವ ಸಾಹಿತ್ಯ ಸೃಜಿಸಿದ್ದಾರೆ.

೨೦ನೆಯ ಶತಮಾನದ ನಾಲ್ಕು-ಐದನೆಯ ದಶಕಗಳಲ್ಲಿ ಪ್ರಪಂಚದಾದ್ಯಂತ ನಾಜಿಗಳ, ಬಲಪಂಥೀಯರ ಪ್ರಾಬಲ್ಯ ಅಧಿಕಗೊಳ್ಳುತ್ತಿರುವ ಹೊತ್ತಿನಲ್ಲಿ ಹೊಸ ಆಲೋಚನೆಗಳೊಂದಿಗೆ ಹೊಸ ಬೆಳಕಿನ ಹೊಸ ಬಗೆಯ ಸಾಹಿತ್ಯ ರಚಿಸಲು ಪ್ರಗತಿಶೀಲರು ಪ್ರಾರಂಭಿಸಿದರು. ಲಂಡನ್‌ನಲ್ಲಿ ಸಜ್ಜಾದ್ ಜಾಹಿರ್ ಅವರ ನೇತೃತ್ವದಲ್ಲಿ, ಭಾರತದಲ್ಲಿ ಪ್ರೇಮಚಂದ್‌ರ ಮುಖಂಡತ್ವದಲ್ಲಿ, ಕರ್ನಾಟಕದಲ್ಲಿ ಅ.ನ.ಕೃ. ಅವರ ನಾಯಕತ್ವದಲ್ಲಿ ಈ ನೂತನ ಸಾಹಿತ್ಯ ಬೆಳೆಯಲಾರಂಭಿಸಿತು. ಸಮಾಜದಲ್ಲಿ ತುಳಿತಕ್ಕೊಳಗಾದ ದುರ್ಬಲರ, ದಲಿತರ, ಕಾರ್ಮಿಕರ, ಅಸಹಾಯಕರ, ಸ್ತ್ರೀಯರ ಬಗೆಗೆ ಬರೆಯುವ ಬದ್ಧತೆಯನ್ನು ಇವರು ಇರಿಸಿಕೊಂಡಿದ್ದರು. ರಷ್ಯಾದ ಕ್ರಾಂತಿ, ಕಾರ್ಲ್ ಮಾರ್ಕ್ಸ್‌ನ ತತ್ತ್ವ, ಸಮಾಜವಾದಿ ವಿಚಾರಗಳು ಈ ಪಂಥದವರಿಗೆ ಪ್ರೇರಕಶಕ್ತಿಗಳಾಗಿದ್ದವು.

ಕನ್ನಡದಲ್ಲಿ ಅ.ನ.ಕೃ., ಬಸವರಾಜ ಕಟ್ಟೀಮನಿ, ತ.ರಾ.ಸು., ಚದುರಂಗ ಮೊದಲಾದವರ ಜೊತೆಗೆ ನಿರಂಜನರು ಪ್ರಗತಿಶೀಲ ಪಂಥದ ಪ್ರಮುಖ ಬರಹಗಾರರಲ್ಲೊಬ್ಬರಾಗಿ ಪ್ರಖ್ಯಾತರಾಗಿದ್ದಾರೆ. "ಒಂದು ಅರ್ಥದಲ್ಲಿ ಕನ್ನಡ ಸಾಹಿತ್ಯಕ್ಕೆ ಮೊಟ್ಟಮೊದಲು ಸಾಮಾಜಿಕ ಪ್ರಜ್ಞೆಯ, ಬಂಡಾಯ ಪ್ರವೃತ್ತಿಯ ಆಯಾಮಗಳನ್ನು ತಂದುಕೊಟ್ಟ ಕೀರ್ತಿ ನಿರಂಜನರಿಗೇ ಸಲ್ಲಬೇಕು. ಪ್ರಗತಿಶೀಲ ಸಾಹಿತ್ಯ ಚಳವಳಿ ನಡೆದಾಗ ಅ.ನ.ಕೃ. ಮತ್ತು ನಿರಂಜನರ ನಡುವೆ ಇದ್ದ ಭಿನ್ನಾಭಿಪ್ರಾಯಗಳು ಈಗೀಗ ಮರೆತುಹೋಗುತ್ತಿವೆ. ಜನರಂಜನೆಗೆ ಮರುಳಾಗದೆ, ನಂಬಿದ ಧೋರಣೆಗಳನ್ನು ಬಿಡದೆ ಬದ್ಧರಾಗಿ ಬರೆದ ನಿರಂಜನ 'ಕಾಮ್ರೇಡ್ ವಿಮರ್ಶಕ' ಎಂಬ ಗೇಲಿಯ ಪದ್ಯಕ್ಕೆ ಕಾರಣರಾದದ್ದೂ ಪರಿಸ್ಥಿತಿಯ ವ್ಯಂಗವೇ ಸರಿ.

**ಡಾ॥ ಎಚ್. ಕೆ. ವೆಂಕಟೇಶ**

ದಕ್ಷಿಣ ಕನ್ನಡದ ಪುತ್ತೂರಿನ ಕುಳಕುಂದದಲ್ಲಿ ಹುಟ್ಟಿದ ಶಿವರಾಯರು ಮುಂದೆ ಹೈಸ್ಕೂಲು ಕಲಿಯಲು ನೀಲೇಶ್ವರಕ್ಕೆ ಹೋದಾಗ ಅಲ್ಲಿನ ಎಡಪಂಥೀಯ ರಾಜಕೀಯ ಚಟುವಟಿಕೆಗಳಿಂದ ಪ್ರಭಾವಿತರಾದರು. ಭಾರತದ ಬೇರೆ ಭಾಗಗಳ ರಾಜಕೀಯಕ್ಕಿಂತ ಕೇರಳದ ರಾಜಕೀಯ ಸ್ವಾತಂತ್ರ್ಯ ಚಳವಳಿಯ ಕಾಲದಿಂದಲೂ ವಿಭಿನ್ನವಾಗಿದೆ. ಭಾರತವು ಆಂಗ್ಲರ ಸಾಮ್ರಾಜ್ಯಶಾಹಿ ಶಕ್ತಿಗಳಿಂದ ಬಂಧಮುಕ್ತರಾಗುವುದರ ಜೊತೆಗೆ ದೇಶೀಯ ಜಮೀನ್ದಾರರು ಮತ್ತು ಬಂಡವಾಳಶಾಹಿಗಳ ವಿರುದ್ಧವೂ ಹೋರಾಡಿ ಮುಕ್ತವಾಗಬೇಕು, ಆಗ ಮಾತ್ರ ಜನಸಾಮಾನ್ಯರು ಪೂರ್ಣ ಪ್ರಮಾಣದ ಸ್ವಾತಂತ್ರ್ಯ ಪಡೆಯಲು ಸಾಧ್ಯ ಎಂದು ನಂಬಿದ್ದವರೂ ಇದ್ದರು. ಗಾಂಧಿ ಮೊದಲಾದವರ ನೇತೃತ್ವದಲ್ಲಿ ಅಧಿಕೃತವಾದ ಚಳವಳಿ ನಡೆಯುತ್ತಿರುವ ಹೊತ್ತಿನಲ್ಲೇ ಈ ಭಾಗಗಳಲ್ಲಿ ಭೂಗತರಾಗಿದ್ದುಕೊಂಡು ಗುಪ್ತ ಚಟುವಟಿಕೆ ನಡೆಸುತ್ತಿದ್ದ ಕಮ್ಯುನಿಸ್ಟರಿದ್ದರು. 'ಆಳುತ್ತಿದ್ದ ಬ್ರಿಟಿಷ್ ಸರ್ಕಾರಕ್ಕೆ ಕಮ್ಯುನಿಸ್ಟ್ ಕ್ರಾಂತಿಕಾರಿಗಳು ಆಗ ಸಿಂಹಸ್ವಪ್ನ'ರಾಗಿದ್ದರು ಎಂದು ನಿರಂಜನರೇ ಹೇಳಿದ್ದಾರೆ. ಈ ಪರಿಸರದಲ್ಲಿ ನಿರಂಜನರು ಪಡೆದ ಅನುಭವದ ಸಾರರೂಪವೇ 'ಚಿರಸ್ಮರಣೆ' ಕಾದಂಬರಿ. ಕಯ್ಯೂರು ರೈತ ಹೋರಾಟವೇ ಈ ಕಾದಂಬರಿಯ ಕೇಂದ್ರ ಪ್ರಜ್ಞೆ. ಭಾರತದ ಶ್ರಮಜೀವಿಗಳು ನಡೆಸುತ್ತ ಬಂದಿರುವ ವರ್ಗಸಮರದ ಸುದೀರ್ಘ ಇತಿಹಾಸದ ಒಂದು ರೋಮಾಂಚಕಾರಿ ಅಧ್ಯಾಯದಂತಿರುವ

ಕಯ್ಯೂರು ರೈತರ ಸಂಘಟನೆ 'ಚಿರಸ್ಮರಣೆ'ಗೆ ಪ್ರೇರಣೆ. ಕನ್ನಡವಷ್ಟೇ ಅಲ್ಲದೆ ಮಲಯಾಳಂ, ಮರಾಠಿ, ತೆಲುಗು, ತಮಿಳು, ಬಂಗಾಳಿ, ತುಳು, ಇಂಗ್ಲಿಷ್ ಭಾಷೆಗಳಲ್ಲಿ ಅನುವಾದದ ಮುಖೇನ ಬಂದಿರುವುದು ಈ ಕಾದಂಬರಿಯ ಮಹತ್ವಕ್ಕೆ ಸಾಕ್ಷಿ.

ಕಯ್ಯೂರಿನ ಹೋರಾಟದ ಎಳೆಗಳನ್ನು ಮನಕರಗುವಂತೆ ಕಟ್ಟಿಕೊಡಲು 'ಕಯ್ಯೂರು ವೀರಗಾಥಾ'ವನ್ನು ರೂಪಕ–ನಾಟಕದ ಮಾದರಿಯಲ್ಲಿ ಕಾದಂಬರಿಕಾರರು ವಿನೂತನವಾಗಿ ಆರಂಭಿಸುತ್ತಾರೆ. ಕೇರಳದಲ್ಲಿ ಕಯ್ಯೂರು ಒಂದು ಕಿರುಗ್ರಾಮ. ಬೆಟ್ಟ, ಗುಡ್ಡ, ಕಾಡು, ನದಿಗಳಿಂದ ಸುತ್ತುವರಿದ, ಸದಾ ಹಸಿರಿನಿಂದ ಕಂಗೊಳಿಸುತ್ತಿರುವ ಕಯ್ಯೂರು ನಾಡಿನೆಲ್ಲೆಡೆ ಕತ್ತಲು ತುಂಬಿರುವಲ್ಲಿ ವಿಚಾರದ ಬೆಳಕನ್ನು ಹೊತ್ತಿಸಿದ ಅಪರೂಪದ ಹಳ್ಳಿಯಾಗಿ ಕಾಣುತ್ತದೆ. "ದೇಶದ ನಕಾಶೆಯಲ್ಲಿ ಇದೊಂದು ಕುಗ್ರಾಮ. ಭಾರತ ಭೂಮಿಯ ಸಹಸ್ರ ಸಹಸ್ರ ಹಳ್ಳಿಗಳಲ್ಲೊಂದು. ಆದರೆ ನಮ್ಮ ಪಾಲಿಗಿದೇ ಊರು, ಇದೇ ಮಹಾನಗರ" (**ನಿರಂಜನರ ಚಿರಸ್ಮರಣೆ**).

ಈ ವೀರಗಾಥಾ ಆರಂಭವಾಗುವುದು ಸೂರ್ಯೋದಯದ ಹೊತ್ತಿನಲ್ಲಿ ಚಿರುಕಂಡ ಮತ್ತು ಅಪ್ಪು ಒಬ್ಬರನ್ನೊಬ್ಬರು ಸಂಧಿಸುವ ಮೂಲಕ ಮತ್ತು ಅವರಿಬ್ಬರು ತೇಜಸ್ವಿನಿ ನದಿ ದಾಟುವ ಮೂಲಕ. ನದಿ, ಸಮುದ್ರ ದಾಟುವುದೇ ಒಂದು ಸಂಕೇತದಂತೆ ಕಾಣುತ್ತದೆ. ಬಾಲಕರಿಬ್ಬರು ಬಾಲ್ಯವನ್ನು ಕಳಚಿ ಬಿಸುಟು ಬೃಹದಾಗಿ ಬೆಳೆಯುವಂತೆ, ಅರಿವನ್ನು ವಿಸ್ತರಿಸಿಕೊಳ್ಳುವಂತೆ, ಹೊಸ ಜ್ಞಾನ ಪಡೆದುಕೊಳ್ಳುವಂತೆ ಈ 'ದಾಟು'ವಿಕೆ ಕಾಣುತ್ತದೆ. ಅಲ್ಲಿ ಧಾಂಡಿಗ ಮತ್ತು ಪ್ರಭುವಿನ ಮೂಲಕ ಮಾಸ್ತರಿಗಿಂತಲೂ ಹೆಚ್ಚು ತಿಳಿದ ಪಂಡಿತರ ದರ್ಶನ ಮಾಡುತ್ತಾರೆ. ಕಾರ್ಲ್ ಮಾರ್ಕ್ಸ್‌ನ ವಿಚಾರಧಾರೆಗಳನ್ನು ತಿಳಿಸುವಂತೆ, ಸಮಾಜವಾದಿ ತತ್ತ್ವಗಳನ್ನು ಬೋಧಿಸುವಂತೆ, ಆ ಮೂಲಕ ಜನಜಾಗೃತಿ ಮೂಡಿಸುವ ನಾಯಕರಂತೆ ಪಂಡಿತರು ಕಾಣಿಸಿಕೊಳ್ಳುತ್ತಾರೆ. ಆ ಪಂಡಿತರಿಂದ ಮನುಕುಲದ ಇತಿಹಾಸ, ಶೋಷಣೆಯ ರೂಪಗಳು, ಒಗ್ಗಟ್ಟಾಗಿ ಹೋರಾಡಬೇಕಾದ ರೀತಿ, ಅದಕ್ಕೆ ಕಮ್ಯುನಿಸ್ಟ್ ಚಿಂತನೆಗಳು ಹೇಗೆ ಸಹಾಯಕ, ಎಲ್ಲವನ್ನು ತಿಳಿದು ಹೊಸ ರೂಪ ಪಡೆದು ಊರಿಗೆ ವಾಪಸ್ಸಾಗುತ್ತಾರೆ ಅಪ್ಪು ಮತ್ತು ಚಿರುಕಂಡರು. ಇನ್ನೂ ಹುಡುಗರಾಗಿದ್ದ ಅಪ್ಪು, ಚಿರುಕಂಡರನ್ನು ಪಂಡಿತರು ಕಂಡದ್ದು ಚಿರುಕಂಡನಲ್ಲಿರೋ ಹಾಗೆ ದೂರಾಲೋಚನೆಯೂ ಇರಬೇಕು; ಅಪ್ಪುವಿನಲ್ಲಿರುವಂಥ ಧೈರ್ಯ–ಉತ್ಸಾಹಗಳೂ ಇರಬೇಕು. ಅಂತಹ ಗುಣಗಳು ಇದ್ದರೇನೇ ಮನುಷ್ಯ ಕ್ರಾಂತಿಕಾರಿಯಾಗ್ತಾನೆ. 'ಕಯ್ಯೂರು ವೀರರು' ಎಂದಾಗ ಅವರ ಎದೆ ತುಂಬಿ ಬರುತ್ತದೆ. ಹಾಗಾಗಿ ಸಾಮಾನ್ಯ ಯುವಕರು ಮುಂದೆ ಇಡೀ ನಾಡು ಮೆಚ್ಚುವಂತಹ ಕ್ರಾಂತಿಕಾರರಾಗಿ ಅರಳುತ್ತಾರೆ ಎನ್ನುವ ಮುನ್ಸೂಚನೆ ಕಾಣಿಸಿಕೊಳ್ಳುತ್ತದೆ. "ದುಡಿಯುವ ಜನರೆಲ್ಲ ಒಂದಾದರೆ, ಸುಲಿಯುವ ಜನರೆಲ್ಲ ಸೋತುಹೋಗ್ತಾರೆ. ನಮ್ಮನ್ನು ಬಿಗಿದಿರುವ ಬೇಡಿಗಳು ಪುಡಿಪುಡಿಯಾಗ್ತವೆ. ನಮ್ಮ ದೇಶದಲ್ಲಿ ಜನಕ್ರಾಂತಿ ಬೇರೆಯಲ್ಲ. ನಮ್ಮ ರೈತರೆಲ್ಲ ಎಚ್ಚರವಾಗ್ಬೇಕು... ಹಳ್ಳಿಹಳ್ಳಿಯಲ್ಲಿ ರೈತಸಂಘ ಸ್ಥಾಪಿಸಬೇಕು..." ಪಂಡಿತರ ಈ ವಿಚಾರಧಾರೆಗಳು ಆ ಯುವಕರಿಗೆ ದಾರಿದೀಪವಾಗುತ್ತವೆ.

ಚರ್ವತ್ತೂರಿನಲ್ಲಿ ಚಿರುಕಂಡ, ಅಪ್ಪು ಅವರು ಪಂಡಿತರಿಂದ ಕೇಳಿ ತಿಳಿದ ಶೋಷಣೆಯ ವಿಚಾರಗಳು ಕಯ್ಯೂರಿಗೆ ಆಗಮಿಸಿದ ಕೂಡಲೇ ಅನುಭವಕ್ಕೆ ಬಂದುಬಿಡುತ್ತವೆ. ಜಮೀನ್ದಾರ ನಂಬಿಯಾರನು ಚಿರುಕಂಡನ ತಂದೆ ತನ್ನಲ್ಲಿ ಮಾಡಿದ್ದ ಸಾಲಕ್ಕೆ ಪ್ರತಿಯಾಗಿ ಅವನ ಜಮೀನನ್ನೇ ಕಬಳಿಸಿಬಿಡುತ್ತಾನೆ. ಆ ನಂಬಿಯಾರರ ಮುಂದೆ ಕೈಯೊಡ್ಡಿ ಅಂಗಲಾಚುತ್ತ



# ಕಸಾ

ಗಾಂಧೀ
ಅಂದ ನೀನು
ಅಹಿಂಸಾ ಪರಮೋಧರ್ಮಃ ಅಂದಿ
ಜೈ ಅಂದರು ಮಂದಿ
ನೀನೂ ಘನ ಆಸಾಮಿ ಬಿಡಪಾ
ಅರಬತ್ತಲೆ ಇದ್ದರೂ
ಕೈಯಾನ ಬಡಿಗಿಯಿಂದನs
ಬಂದೂಕು ಲಾಠಿ ಎಲ್ಲಾ ಬೆದರಿಸಿ
ಹೊರಗ ಅಟ್ಟೀದಿ
ನಮ್ಮ ಹೊಲಾ ನಮಗ ಬಿಡಿಸಿ ಕೊಟ್ಟಿ
ಚೆಂದಾಗಿ ಬೆಳೀ ತಗೀತೇವಿ ಅಂತ
ಕನಸ ಕಂಡಿ
'ಇನ್ನ ಚೆಂದಾಗಿ ಬಾಳೇ
ಮಾಡಿಕೊಂಡ ಹೋಗರಿ' ಅಂದಿ

ಅಂದ ಕೆಂಪ ಕ್ವಾಟಿ ಮ್ಯಾಲ
ಒಂದು ಗುಲಾಬಿ ಹೂವು
ಪಕಳಿ ಬಿಚ್ಚಿ ಅರಳಿ
ಬೀರಿತ್ತು ಮುಗುಳ ನಗಿ
ಮತ್ತೊಮ್ಮೆ
ಜಯಕಾರಾ ಹಾಕಿದರು
ಹುರುಪಿಗೆದ್ದ ಮಂದಿ

'ಆರಾಮ ಹರಾಮ ಹೈ'
ಅಂದರು
ಆರಾಮಾಗೇ ಇದ್ದರು

'ಜೈ ಜವಾನ ಜೈ ಕಿಸಾನ'
ಅಂದವರನ್ನ ಹೊಂತೂಟ್ಲೆ
ಮ್ಯಾಲಕ್ಕಟ್ಟಿದರು
'ಗರೀಬೀ ಹಟಾವೋ' ಅಂದರು
ಗರೀಬೀ ಗಟ್ಟಿ ಆತು
ಹೊಲಾ ಹರಗಲಿಲ್ಲ, ಹದಾ ಮಾಡಲಿಲ್ಲ
ಮಾತು, ಮಾತು, ಮಾತು
ಮಾತಿನ ಕಸಾನs ಬೆಳೀತು
ಬಿತ್ತಿದ್ದೂ ಮಾತs, ಬೆಳದದ್ದೂ ಮಾತs
ಅರದು ಅಂಬಲಿ ಮಾಡಿ
ಕುಡಿಸಿದ್ದೂ ಮಾತs

ನಾವೇನ ಉಪಾಸ ಇಲ್ಲ ಬಿಡಪಾ
ಹುಟ್ಟಿಸಿದ ದೇವರೇನ ಹುಲ್ಲ ಮೇಸತಾನ
ಅಂತ ಅದs ಕಸಾ ತಿಂದs
ಬದಕತೇವಿ
ನಾವೂ ಬೆವರ ಸುರಸೇವಂತೇವಿ
ಪುರಮಾಸಿ ಬೆಳಿ ತಗದು ನಿನ್ನ ಕನಸು
ನನಸ ಮಾಡೇವಂತೇವಿ
ಗುದಮುರಗಿ ಹಾಕೇ ಹಾಕತೇವಿ
ಆದರ
ನಮ್ಮ ಹೊಲದಾಗಿನ ಕಸಾ
ತಗದು ಹದಾ ಮಾಡಬೇಕಂದರ ಮತ್ತ
ನೀನs ಬರಬೇಕು.
ಬರತೀಯಾ ಗಾಂಧೀ ?

**ಪ್ರೊ॥ ಧರಣೇಂದ್ರ ಕುರಕುರಿ**
'ದಿಶಾ', ಸಿ.ಎಂ.ಉದಾಸಿ ನಗರ
ಶಿವಾನಿ ಹೋಟೆಲ್ ಹತ್ತಿರ
ಶಿರಸಿ – ೫೮೧ ೪೦೨

ನಿಂತ ತಂದೆಯ ಚಿತ್ರ ಕಣ್ಮುಂದೆ ಬಂದಾಗಲೇ ಬೆಚ್ಚಿಬೀಳುವ ಚಿರುಕಂಡ ತನ್ನ ತಂದೆ ಜಮೀನಿಲ್ಲದೆ ಬರಿಗೈಯಲ್ಲಿ ದುಃಖಿತನಾಗಿ ಬಂದಾಗ ಜರ್ಜರಿತನಾಗಿ ಬಿಡುತ್ತಾನೆ. "ಮಹಾನೀಚ, ಬಡ್ಡಿ ಅಲ್ದೆ ಈವರೆಗೂ ಎಳನೀರು, ತೆಂಗಿನಕಾಯಿ, ತರಕಾರಿ, ಕಬ್ಬು ಎಲ್ಲ ಕಪ್ಪ ಒಪ್ಪಿಸ್ತಿದ್ವಿ ಅವನಿಗೆ. ನಮ್ಮ ಬಿತ್ತನೆ-ಕುಯ್ಲು ಆದ್ಮೇಲೆ, ಅವನ ಹೊಲದಲ್ಲಿ ಬಿಟ್ಟಿ ದುಡೀತಿದ್ವಿ... ಅದೊಂದರ ನೆನಪೂ ಅವನಿಗಿಲ್ಲ. ಅವತ್ತು ಅವನ ಮಗಳ ಮದುವೆಯ ಸಮಯದಲ್ಲಿ ನಾವು ಮದುವೆ ಕಂದಾಯ ಕೊಟ್ಟಿದ್ದಲ್ದೆ ಗುಲಾಮ ಚಾಕರೀನೂ ಮಾಡಿದ್ವಿ," ಎಂದು ಜಮೀನ್ದಾರನ ಶೋಷಣೆಯ ನಾನಾ ರೂಪಗಳನ್ನು ಕಂಡು ಕೆಂಡವಾಗುವ ಚಿರುಕಂಡನ ತಂದೆ, "ನಿನ್ನೆ ನಾವು ಸ್ವಂತ ಆಸ್ತಿ ಇದ್ದ ರೈತರು. ಊರಲ್ಲಿ ನಮಗೆ ಮಾನ ಮರ್ಯಾದೆ ಸಿಗ್ತಿತ್ತು. ಇವತ್ತು ನಾವು ಧನಿಗಳ ಒಕ್ಕಲು, ಗುಲಾಮರು" ಎಂದು ನೊಂದು ನುಡಿಯುತ್ತಾನೆ.

ನಂಬಿಯಾರ ಮತ್ತು ನಂಬೂದಿರಿಯರಿಬ್ಬರು ಕಯ್ಯೂರಿನ ಜಮೀನ್ದಾರರು. ಬಂಡವಾಳಶಾಹಿ ವ್ಯವಸ್ಥೆಯ ಪ್ರತಿನಿಧಿಗಳು. ಬ್ರಿಟಿಷರ ಏಜೆಂಟರು. ರೈತರ ರಕ್ತ ಹೀರುವುದು ಇವರ ಕಸುಬು. ಅದಕ್ಕಾಗಿ ಎಂತಹ ಹೀನಕೃತ್ಯ ಎಸಗಲೂ ಇವರು ಸಿದ್ದರು. ಜನರನ್ನು ಮೃಗಗಳಾಗಿಯೇ ನೋಡುತ್ತಿದ್ದರು. ಜನರಿಗೆ ಅರ್ಥವಾಗೋದು ಒಂದೇ ಭಾಷೆ, ಬಾರಕೋಲಿನ ಭಾಷೆ ಎಂದು ಆ ಊರ ರೈತರ ಮೇಲೆ ನಿರಂತರವಾಗಿ ದೈಹಿಕ-ಮಾನಸಿಕ ಹಲ್ಲೆಗಳನ್ನು ಮಾಡುತ್ತಾ ಮೆರೆದರು. ಈ ಜನ ಯಾರೂ ಕಾಲೇಜಿಗೆ ಹೋಗಬೇಕಾಗಿಲ್ಲ. ಅವರು ಸಹಿ ಹಾಕುವುದನ್ನು ಕಲಿತರೆ ಸಾಕು, ಆ ಮೂಲಕ ಅವರನ್ನು ಶೋಷಿಸಬಹುದೆನ್ನುವುದನ್ನು ಕರಗತ ಮಾಡಿಕೊಂಡಿದ್ದರು. ಅದರಂತೆಯೇ ಚಿರುಕಂಡನ ತಂದೆಯ ಆಸ್ತಿಯನ್ನು ಲಪಟಾಯಿಸುತ್ತಾರೆ. ಇಂತಹ ಅನೇಕ ನಿದರ್ಶನಗಳನ್ನು ಕಾದಂಬರಿ ತಿಳಿಸುತ್ತದೆ.

ಕಯ್ಯೂರಿನ ಶಾಲೆಯಲ್ಲಿ ಸಂಜೆ ಹೊತ್ತು ಪತ್ರಿಕೆ ಓದಿ ರೈತರಿಗೆ ಹೊಸ ವಿಚಾರ ತಿಳಿಸುವ ಪ್ರಯತ್ನಕ್ಕೆ ಮಾಸ್ತರು ಕೈಹಾಕುತ್ತಾರೆ. ಜನರನ್ನು ಎಚ್ಚರಿಸುವ, ವಿಚಾರಶೀಲರನ್ನಾಗಿಸುವ ಪ್ರಯತ್ನ ಅದಾಗಿತ್ತು. ಆದರೆ ಊರ ಜಮೀನ್ದಾರ ನಂಬಿಯಾರನಿಂದ ಅದು ನಿಂತುಹೋಗುತ್ತದೆ. ಆದರೆ ಪಟ್ಟುಬಿಡದ ಜನರಿಂದ ಅದು ಮತ್ತೆ ಆರಂಭವಾಗುತ್ತದೆ ಕೋರನ ಮನೆಯಲ್ಲಿ. ತನಗೆ ಹಿಂದೊಮ್ಮೆ ಜ್ವರ ಬಂದು ನರಳುವಾಗ ಮಾಸ್ತರು ಮಾಡಿದ ಸಹಾಯ ನೆನೆದು ಕೋರ ಪತ್ರಿಕೆ ಓದಲು ತನ್ನ ಗುಡಿಸಲನ್ನೇ ಕೊಡುತ್ತಾನೆ. ಈಗ ಪತ್ರಿಕೆ ಓದುವವನು ಚಿರುಕಂಡ. ಆದರೆ ಜನರ ಅನಾಸಕ್ತಿಯಿಂದ ಪತ್ರಿಕೆ ಓದುವುದು ಕೆಲ ಕಾಲದ ನಂತರ ನಿಂತುಹೋಗುತ್ತದೆ.

ಮಾಸ್ತರು ಜನರಿಗೆ ತಿಳಿವಳಿಕೆ ನೀಡಲು ಆರಂಭಿಸಿದ್ದ ರಾತ್ರಿ ಶಾಲೆ ಹೊಸ ರೂಪ ಧರಿಸಿ ಬರುತ್ತದೆ. ಮಾಸ್ತರು, ಅಪ್ಪು, ಚಿರುಕಂಡ ಮೊದಲಾದವರು ಜನರನ್ನು ಎಚ್ಚರಿಸಬೇಕೆನ್ನುವ ನಿರಂತರ ಪ್ರಯತ್ನ ಹಲವು ಅಡ್ಡಿಆತಂಕಗಳನ್ನು ಎದುರಿಸಿಯೂ ನಿಲ್ಲದೆ ನಡೆಯುತ್ತದೆ. ಒಮ್ಮೆ ಪಂಡಿತರು ಕಯ್ಯೂರಿಗೆ ಬಂದು ಹೋಗುತ್ತಾರೆ.

**ಸರಿಯೆ?**

ಕಾವೇರಿ ನೀರು
ಕುಡಿಯಲು ಮಾತ್ರ ಎಂದು
ವಿಧಾನಮಂಡಲದ ನಿರ್ಣಯ !
ಸರಿಯೆ?
ಸ್ನಾನ, ಶೌಚಾದಿಗಳಿಗೆ ಬೇಡವೆ?
(ಮನೆಬಳಕೆಗೆ ಮಾತ್ರ
ಎಂದಿರಬೇಕಿತ್ತಲ್ಲವೆ?)

ಸಿ.ಪಿ.ಕೆ.
ಮೈಸೂರು

ಅದರ ಫಲವಾಗಿ ಕಯ್ಯೂರಿನಲ್ಲಿ ವಯಸ್ಕರ ರಾತ್ರಿ ಶಾಲೆ ಆರಂಭವಾಗುತ್ತದೆ. ನಂಬಿಯಾರರ ವಿರೋಧದ ನಡುವೆಯೂ ನಂಬೂದಿರಿಯ ಬೆಂಬಲದಿಂದ ಆ ರಾತ್ರಿ ಶಾಲೆ ಆರಂಭವಾಗುತ್ತದೆ. ಕೋರನ ಹಟ್ಟಿಯಲ್ಲಿಯೇ ರಾತ್ರಿ ಶಾಲೆ. ಕಣ್ಣ, ಅಪ್ಪು, ಚಿರುಕಂಡ, ಅಪ್ಪುವಿನ ತಂದೆ, ಚಿರುಕಂಡನ ತಂದೆ, ಕೋರ ಮೊದಲಾದವರಿಂದ ರಾತ್ರಿ ಶಾಲೆ ಸಾಂಗವಾಗಿ ನಡೆಯುತ್ತದೆ. ಅಭ್ಯಾಸ ಕೂಟಗಳೂ ಜರುಗುತ್ತವೆ.

ಕಯ್ಯೂರಿನಲ್ಲಿ ಈ ಕ್ರಾಂತಿಕಾರಿಗಳಿಂದ ದಿನೇ ದಿನೇ ಹೊಸ ಬಗೆಯ ಚಟುವಟಿಕೆಗಳು ನಡೆಯುತ್ತವೆ. ಅವೆಲ್ಲವೂ ಜನರನ್ನು ಒಗ್ಗೂಡಿಸುವ, ಜಮೀನ್ದಾರನನ್ನು ಮೆಟ್ಟಿ ನಿಲ್ಲುವ ಪ್ರಯತ್ನಗಳಾಗಿ ಕಾಣಿಸಿಕೊಳ್ಳುತ್ತವೆ. ಒಮ್ಮೆ ರಾತ್ರಿ ಹೊತ್ತು ಅಪ್ಪು ಮತ್ತು ಕಣ್ಣರು ಮನೆಗೆ ಹೊರಡುವಾಗ ದೇವಕಿಯ ಮೇಲೆ ನಂಬಿಯಾರರ ಚಾಕರ ಆಕ್ರಮಣ ಮಾಡುವ ಶಬ್ದ ಕೇಳಿ ಅಲ್ಲಿಗೆ ಬಂದು ದೇವಕಿಯನ್ನು ರಕ್ಷಿಸುತ್ತಾರೆ. ದೇವಕಿಯ ಮೇಲೆ ಕಣ್ಣಿರಿಸಿದ್ದ ಜಮೀನ್ದಾರನಿಗೆ ದೊಡ್ಡ ಅವಮಾನವಾಗುತ್ತದೆ. ಅನಂತರ ಕಣ್ಣನೇ ವಿಧವೆ ದೇವಕಿಯನ್ನು ಮದುವೆಯಾಗಿ ಹೊಸ ಬಾಳು ಆರಂಭಿಸುತ್ತಾನೆ. ವಿಧವಾ ವಿವಾಹದಂತಹ ಕ್ರಾಂತಿಕಾರಕ ಕಾರ್ಯಕ್ರಮಗಳೂ ಇಲ್ಲಿ ಜರುಗುತ್ತವೆ. ಈ ಸಮಯದಲ್ಲೇ ಚಟುವಟಿಕೆಯಿಂದ ಓಡಾಡಿದ ಚಿರುಕಂಡನ ತಂದೆ ಮೊದಲು ಸಾಧು ಪ್ರಾಣಿಯಂತೆ ಮೌನವಾಗಿರುತ್ತಿದ್ದವನು ಈಗ ಲವಲವಿಕೆಯಿಂದ ಮರುಜನ್ಮ ಪಡೆದಂತೆ ಬದಲಾಗುತ್ತಾನೆ.

ತಳಿಪರಂಬ ಜಾತ್ರೆಯ ಸಮೀಪದ ಒಂದು ಹಳ್ಳಿಯಲ್ಲಿ ಉತ್ತರ ಮಲಬಾರಿನ ರೈತ ಸಮ್ಮೇಳನ ನಡೆಯುತ್ತಿರುತ್ತದೆ. ಅಲ್ಲಿಗೆ ಹೋಗಲು ಕಯ್ಯೂರಿನ ರೈತರು ಸಿದ್ಧರಾಗುತ್ತಿರುತ್ತಾರೆ. ಅದಕ್ಕಾಗಿ ಕೃಷ್ಣನ್ ನಾಯರ್‌ನ ಹೊಲದಲ್ಲಿ ಸಹಕಾರ ತತ್ತ್ವದ ರೀತಿಯಲ್ಲಿ ಎಲ್ಲ ರೈತರು ಸೇರಿ ಕೊಯ್ಲು ಮಾಡುತ್ತಾರೆ. ಒಗ್ಗಟ್ಟು ಪ್ರದರ್ಶಿಸುತ್ತಾರೆ. ಅವನ ಫಸಲನ್ನು ಪಡೆಯಲು ಬಂದ ಜಮೀನ್ದಾರನ ಗಾಡಿ ಬಂದ ದಾರಿಯಲ್ಲೇ ವಾಪಸ್ಸು ಹೋದುದನ್ನು ಕಂಡು ಚಿರುಕಂಡನ ತಂದೆ 'ಜಮೀನ್ದಾರರು ಸೋತದ್ದನ್ನು ನನ್ನ ಜೀವಮಾನದಲ್ಲಿ ಇದೇ ಮೊದಲ್ನೇ ಸಲ ನಾನು ಕಂಡದ್ದು' ಎಂದು ಸಂಭ್ರಮಿಸುತ್ತಾನೆ. ಆರಂಭದಲ್ಲಿ ರೈತರೇ ಗೆದ್ದರೂ, ಅವರೆಲ್ಲ ರೈತ ಸಮ್ಮೇಳನಕ್ಕೆ ಹೋಗಿದ್ದಾಗ ಅಂತಿಮವಾಗಿ ಜಮೀನ್ದಾರನ ದಬ್ಬಾಳಿಕೆಯೇ ಗೆಲ್ಲುತ್ತದೆ. ಆದರೆ ಇಲ್ಲಿಂದ ಜಮೀನ್ದಾರನ ಅವನತಿ ಆರಂಭವಾಗುತ್ತದೆ.

ರೈತ ಸಮ್ಮೇಳನಕ್ಕೆ ಹೋಗಿ ಬಂದವರು ಹೊಸ ಹುರುಪಿನಿಂದ ವರ್ತಿಸುತ್ತಾರೆ. ರೈತ ಜಾಗೃತಿಯನ್ನು ಕಣ್ಣಾರೆ ಕಂಡ ಅನುಭವ ಅವರೆಲ್ಲರಲ್ಲಿ ಹೊಸ ಶಕ್ತಿಯನ್ನು ತುಂಬಿತ್ತು. ಪ್ರವಾಸದಿಂದ ದಣಿದಿದ್ದರೂ ಅವರ ಬೆನ್ನುಗಳು ನೇರವಾಗಿದ್ದುವು. ಕಣ್ಣುಗಳು ನಿದ್ದೆಕೆಟ್ಟು ಕೆಂಪಾಗಿದ್ದರೂ ಹೊಳೆಯುತ್ತಿದ್ದುವು. ಕಪೋಲಗಳು ಬತ್ತಿದ್ದರೂ, ಆತ್ಮ ವಿಶ್ವಾಸದ ನಗೆ ತುಟಿಗಳ ಮೇಲೆ ನರ್ತಿಸುತ್ತಿತ್ತು. ಕಯ್ಯೂರು ರೈತ ಸಂಘ ಸ್ಥಾಪಿಸುವ ಆಸೆ ವ್ಯಕ್ತಪಡಿಸಿ ಅದರಂತೆ ಅಪ್ಪುವಿನ ಮನೆಯಲ್ಲಿ ತಾತ್ಕಾಲಿಕವಾಗಿ ರೈತಸಂಘ ಆರಂಭವಾಗುತ್ತದೆ. ಕೆಂಪು ಬಾವುಟ ಹಾರಾಡುತ್ತದೆ. ಚಿರುಕಂಡ ಕಾರ್ಯದರ್ಶಿಯಾಗುತ್ತಾನೆ. ಅನಂತರ ಸಂಘದ ಸ್ವಂತ ಕಟ್ಟಡಕ್ಕೆ ಪೊಡವರ ಕುಂಞಂಬು ಜಾಗ ಕೊಡುತ್ತಾನೆ. ಕ್ರಾಂತಿ ಎನ್ನುವುದು ಒಬ್ಬರಿಂದ ಆರಂಭವಾದರೂ ಅದಕ್ಕೆ ಎಲ್ಲರೂ ಅಗತ್ಯ. ಅಂತೆಯೇ ಇಲ್ಲಿ ಕಯ್ಯೂರಿನ ಹಲವು ಜನ ಕ್ರಾಂತಿಗೆ ಕೈಗೂಡಿಸುತ್ತಾರೆ. ದೇಶದಲ್ಲಿ ನಡೆಯುತ್ತಿದ್ದ ಸ್ವಾತಂತ್ರ್ಯ ಸಮರ, ರಾಷ್ಟ್ರ ನಾಯಕರ ಬಂಧನ... ಸೋಲು... "ಒಂದು ವಿಷಯ ನಾವು ಚೆನ್ನಾಗಿ ತಿಳಿದಿರಬೇಕು. ಬರೇ ಮಧ್ಯಮ ವರ್ಗದವರೇ ಯಾವತ್ತೂ ಸ್ವಾತಂತ್ರ್ಯ ತರಲಾರರು. ದೇಶದ ರೈತರೂ ಕೂಲಿಕಾರರೂ ಸಂಘಟಿತರಾಗಿ ಬಲಿಷ್ಠರಾಗದ ಹೊರತು ಸ್ವಾತಂತ್ರ್ಯ ಸಮರ ಯಶಸ್ವಿಯಾಗದು. ಬ್ರಿಟಿಷರೂ ಹೋಗಲಾರರು. ಇಲ್ಲಿ ಅವರಿಗೆ ಆಧಾರವಾಗಿರುವ ಶಕ್ತಿಗಳೂ ನಾಶವಾಗಲಾರವು... ಸುಖ ಸಾಧನೆಗೆ ಸುಲಭ ಹಾದಿ ಅನ್ನೋದೇ ಇಲ್ಲ. ಕಷ್ಟಪಟ್ಟು ದೀರ್ಘಕಾಲ ಕಲ್ಲುಮುಳ್ಳು ಗುಡ್ಡ ಬೆಟ್ಟ ದಾಟಿ ನಡೆದರೇ ಗುರಿ ಸೇರ್ತೇವೆ..." ಎನ್ನುವ ಮಾಸ್ತರ ಮಾತನ್ನು ಕಯ್ಯೂರಿನ ಜನ ಸತ್ಯಗೊಳಿಸುವಂತೆ ನಡೆದುಕೊಳ್ಳುತ್ತಾರೆ. ದೇಶದ ಸ್ವಾತಂತ್ರ್ಯ ಹೋರಾಟಕ್ಕೆ ಗಾಂಧಿ ಆಗಮನದ ಅನಂತರ ರೈತರು, ಕಾರ್ಮಿಕರು, ಮಹಿಳೆಯರು, ಮಕ್ಕಳು ಸಾಗರೋಪಾದಿಯಲ್ಲಿ ಬಂದು ಸೇರಿದುದು, ಯಶಸ್ವಿಯಾದುದು ಇಲ್ಲಿ ಸ್ಮರಣೆಗೆ ಬರುತ್ತದೆ. ಕಾದಂಬರಿಯಲ್ಲಿ ಬರುವಂತೆ ಕಯ್ಯೂರಿಗೆ ಗಾಂಧಿ ಬರದಿದ್ದರೂ, ಚರಕ ಬರದಿದ್ದರೂ, ಗಾಂಧಿ ಟೋಪಿಗಳು ಕಾಲಿರಿಸದಿದ್ದರೂ ಗಾಂಧಿ ಪ್ರಭಾವ ದಟ್ಟವಾಗಿ ಕಂಡುಬರುತ್ತಿದೆ ಎಂದು ಆಶ್ಚರ್ಯ ವ್ಯಕ್ತಪಡಿಸುತ್ತಾರೆ ನಂಬಿಯಾರರು.

ಮಾಸ್ತರು ಮತ್ತು ಜಮೀನ್ದಾರರ ನಡುವೆ ಘರ್ಷಣೆ ಆಗಿ ಮಾಸ್ತರು ಊರು ಬಿಡಬೇಕಾಗುತ್ತದೆ. ಊರಿಗೆ ವಯಸ್ಸಾದ ಮಾಸ್ತರೊಬ್ಬರ

**ಅಭಿನಂದನೆಗಳು .............**

ಕರ್ನಾಟಕ ಸರ್ಕಾರದ ಕುವೆಂಪು ಭಾಷಾ ಭಾರತಿ ಪ್ರಾಧಿಕಾರದ ೨೦೧೬-೧೭ರ ಸಾಲಿನ ಗೌರವ ಪ್ರಶಸ್ತಿಯು ಡಾ॥ ಬಿ. ಎ. ಸನದಿ ಅವರಿಗೆ ಲಭಿಸಿದೆ. ಈ ಹಿರಿಯ ಸಾಹಿತಿಗೆ 'ಹೊಸತು' ಹಾಗೂ 'ನವಕರ್ನಾಟಕ' ಬಳಗದ ಅಭಿನಂದನೆಗಳು.

ಆಗಮನವಾಗುತ್ತದೆ. ಕುಟ್ಟಿಕೃಷ್ಣನ ನೇತೃತ್ವದಲ್ಲಿ ಬಾಲಸಂಘ ಸ್ಥಾಪನೆಯಾಗುತ್ತದೆ. ತಲಚೇರಿಯಿಂದ ಮಾಸ್ತರ ಚೀಟಿ ತಂದ ಅಬೂಬಕರ್ ಕಯ್ಯೂರಿನಲ್ಲಿಯೇ ಉಳಿಯುತ್ತಾನೆ. ಸೈನ್ಯದ ರೀತಿಯಲ್ಲಿ ಶಿಸ್ತಿನ ಸಿಪಾಯಿಗಳನ್ನು ತರಪೇತುಗೊಳಿಸುವ ಕೆಲಸ ಆರಂಭಿಸುತ್ತಾನೆ. ಜಮೀನ್ದಾರ ನಂಬಿಯಾರನು ಈ ಎಲ್ಲ ಸುದ್ದಿಯನ್ನು ಸರ್ಕಾರಕ್ಕೆ ಮುಟ್ಟಿಸುತ್ತಾನೆ. "ಇಲ್ಲಿ ಕ್ರಾಂತಿಕಾರಿಗಳು ಜಮೆಯಾಗಿದ್ದಾರೆ. ಸರಕಾರದ ಭೂಮಿ ವಶಪಡಿಸಿಕೊಂಡಿದ್ದಾರೆ. ಸೈನ್ಯ ಕಟ್ಟಿದ್ದಾರೆ. ಪ್ರತಿ ಸರಕಾರ ಸ್ಥಾಪಿಸಿದ್ದಾರೆ. ಗೃಹಸ್ಥರು, ಹೆಂಗಸರು, ಮಕ್ಕಳು ಇಲ್ಲಿ ಬದುಕೋದೆ ಕಷ್ಟವಾಗಿದೆ. ಇದರಿಂದ ಬ್ರಿಟಿಷ್ ಸಾಮ್ರಾಜ್ಯಕ್ಕೆ ಗಂಡಾಂತರ ಖಂಡಿತ. ಇಷ್ಟು ಬರೆದು ನನ್ನ ಕರ್ತವ್ಯ ನಾನು ಮಾಡುತ್ತಿದ್ದೇನೆ" ಎಂದು ದಾಖಲಿಸುತ್ತಾನೆ.

ಸಂಘದವರು ಕಯ್ಯೂರಿಗೆ ಗ್ರಾಮ ಪಂಚಾಯಿತಿ ಬೇಕೆಂದು ಜಿಲ್ಲಾಧಿಕಾರಿಗೆ ಪತ್ರ ಬರೆಯುತ್ತಾರೆ. ಆ ತಾಲ್ಲೂಕಿನ ರೈತ ಸಮ್ಮೇಳನವನ್ನು ಕಯ್ಯೂರಿನಲ್ಲಿಯೇ ನಡೆಸುವುದೆಂದು ತೀರ್ಮಾನಿಸಿದ್ದರಿಂದ ಅಪ್ಪು , ಚಿರುಕಂಡರು ಉತ್ಸಾಹದಿಂದ ಎಲ್ಲ ಬಗೆಯ ಸಿದ್ಧತೆ ಮಾಡಿಕೊಳ್ಳುತ್ತಿರುತ್ತಾರೆ. ಇವರ ಮೇಲೆ ನಿಗಾ ವಹಿಸಲು ಸರ್ಕಾರದ ಕಡೆಯಿಂದ ಸುಬ್ಬಯ್ಯ ಎನ್ನುವ ಪೊಲೀಸು ಆಗಮಿಸುತ್ತಾನೆ. ಸಂಘದ ಸದಸ್ಯರ ಮೇಲೆ ದಬ್ಬಾಳಿಕೆ ಮಾಡಲು ಸುಬ್ಬಯ್ಯ ಯತ್ನಿಸಿದಾಗ ಎಲ್ಲರೂ ತಿರುಗಿ ಬೀಳುತ್ತಾರೆ. ಆತ ತಪ್ಪಿಸಿಕೊಳ್ಳಲು ಯತ್ನಿಸಿ ನದಿಗೆ ಬಿದ್ದು ಸಾಯುತ್ತಾನೆ.

ಇದುವರೆವಿಗೆ ಶಾಂತವಾಗಿ ಸಾಗುತ್ತಿದ್ದ ಕಯ್ಯೂರಿನ ಕ್ರಾಂತಿ ಈ ಆಕಸ್ಮಿಕ ಘಟನೆಯಿಂದ ಹೊಸ ತಿರುವು ಪಡೆದುಕೊಳ್ಳುತ್ತದೆ. ಇದುವರೆವಿಗೂ ಮಾರ್ಗದರ್ಶನ ನೀಡುತ್ತಿದ್ದ ಮಾಸ್ತರು ಇಲ್ಲದೇ ಇರುವುದೂ ಕೂಡ ಇಂತಹ ಅಚಾತುರ್ಯ ನಡೆಯಲು ಕಾರಣವಾಗಿಬಿಡುತ್ತದೆ. ಪೊಲೀಸರ ಮರಣದ ದುರ್ಘಟನೆಯಿಂದ ಕಯ್ಯೂರಿಗೆ ಪೊಲೀಸರು, ಅನಂತರ ಮಲಬಾರ್ ಸ್ಪೆಷಲ್ ಪಡೆಯ ೬೦ ಜನ ಯೋಧರು ಆಗಮಿಸುತ್ತಾರೆ. ಅಪ್ಪು ಅಬೂಬಕರ್ ಸಹಿತ ಕೆಲವರು ಭೂಗತರಾಗುತ್ತಾರೆ. ಚಿರುಕಂಡ, ಕುಂಞಂಬು, ಕಣ್ಣ ಮೊದಲಾದವರ ಸೆರೆ ಹಿಡಿಯುತ್ತಾರೆ. ಅಪ್ಪು , ಅಬೂಬಕರರು ಮಾಸ್ತರರನ್ನು ಹುಡುಕಿ ಊರೂರು ಸುತ್ತುತ್ತಾರೆ, ಆದರೆ ಮಾಸ್ತರು ಸಿಗುವುದಿಲ್ಲ. ಬದಲಿಗೆ, ತಮ್ಮ ಊರಿನ ಜನರ ಮೇಲೆ ಪೊಲೀಸರ ದೌರ್ಜನ್ಯ ವಿಪರೀತವಾದಾಗ "ಉರಿಯುವ ಸಿಗರೇಟನ್ನು ಮೂಗಿಗೆ ತುರುಕುವುದು, ಉಗುರುಗಳಿಗೆ ಸೂಜಿ ಚುಚ್ಚುವುದು, ಕೈಕಾಲು ಬಿಗಿದು ಬಾಯಿಗೆ ಹೊಲಸನ್ನು ಸುರಿಯುವುದು..." ಇವೆಲ್ಲವನ್ನು ತಪ್ಪಿಸಲು ಶರಣಾಗುತ್ತಾರೆ. ಎಲ್ಲರನ್ನು ಹೊಸದುರ್ಗದ ಅನಂತರ ಮಂಗಳೂರಿನ ಜೈಲಿಗೆ ಸಾಗಿಸುತ್ತಾರೆ. ಕಯ್ಯೂರಿನ ರೈತರ ರಕ್ಷಣೆಗೆ ರಕ್ಷಣಾ ಸಮಿತಿ ರಚಿಸಿ ಕೆಲವರು ಹೋರಾಡುತ್ತಾರೆ. ವಕೀಲರಾದ ರಾಜಾರಾವ್ ಮತ್ತು ಪಿಳ್ಳೆಯವರು ಅಪಾರ ಶ್ರಮ ಹಾಕುತ್ತಾರೆ. ಕಯ್ಯೂರು ಪೊಲೀಸು ಕೊಲೆ ಮೊಕದ್ದಮೆ ಆರಂಭವಾಗಿ ಚರ್ಚೆ, ವಾದ ವಾಗ್ವಾದಗಳು ನಡೆದು, ಸಾಕ್ಷ್ಯ-ಸುಳ್ಳು ಸಾಕ್ಷ್ಯ ಹೇಳಿಸಿ ಕೊನೆಗೆ ಕೆಳ ನ್ಯಾಯಾಲಯದಿಂದ ಸೆಷನ್ಸ್ ನ್ಯಾಯಾಲಯಕ್ಕೆ ಕೇಸು ವರ್ಗಾವಣೆ ಆಗುತ್ತದೆ.

ಗುಬ್ಬಚ್ಚಿಯ ಮೇಲೆ ಬ್ರಹ್ಮಾಸ್ತ್ರ ಪ್ರಯೋಗಿಸಿದಂತೆ ಈ ಕಯ್ಯೂರಿನ ರೈತರನ್ನು ಸರ್ಕಾರ ಕೊಲ್ಲುತ್ತಿದೆ ಎಂದು ಪಿಳ್ಳೆಯವರು ವಾದಿಸುತ್ತಾರೆ. ಜಮೀನ್ದಾರರು ನಡೆಸುವ ಸುಲಿಗೆಯ ರಕ್ಷಣೆಗಾಗಿ ಪೊಲೀಸರು ಹೂಡಿರುವ ಒಳಸಂಚೇ ಈ ಪ್ರಕರಣ. ಪೊಲೀಸನೊಬ್ಬನ ಆಕಸ್ಮಿಕ ಸಾವನ್ನೇ ಆಧಾರವಾಗಿಟ್ಟುಕೊಂಡು, ಈ ಪ್ರಾಂತದ ರೈತ ಸಂಘಟನೆಯನ್ನೇ ನಿರ್ನಾಮಗೊಳಿಸಲು ಈ ಮೊಕದ್ದಮೆ ಮೂಲಕ ಯತ್ನಿಸಲಾಗಿದೆ. ಘಟನೆಯ ದಿನ ತಲಚೇರಿಯ ರಾತ್ರಿ ಶಾಲೆಯಲ್ಲಿ ಪಾಠ ಹೇಳಿಕೊಡುತ್ತಿದ್ದರೆಂದು ಯಾವ ಸಂದೇಹಕ್ಕೂ ಆಸ್ಪದವಿಲ್ಲದಂತೆ ಸಾಬೀತಾಗಿರುವ ಮಾಸ್ತರು, ಪೊಲೀಸನ ಕೊಲೆ ಮೊಕದ್ದಮೆಯಲ್ಲಿ ಆರೋಪಿ! ಹಲವಾರು ಮೈಲುಗಳಾಚೆ ಇದ್ದ ಪ್ರಭು ಮತ್ತಿತರರು ಆರೋಪಿಗಳು ! ಘಟನೆ ನಡೆದ ಸ್ಥಳದಲ್ಲೇ ಇರದಿದ್ದ ಚಿರುಕಂಡ, ಅಪ್ಪು ಮತ್ತು ಅವರಿಗೆ ಜನ್ಮ ಕೊಟ್ಟ ವೃದ್ಧ ರೈತರಿಬ್ಬರು ಆರೋಪಿಗಳು !...

ಕ್ರಾಂತಿಕಾರರ ಪರವಾಗಿ ವಕೀಲರು ಎಷ್ಟೇ ವಾದಿಸಿದರೂ ಅಲ್ಲಿ ಬಂದ ತೀರ್ಪು ಆಘಾತಕಾರಿಯಾಗಿರುತ್ತದೆ. ರಾಜದ್ರೋಹದ ಚಟುವಟಿಕೆಯ ಅಪರಾಧಕ್ಕಾಗಿ ಮಾಸ್ತರು, ಕಣ್ಣ ಮತ್ತಿತರ ಇಪ್ಪತ್ತು ಜನರಿಗೆ ಐದು ವರ್ಷಗಳ ಜೈಲು; ಕೃಷ್ಣನ್ ನಾಯರ್ ಮೊದಲಾದ ಹದಿನೆಂಟು ಜನರಿಗೆ ಎರಡು ವರ್ಷ ಜೈಲು; ಪ್ರಭು, ಥಾಂಡಿಗ, ಚಂದು, ಅಪ್ಪುವಿನ ತಂದೆ, ಚಿರುಕಂಡನ ತಂದೆ ಮತ್ತಿತರರ ಬಿಡುಗಡೆ ; 'ಪ್ರಾಣಾಂತಿಕವಾದ ಪೆಟ್ಟನ್ನು ಪೊಲೀಸರಿಗೆ ಯಾರು ಕೊಟ್ಟರೋ ಹೇಳುವುದು ಕಷ್ಟ' ಎಂಬ ಅಭಿಪ್ರಾಯ ತೀರ್ಪಿನಲ್ಲಿದ್ದರೂ ಪೊಲೀಸರನ್ನು ಕೊಂದ ಅಪರಾಧಕ್ಕಾಗಿ ಅಪ್ಪು , ಚಿರುಕಂಡ, ಅಬೂಬಕರ್, ಕುಂಞಂಬು ಮತ್ತು ಕುಟ್ಟಿಕೃಷ್ಣನಿಗೆ ಮರಣದಂಡನೆ. ಕುಟ್ಟಿಕೃಷ್ಣ ಅಪ್ರಾಪ್ತನಾದುದರಿಂದ ಅವನನ್ನು ಕೈದಿಗಳ ಶಿಕ್ಷಣ ಶಾಲೆಗೆ ಕಳುಹಿಸುವುದು. ಇದನ್ನು ಪ್ರಶ್ನಿಸಿ ಮುಂದೆ ಉಚ್ಚ ನ್ಯಾಯಾಲಯ, ಫೆಡರಲ್ ನ್ಯಾಯಾಲಯಕ್ಕೆ ಹೋದರೂ ರಾಷ್ಟ್ರಾದ್ಯಂತ ಈ ನಾಲ್ವರ ಜೀವ ಉಳಿಸಲು ಚಳವಳಿ ಕೂಡ ನಡೆದರೂ ಪ್ರಯೋಜನವಾಗುವುದಿಲ್ಲ. ಕೊನೆಗೆ ಮಾರ್ಚ್ ೨೯ರಂದು ಅವರಿಗೆ ಮರಣದಂಡನೆ ಆಗುತ್ತದೆ. ಕಯ್ಯೂರು ವೀರಗಾಥಾ ನಾಟಕದ ಮಾದರಿಯಲ್ಲಿ ಮಂಗಳದೊಂದಿಗೆ ಮುಕ್ತಾಯವಾಗುತ್ತದೆ.

'ಚಿರಸ್ಮರಣೆ' ನಿರಂಜನರು ಕಮ್ಯುನಿಸ್ಟ್ ಪಕ್ಷದೊಂದಿಗೆ ನೇರ ಸಂಬಂಧ ಹೊಂದಿದ್ದ ಕಾಲದಲ್ಲಿ ಕಣ್ಣಾರೆ ಕಂಡ ಸಂಗತಿಗಳು, ಪರಿಚಯ ಪಡೆ ಸಂಗಾತಿಗಳ ನೆನಪುಗಳು, ಸಾಮಾಜಿಕ ಸಮಸ್ಯೆಗಳಿಗೆ ತೋರಿದ ಜೀವಂತ ಸ್ಪಂದನ - ಇವುಗಳಿಂದ ರೂಪುಗೊಂಡಿದೆ. ಇಲ್ಲಿ ಬರುವಂತೆ, ಸಮಾಜ ವಿಕಾಸ, ವರ್ಗಸಂಘರ್ಷ, ಶ್ರಮಜೀವಿಗಳ ಸಂಘಟನೆ, ದೇಶೀಯ-ವಿದೇಶೀಯ ಸಾಮ್ರಾಜ್ಯಶಾಹಿ-ಬಂಡವಾಳಶಾಹಿಗಳ ಶಾಮೀಲು, ಸಮಾಜವಾದಿ ಕ್ರಾಂತಿಯ ಮೂಲಕ ಸಮಸ್ಯೆಯ ಪರಿಹಾರದ ಸೂಚನೆ ಇವುಗಳಲ್ಲಿ ಮಾರ್ಕ್ಸ್‌ವಾದಿ ಚಿಂತನೆಯ ಪ್ರಭಾವವನ್ನು ಸ್ಪಷ್ಟವಾಗಿಯೇ ಕಾಣಬಹುದು.

ಚಿರಸ್ಮರಣೆಯನ್ನು ನೆನೆದಾಗಲೆಲ್ಲ ಕರ್ನಾಟಕದ ಈ ಸೂರಿನ ಸ್ವಾತಂತ್ರ್ಯ ಹೋರಾಟದ ಘಟನೆ ಮತ್ತು ಭಗತ್ ಸಿಂಗ್, ರಾಜ್‌ಗುರು, ಸುಖದೇವ್‌ರ ಕ್ರಾಂತಿಕಾರಿ ಹೋರಾಟವು ಮರಣದಂಡನೆಯಲ್ಲಿ ಅಂತ್ಯವಾಗುವುದು ನೆನಪಾಗುತ್ತದೆ.

ಮಾಸ್ತರರ ಮಾರ್ಗದರ್ಶನ, ಅಪ್ಪು ಚಿರುಕಂಡರ ಉತ್ಸಾಹ, ಅಪ್ಪುವಿನ ತಂದೆ ಚಿರುಕಂಡರ ತಂದೆಯರ ಬೆಂಬಲ, ತ್ರಿಕರಪುರದ ಚಂದುವಿನ ಸ್ಪಂದನ, ಕಣ್ಣನ ಸುಮಧುರ ಗಾಯನ ಮೊದಲಾದವರಿಂದ ಕಯ್ಯೂರು ಹೊಸ ರೂಪ ಪಡೆದು ಕ್ರಾಂತಿಕಹಳೆ ಊದುತ್ತದೆ. ಕ್ರಾಂತಿ ಏಕಾಏಕಿಯಾಗಿ ನಡೆಯುವಂತಹದ್ದಲ್ಲ, ಅದು ಒಬ್ಬರಿಂದಲೇ ಆಗುವಂತಹದ್ದೂ ಅಲ್ಲ, ಅದು ಹಲವು ಜನರೊಡಗೂಡಿ ಸುದೀರ್ಘವಾಗಿ ನಡೆಯುವ ಸಾಮೂಹಿಕ ಪ್ರಕ್ರಿಯೆ ಎನ್ನುವುದನ್ನು ಕಾದಂಬರಿಯಲ್ಲಿ ಮಾಸ್ತರು ಸೂಕ್ಷ್ಮವಾಗಿ ತಿಳಿಸುತ್ತಾರೆ. ಶಾಲೆಯ ಆವರಣದಲ್ಲಿ ತಾವು ನೆಟ್ಟು ಬೆಳೆಸಿದ ಎರಡು ಮಾವಿನ ಸಸಿಗಳನ್ನು ನೋಡಿ ಅಪ್ಪು ಮತ್ತು ಚಿರುಕಂಡರ ಕಡೆಗೆ ತಿರುಗಿ, "ಗಿಡಗಳು ಬೆಳೆಯುತ್ತಿವೆ, ಆದರೆ ಅವು ಫಲ ಕೊಡಲು ಇನ್ನೂ ಸಮಯ ಬೇಕು" ಎನ್ನುತ್ತಾರೆ. ಅದರಂತೆಯೇ ಆರಂಭದಲ್ಲಿ ಕೇವಲ ಅಪ್ಪು, ಚಿರುಕಂಡರೆಂಬ ಬಾಲಕರಿಂದ ಆರಂಭವಾದ ಕಯ್ಯೂರಿನ ಕ್ರಾಂತಿ ಅನಂತರ ಇಡೀ ಊರಿಗೇ ವ್ಯಾಪಿಸುತ್ತದೆ. ಆರಂಭದಲ್ಲಿ ಬಾಲಕರಂತೆ ಕಂಡುಬಂದವರು ಕಾದಂಬರಿಯ ಕೊನೆಕೊನೆಗೆ ದೊಡ್ಡ ಕ್ರಾಂತಿಕಾರಿಗಳಾಗಿ ಇಡೀ ನಾಡೇ ಮೆಚ್ಚುವಂತೆ ಹೊಸರೂಪ ಪಡೆಯುತ್ತಾರೆ. ಜಮೀನ್ದಾರರ ಅಡಿಯಾಳಿನಂತೆ ವರ್ತಿಸುತ್ತಿದ್ದ ಊರ ಜನರೂ ಕೂಡ ಜಮೀನ್ದಾರಿಕೆಯನ್ನು ಕಿತ್ತೊಗೆಯುವಷ್ಟು ಪರಿವರ್ತಿತರಾಗುತ್ತಾರೆ. ಆದರೆ ಅಂತಿಮ ಸಮಯದಲ್ಲಾದ ಘಟನೆ, ನ್ಯಾಯಸ್ಥಾನದಲ್ಲಾದ ಅನ್ಯಾಯ ಕಯ್ಯೂರಿನ ಕ್ರಾಂತಿಯನ್ನು ಹೊಸಕಿಹಾಕಿ ಬಿಡುತ್ತದೆ. ಇದು ಸರಕಾರದ, ವ್ಯವಸ್ಥೆಯ ಕ್ರೂರವರ್ತನೆಯಾಗಿ ತೋರುತ್ತದೆ. ಆದರೆ ಕಯ್ಯೂರು ವೀರರ ಹೋರಾಟ ಸ್ಮರಣೆಯಲ್ಲಿ ಸದಾಕಾಲ ಉಳಿಯುತ್ತದೆ.

**ಡಾ॥ ಎಚ್. ಕೆ. ವೆಂಕಟೇಶ**
ನಂ. ೭೩, ದಯಾ ಮಾರ್ಗ, ಸಿದ್ಧಾರ್ಥ ನಗರ, ಮೈಸೂರು - ೫೭೦ ೦೧೧

# ಪ್ರೇಮಿಯ ಹೃದಯದ ಭಾಷೆ ಕಲಿಸಿದ ಮಹಾನ್ ದಾರ್ಶನಿಕ ಜಲಾಲುದ್ದೀನ್ ರೂಮೀ

ಎ. ಎಸ್. ಮಕಾನದಾರ

**ಮಾ**ನವ ಇತಿಹಾಸದಲ್ಲಿ ಆಗಿಹೋದ ನಮ್ಮ ಅನೇಕ ದಾರ್ಶನಿಕರು, ವಚನಕಾರರು, ದಾಸರು, ಸಂತರು, ಶರಣರು, ಅನುಭಾವಿಗಳು ಹಾಗೂ ಸೂಫಿ ಸಂತರು ಕೂಡ ಭಕ್ತ ಮತ್ತು ಭಗವಂತನ ನಡುವೆ ಪುರೋಹಿತನ ಅಗತ್ಯವಿಲ್ಲವೆಂದೇ ಬೋಧಿಸಿದ್ದಾರೆ.

ಧರ್ಮ ಮತ್ತು ಅಧ್ಯಾತ್ಮಕ್ಕಿರುವ ಮೂಲಭೂತ ವ್ಯತ್ಯಾಸವೆಂದರೆ ಭಕ್ತ ಮತ್ತು ದೇವರ ಸಂಬಂಧಗಳಲ್ಲದೆ, ಧಾರ್ಮಿಕವಂತರು ದೇವರನ್ನು ಆರಾಧಿಸಿದರೆ, ಆಧ್ಯಾತ್ಮಿಕರು ಪ್ರೀತಿಯಿಂದ ದರ್ಶಿಸುತ್ತಾರೆ. ಕಾಯಕದಲ್ಲಿ ಕೈಲಾಸ ಕಾಣುವುದು ವಚನಕಾರರ ಒಂದು ವಿಧವಾದರೆ ಧ್ಯಾನ, ನೃತ್ಯ, ಉಪವಾಸ ಮುಂತಾದ ಕ್ರಮಗಳ ಮೂಲಕ ಸೃಷ್ಟಿಕರ್ತನನ್ನು ತಲುಪಲು ನೆರವಾಗುವ ವಿಶಿಷ್ಟ ವಿಧಿಗಳೆಂದು ಮನ ಮುಟ್ಟುವ ಹಾಗೆ ಸೂಫಿಗಳು ನಮಗೆ ತೋರಿಸಿ ಕೊಟ್ಟಿದ್ದಾರೆ.

ಝೆನ್, ಸೂಫಿ, ಶರಣ ಪರಂಪರೆಗಳಲ್ಲಿ ದೈವಿಕ ಪ್ರೇಮದ ವಿವಿಧ ರೂಪಗಳನ್ನು ಆಧ್ಯಾತ್ಮಿಕ ಸಾಹಿತ್ಯದಲ್ಲಿ ಕಾಣಬಹುದಾಗಿದೆ. ಆದರೆ, ದೇವರೆ ಪ್ರಿಯತಮೆ (ಹೆಣ್ಣಾಗಿ) ಭಕ್ತ ಪ್ರಿಯಕರ (ಗಂಡಾಗಿ) ಬೆಳೆದ ಒಂದು ಅನುಭಾವಿ ಪರಂಪರೆ ಸೂಫಿ ಪರಂಪರೆಯಾಗಿದೆ.

'ಸೂಫಿ' ಎಂದರೆ ಅನುಭಾವಿ, ತುಪ್ಪಟದಂತೆ ಮೃದುವಾಗಿ, ನಯವಾದ ಹೃದಯ ಉಳ್ಳವನು ಎಂದರ್ಥ. ಬಿಳಿ ಉಣ್ಣೆಯ (ತುಪ್ಪಟ) ಬಟ್ಟೆ ಧರಿಸುವುದು, ಗುದಡಿ, ಗಿಂಡಿ, ದಂಡ ಮತ್ತು ಚಾಪೆ ಸೂಫಿಗಳು ಹೊಂದಿರುವ ವಸ್ತುಗಳಾಗಿವೆ. ಸೂಫಿಗಳು ತಮ್ಮ ಪರಿಶುದ್ಧ ಆಧ್ಯಾತ್ಮಿಕ ಅನುಭಾವದ ಅನುಭವಗಳನ್ನು ಅವಿಚ್ಛಿನ್ನವಾಗಿ ಬಳಸುತ್ತಾರೆ. ನಿಜವಾದ ಪ್ರೇಮಿ ಹೇಗೆ ತನ್ನ ಪ್ರಿಯತಮ/ಮೆಗೆ ಧ್ಯಾನಿಸುತ್ತಾನೆ/ಳೆಯೋ ಅದೇ ರೀತಿ ನಿಜವಾದ ಅನುಭಾವಿ ಮತ್ತೇನನ್ನೂ ಧ್ಯಾನಿಸುವದಿಲ್ಲ.

ಭಕ್ತಿ ಭಂಡಾರಿ ಬಸವಣ್ಣ ಕೂಡಲಸಂಗಮನನ್ನು, ಅಲ್ಲಮಪ್ರಭು ಗುಹೇಶ್ವರನನ್ನು, ಮೀರಾ ಕೃಷ್ಣನನ್ನು, ಅಕ್ಕಮಹಾದೇವಿ ಚೆನ್ನಮಲ್ಲಿಕಾರ್ಜುನನನ್ನು ನೆನೆದಂತೆ ಪ್ರೇಮದ ಭಾಷೆಯನ್ನು ಬಳಸಿ ಅನುಭಾವ ತತ್ವವನ್ನು ಅನೇಕ ದಾರ್ಶನಿಕರು, ಸೂಫಿಗಳು ಬಳಸುತ್ತ ಹೋದರು. ಅವರಲ್ಲಿ ಜಗತ್ತಿನಲ್ಲಿಯೇ ಅತ್ಯಂತ ದೊಡ್ಡ ಕವಿಯೆಂದೇ ಗುರುತಿಸಿ, ಗೌರವಿಸಲ್ಪಡುವ ಮಹಾನ್ ದಾರ್ಶನಿಕರಲ್ಲಿ ಓರ್ವನಾದ ಜಲಾಲುದ್ದೀನ್ (ಜಲಾಲ್-ಅಲ್-ದೀನ್) ರೂಮೀ ಕೂಡ ಒಬ್ಬನು.

ಕ್ರಿ. ಶ. ೧೨೦೭ (೧೨೦೧, ೧೨೦೪ ಅಂತಲೂ ಕೆಲವರ ತರ್ಕ) ಸೆಪ್ಟಂಬರ್ ೩೦ರಂದು ಅಫಘಾನಿಸ್ತಾನದ ಬಾಲ್ಕ್ ಜಿಲ್ಲೆಯ ಗ್ರಾಮೀಣ ಪ್ರದೇಶವಾದ ಬ್ಯಾಕ್ಟ್ರಿಯಾದ ಶ್ರೀಮಂತ ಕುಟುಂಬದಲ್ಲಿ ಜನನ. ತಂದೆ ಬಹಾವುದ್ದೀನ್ ಆಧ್ಯಾತ್ಮಿಕ ಪಥದಲ್ಲಿ ಆಸಕ್ತಿವುಳ್ಳ ವ್ಯಕ್ತಿ. ಬಾಲ್ಯದಲ್ಲಿಯೇ ರೂಮೀಯ ತಂದೆ ಬಹಾವುದ್ದೀನ್ ಬರೆದ ಲವ್ ನೋಟ್ಸ್ ಆಫ್ ಸೆಲ್ಫ್ ಟು ಸೋಲ್ ಎಂಬ ಪುಸ್ತಕದಿಂದ ಸೂಫಿ ಚಿಂತನೆಗಳ ಪ್ರಭಾವಕ್ಕೆ ಒಳಗಾಗಿದ್ದ.

ಬಹಾವುದ್ದೀನ್ ಕುಟುಂಬ ಬಾಲ್ಕ್‌ನಿಂದ ಪರ್ಷಿಯಾದ ಡಮಾಸ್ಕಸ್‌ಗೆ ವಲಸೆ ಹೋಗಿ ಅಲ್ಲಿಂದ ನಿಷಾಪುರದಲ್ಲಿ ನೆಲೆಯೂರಿದ ಸಂದರ್ಭದಲ್ಲಿ ಅಲ್ಲಿನ ಪ್ರಸಿದ್ಧ ಸೂಫಿ ಕವಿ ಫರಿದುದ್ದೀನ್ ಅತ್ತರನೊಡನೆ ಭೇಟಿಯಾಯಿತು. ಚಿಗುರು ಮೀಸೆಯ ಕನಸು ಕಂಗಳ ತರುಣ ರೂಮೀಯ ಮುಖಾರವಿಂದ ನೋಡಿ ದಾರ್ಶನಿಕ ಅತ್ತರ "ನಡೆದು ಬರುತಿದೆ ಕಡಲು" ಎಂದು ಉದ್ಗಾರ ತೆಗೆಯುತ್ತಾನೆ. ತಾನೇ ರಚಿಸಿದ ಇಲಾಹಿನಾಮಾವನ್ನು (ದೇವರ ಪುಸ್ತಕ) ಓದಲು ಕೊಡುತ್ತಾನೆ.

ನಿಷಾಪುರದಲ್ಲಿ ಬಹಾವುದ್ದೀನನ ಕುಟುಂಬ ಬಹುದಿನ ಕಳೆಯದೆ ಮಧ್ಯ ಟರ್ಕಿಯ ಕೋನ್ಯಾ ಎಂಬಲ್ಲಿಗೆ ಬಂದು ನೆಲೆಸಿದ ಕೆಲ ದಿನಗಳಲ್ಲಿಯೇ ರೂಮೀಯ ತಂದೆ ಇಹಲೋಕ ತ್ಯಜಿಸುತ್ತಾನೆ. ಮನುಷ್ಯನಿಗೆ ಅನವಶ್ಯಕವಾದ ಎಲ್ಲವನ್ನು ತ್ಯಜಿಸುವ ಅಗತ್ಯವನ್ನು ಒತ್ತಿ ಹೇಳುವ ದರ್ವೇಶಿ ಪಂಥದ ಹಿನ್ನೆಲೆಯ ಶಾಲೆಯ ಸ್ಥಾಪಕ ರೂಮೀಯ ತಂದೆ ಬಹಾವುದ್ದೀನ್‌ನದಾಗಿತ್ತು. ಪಠ್ಯಕ್ರಮದಲ್ಲಿ ಪಾಕಶಾಸ್ತ್ರ, ಪ್ರಾಣಿ ಸಾಕಾಣಿಕೆ, ಪ್ರಾಣಿಶಾಸ್ತ್ರ, ತತ್ವಶಾಸ್ತ್ರ, ಕಾವ್ಯ, ಸಂಗೀತದ ಜೊತೆಗೆ ಮನುಷ್ಯನ ಬದುಕಿಗೆ ಬೇಕಾಗುವ ದುಡಿಮೆ, ಆಂತರಿಕ ವಿಕಸನಕ್ಕೆ ಸಂಬಂಧಿಸಿದ ಪಠ್ಯಗಳ ಅಧ್ಯಯನ ಹೀಗೆ ಅನೇಕ ವಿಷಯಗಳು ಜರುಗುತ್ತಿದ್ದವು.

ಬಹಾವುದ್ದೀನರ ಅಂದಿನ ದೂರದೃಷ್ಟಿತ್ವ ಇಂದಿನ ವೈಜ್ಞಾನಿಕ ಯುಗದ ಶಿಕ್ಷಣ ತಜ್ಞರ ಕಣ್ಣಿಗೆ ಕಾಣಿಸುತ್ತಿಲ್ಲ, ಕಿವಿಗೆ ಕೇಳಿಸುತ್ತಿಲ್ಲ. ಕೇವಲ ಪದವಿ ಪ್ರಮಾಣ ಪತ್ರಗಳನ್ನು ವಿದ್ಯಾರ್ಥಿಯ ಕೊರಳಿಗೆ ಕಟ್ಟಿ ನಿರುದ್ಯೋಗಿಗಳನ್ನೇ ಸೃಷ್ಟಿಸುವ ಕಾರ್ಯಾಗಾರಗಳಾಗಿ ಇರುತ್ತಿರುವುದು ಸೋಜಿಗದ ಸಂಗತಿ.

ತಂದೆಯಿಂದ ಬಳುವಳಿಯಾಗಿ ಬಂದ ಶಿಕ್ಷಣ ಸಂಸ್ಥೆಯನ್ನು ಮುನ್ನಡೆಸುವ ಜವಾಬ್ದಾರಿ ೨೦ರ ತರುಣ ರೂಮೀಯ ಹೆಗಲಿಗೆ ಬೀಳುತ್ತದೆ. ರೂಮೀ ಬದುಕಿನ ಶಿಕ್ಷಣ, ಧಾರ್ಮಿಕ ಶಿಕ್ಷಣ ಧಾರೆ ಎರೆದು ಸೈ ಎನ್ನಿಸಿಕೊಳ್ಳುತ್ತಾನೆ. ಅವನು ಅಧಿಕಾರ ವಹಿಸಿಕೊಂಡ ಕೇವಲ ೨ ವರ್ಷಗಳಲ್ಲಿಯೇ ೧೦ ಸಾವಿರ ಶಿಷ್ಯಂದಿರು ಶಾಲೆಯಲ್ಲಿ ಪ್ರವೇಶ ಪಡೆದು ಜ್ಞಾನಾರ್ಜನೆ ಮಾಡುತ್ತಿರುತ್ತಾರೆ, ಬಹಾವುದ್ದೀನ್ ಸ್ಥಾಪಿಸಿ ಬೆಳೆಸಿದ 'ದರ್ವೇಶಿ ಪಂಥ'ವು ಮನುಷ್ಯನಿಗೆ ಅನಗತ್ಯವಾಗಿರುವುದು ಕೇವಲ ವಸ್ತುಗಳಲ್ಲ; ಭಾವನೆಗಳು ಕೂಡ ಎನ್ನುವುದನ್ನು ಹೇಳುತ್ತದೆ. "ನಿನ್ನ ಭಾವನೆ-ನಿನ್ನ ಚಿಂತನೆಗಳೇ ನೀನು" ಎನ್ನುವುದಕ್ಕೆ ಹೆಚ್ಚು ಮಹತ್ವ ನೀಡುತ್ತದೆ.

ಜಲಾಲುದ್ದೀನ್ ತನ್ನ ಅನೇಕ ಚಿಂತನೆಗಳ ಕುಲುಮೆಯಲ್ಲಿ ಕಾಯ್ದ ಕಾರಣ ಅವನ ಜೀವನದಲ್ಲಿ ಅನೇಕ ತಲ್ಲಣಗಳಿಂದ ಎದೆಯೊಡೆದ ಹುಡುಕಾಟಗಳಿಂದ ಕೂಡಿದ್ದು ತನ್ನ ೩೩ನೇ ವಯಸ್ಸಿನಲ್ಲಿಯೇ ಜಗತ್ತಿನ ಅತ್ಯಂತ ದೊಡ್ಡ ದಾರ್ಶನಿಕನೆಂದು, ಪ್ರಸಿದ್ಧ ಅಧ್ಯಾಪಕನೆಂದು ಕೀರ್ತಿ ಗಳಿಸಿದ. ರೂಮೀಯ ಉಪನ್ಯಾಸ ಕೇಳಲು ದೊರೆಗಳು, ಪ್ರತಿಷ್ಠಿತ

ಕುಟುಂಬದವರು, ವರ್ತಕರು ಹಪಹಪಿಸುತ್ತಿದ್ದರು. 'ಹೊಗಳಿ–ಹೊಗಳಿ ಎನ್ನ ಹೊನ್ನ ಶೂಲಕ್ಕೆ ಏರಿಸ ದಿರಯ್ಯ' ಎನ್ನುವ ಬಸವಣ್ಣನವರ ವಚನದಂತೆ ಕಿರಿಯ ವಯಸ್ಸಿನಲ್ಲಿ ತಾನು ಗಳಿಸಿದ ಕೀರ್ತಿ ಕಾಮನೆ–ವಾಂಛೆ ಗಳಿಂದಲೇ ರೂಮೀಗೆ ವಾಕರಿಕೆ ಬರಲಾರಂಭಿಸಿತು. ೩೮ನೇ ವಯಸ್ಸಿನಲ್ಲಿಯೇ ತಾನು ಪಡೆದುಕೊಂಡ ಪ್ರಸಿದ್ಧಿ, ಮಾನ–ಸಂಮಾನ ಗೌರವಗಳ ವಿರುದ್ಧ ತಾನೇ ತಿರುಗಿ ಬಿದ್ದ. ತಾನು ಗಳಿಸಿದ ಪ್ರಸಿದ್ಧಿಯ ಭಾರದಿಂದ ಕುಸಿದು ತತ್ತರಿಸಿದ. ಸಾಂಪ್ರದಾಯಿಕ ಜೀವನದ ಮೃತ್ಯುಕೂಪ ದಿಂದ ಹೊರಬರಲು ಹಾತೊರೆಯತೊಡಗಿದ.

*ಪ್ರೇಮಿಯ ಹೃದಯದೊಳಗೆ*
*ಮತ್ತೊಂದು ಲೋಕವಿದೆ*
*ಈ ಲೋಕದೊಳಗಿನ್ನೊಂದು ಲೋಕವಿದೆ*

– ಎಂದು ರೂಮೀ ಜಗಕೆ ಸಾರಿದ. ಈ ವಿಚಾರಧಾರೆ ವಿಲಕ್ಷಣವಾಗಿ ಸ್ಫೋಟಗೊಳ್ಳಲು ಆ ಕಾಲದ ವಿಶಿಷ್ಟ–ವಿಚಿತ್ರ ಆಧ್ಯಾತ್ಮಿಕ ಸಾಧಕ ಶಂಷುದ್ದೀನ್ ಎಂಬ ಸೂಫಿಯ ಗೆಳೆತನದಿಂದಾಗಿತ್ತು. ಒಮ್ಮೆ ಕೋನ್ಯಾದ ಮಾರುಕಟ್ಟೆಯೊಂದರಲ್ಲಿ ರೂಮೀಯು ಫರೀದುದ್ದೀನ್ ಅತ್ತರ್ ರಚಿಸಿದ "ಇಲಾಹಿ ನಾಮಾ" ಕೃತಿಯೊಳಗಿನ ಕೆಲ ಚಿಂತನೆ ಗಳನ್ನು ಸಭಿಕರೆದುರು ಬಿತ್ತರಿಸತೊಡಗಿದ. ಆ ಸಂದರ್ಭದಲ್ಲಿ ಶಂಷುದ್ದೀನ್ ಇಲಾಹಿನಾಮಾ ಪುಸ್ತಕದ ಜೊತೆಗೆ ರೂಮೀಯ ಬಳಿ ಇರುವ ಅತ್ಯಮೂಲ್ಯವಾದ ಕೆಲ ಪುಸ್ತಕಗಳನ್ನು ಪಕ್ಕದಲ್ಲಿರುವ ನೀರಿನ ತೊಟ್ಟಿಗೆ ಎಸೆದುಬಿಟ್ಟ! "ಏನಿದು ? ನನ್ನೆಲ್ಲಾ ಮಹತ್ವದ ಪುಸ್ತಕಗಳನ್ನು ನೀನೇಕೆ ನೀರಿನ ತೊಟ್ಟಿಗೆ ಎಸೆದೆ" ಎಂದು ಕೋಪದಿಂದ ಶಂಷುದ್ದೀನ್‌ಗೆ ರೂಮೀ ಕೇಳುತ್ತಾನೆ.

ಆಗ ಶಾಂತಚಿತ್ತನಾಗಿ ಶಂಷುದ್ದೀನ್ ರೂಮೀಗೆ, "ಇನ್ನು ಮುಂದೆ ನೀನು ಏನು ಓದಿ ತಿಳಿದು ಕೊಂಡಿರುವೆಯೋ ಅದರಿಂದ ಬದುಕಲು ಕಲಿಯಬೇಕು" ಎಂದು ಹೇಳುತ್ತಾನೆ.

ನೋವಿನಿಂದ ಖಿನ್ನಗೊಂಡ ರೂಮೀ ತನ್ನ ತಂದೆ ನೀಡಿದ ಪುಸ್ತಕಗಳ ಜೊತೆಗೆ ತಾನು ಸಂಗ್ರಹಿಸಿದ ಅಮೂಲ್ಯವಾದ ಗ್ರಂಥಗಳು ನೀರು ಪಾಲಾದವಲ್ಲ ಎಂದು ನೊಂದುಕೊಂಡು ನೀರಿನ ತೊಟ್ಟಿಯತ್ತ ಕಣ್ಣು ಹಾಯಿಸುತ್ತಾನೆ.

"ಹೆದರಬೇಡ ರೂಮೀ, ಆ ಎಲ್ಲಾ ಪುಸ್ತಕಗಳು ಒದ್ದೆಯಾಗಲಾರವು" ಎಂದು ಶಂಷುದ್ದೀನ್ ಹೇಳಿ ನೀರಿನ ತೊಟ್ಟಿಯಲ್ಲಿ ಎಸೆದಿರುವ ಪುಸ್ತಕಗಳನ್ನು ರೂಮೀಯ ಕೈಗೆ ಕೊಟ್ಟು, "ನಿನ್ನ ಪುಸ್ತಕಗಳು ನೀರಿನಲ್ಲಿ ತೊಯ್ದಿಲ್ಲ, ಪ್ರತಿಪುಟಗಳು ಒಣಗಿವೆ, ನೋಡಿಲ್ಲಿ" ಎನ್ನುತ್ತಾನೆ. ಆ ಎಲ್ಲಾ ಪುಸ್ತಕಗಳು ನೀರಿನಲ್ಲಿ ತೊಯ್ಯದೆ ಪ್ರತಿ ಪುಟಗಳು ಒಣಗಿರುತ್ತವೆ. "ಒಮ್ಮೆ ನನ್ನ ಕೈಯಿಂದ ಹೋದ ಪುಸ್ತಕಗಳು ನನಗೆ ಬೇಕಾಗಿಲ್ಲ" ಎನ್ನುತ್ತಾನೆ ರೂಮೀ. ಆ ಸಂದರ್ಭ ದಿಂದಲೇ ರೂಮೀಯ ಅಂತರಂಗದಲ್ಲಿ ಅಡಗಿರುವ ಪ್ರಚಂಡ ಕಾವ್ಯ ಶಕ್ತಿ ಹೊರಹೊಮ್ಮುತ್ತದೆ.

ಇದುವರೆಗೂ ತಾನು ದೇವರೆಂದು ಏನನ್ನು ಭಾವಿಸಿದ್ದೇನೊ ಅದನ್ನೇ ಇಂದಿನಿಂದ ಒಬ್ಬ ಮನುಷ್ಯನಲ್ಲಿ ಕಾಣತೊಡಗುವೆ ಎಂದು ರೂಮೀ ತನ್ನ ಹೊಸ ಸಂಗತಿ ಗುರುವೂ ಆದ ಶಂಷುದ್ದೀನ್‌ಗೆ ಹೇಳುತ್ತಾನೆ.

"ಮರಣದ ನಂತರ ನಮ್ಮನ್ನು ನೆಲದೊಳಗಿನ ಗೋರಿಯೊಳಗೆ ಕಾಣಬಾರದು; ಸಹ ಮಾನವರ ಎದೆ ಯೊಳಗೆ ಕಾಣುವಂತಾಗಬೇಕೆಂದು" ನಿರ್ಧರಿಸುತ್ತಾನೆ.

*ಅರಸುತ್ತಾ ಹೊರಟೆ ಆತನನ್ನು ನಾನು*
*ಆತ ಸಿಲುಬೆಯ ಮೇಲಿರಲಿಲ್ಲ.*
*ವಿಗ್ರಹದ ದೇವಾಲಯಗಳಲ್ಲೂ ಇರಲಿಲ್ಲ*
*ಪುರಾತನ ಪಗೋಡಾಗಳಲ್ಲಿಯೂ ಆತನ*
*ಸುಳಿವಿರಲಿಲ್ಲ*
*ಕಾಬಾದ ನರನಾಡಿಗಳಲ್ಲಿ ಆತ ಕಾಣಲಿಲ್ಲ*
*ಶಿಶುವಿಹಾರಗಳಲ್ಲಾಗಲಿ, ವೃದ್ಧಾಶ್ರಮಗಳಲ್ಲಾಗಲಿ*
*ಆತ ಇರಲೇ ಇಲ್ಲ. ಇಬನ್ ಸಿನಾನನ್ನು ಕೇಳಿದೆ*
*ಆತನ ರಾಜಧಾನಿಯಲ್ಲಿರುವನೇ ಎಂದು*
*ಅಲ್ಲಿಯೂ ಸಿಗಲಿಲ್ಲ. ಬಳಲಿದ ನಾನು*
*ತಡಕಾಡಿದೆ ನನ್ನ ಎದೆಯೊಳಗೆ*
*ಆತ ಮತ್ತೆಲ್ಲೂ ಇರಲಿಲ್ಲ. ನನ್ನಲ್ಲೇ ಇದ್ದ.*

ಗುರು ತಬ್ರೀಜ್ ಶಂಷುದ್ದೀನ್, ಶಿಷ್ಯ ಜಲಾಲುದ್ದೀನ್, ರೂಮೀ ಈ ಈರ್ವರ ಆ ಭೇಟಿ ಒಂದು ಮಹಾನ್ ಸಂಬಂಧಯಾತ್ರೆ ಮಾತ್ರವಲ್ಲ ದಟ್ಟ ಪ್ರೇಮ, ದಟ್ಟ ಯಾತನೆ, ದಟ್ಟ ಯೋಚನೆ, ದಟ್ಟ ಜ್ಞಾನದ, ದಟ್ಟ ಸಂಭ್ರಮದ, ದಟ್ಟ ಸಂಬಂಧವೆಂದು ಡಾ॥ ಡಿ. ಆರ್. ನಾಗರಾಜರವರು ಬಣ್ಣಿಸುತ್ತಾರೆ. ಎಲ್ಲ ಸಂಬಂಧಗಳ ಪ್ರತೀಕವಾದ ಶಂಷುದ್ದೀನ್–ರೂಮೀಯ ಸಂಬಂಧವನ್ನು ಸಾಂಪ್ರದಾಯಿಕ ಅರ್ಥದಲ್ಲಿ ಗಂಡು–ಹೆಣ್ಣಿನ ಸಂಬಂಧವೆಂದರೂ ನಡೆಯುತ್ತದೆಂದು ವ್ಯಾಖ್ಯಾನಿಸುತ್ತಾರೆ.

ಪ್ರೇಮ ಮತ್ತು ಜ್ಞಾನ ಒಂದೇ ಆಗುವ ಸಂಬಂಧಗಳ ಕುರಿತಷ್ಟೇ ಅಲ್ಲ, ತನ್ನ ಗುರು ಶಂಷುದ್ದೀನ್‌ನ ಗೌರವಾರ್ಥ ಬರೆದ 'ದಿವಾನ್–ಏ–ಶಂಷ್ಸ್' ಎಂಬ ಕೃತಿಯಲ್ಲಿ ಎರಡು ಸಾವಿರದ ಐದುನೂರು ಪದ್ಯಗಳಿವೆ. ವಿನೋದದ ಮಾತು, ಕಥೆಗಳು, ಸಂವಾದ, ಹಿಂದಿನ ಸಂತರ ಜೀವನದ ಘಟನೆಗಳ ಕುರಿತು ಮಾರ್ಮಿಕವಾಗಿ ಬರೆದ 'ಮಸ್ನವಿ' ೬ ಸಂಪುಟಗಳಲ್ಲಿ ರೂಮೀ ರಚಿಸಿದ್ದು, ಇದನ್ನು ಪರ್ಶಿಯನ್ ಕುರ್‌ಆನ್‌ಗೆ ಹೋಲಿಸುತ್ತಾರೆ. "ಫಿಹಿ–ಮಾ–ಫಿಹಿ" ಪ್ರವಚನಗಳ ಸಂಕಲನಗಳು ಓದುಗರ ಮನದಾಳದಲ್ಲಿ ಬೇರೂರಿವೆ. ಮನುಷ್ಯ ಮನಸ್ಸಿನವರು ಮೆಚ್ಚಿಕೊಂಡಿದ್ದಾರೆ. ಜಗತ್ತಿನಲ್ಲಿ ಆಗಿಹೋದ ಅತ್ಯಂತ ಶ್ರೇಷ್ಠ ಮೇಧಾವಿ, ಅನುಭಾವಿಕ ಕವಿ ಎಂದು ಖ್ಯಾತ ವಿಮರ್ಶಕ ಪ್ರೊ॥ ಆರ್. ಹೆಬ್ರಿ ಅಭಿಪ್ರಾಯಪಟ್ಟಿದ್ದಾರೆ.

"ನನ್ನ ಒಳ ಮನಸ್ಸಿನ ಸಮುದ್ರದಿಂದ ತಬ್ರೀಜ್ ನನ್ನನ್ನು ಹೊರಗೆಳೆದ. ಆಗ ಬೆಳಕಿನ ಮಹಾ ಶರೀರವೆದ್ದಿತು. ಶಂಮ್ಸ್ ಕಣ್ಣಿಗೆ ಬೆಳಕಾದ ತರ್ಕದ ಸ್ಪಷ್ಟತೆಯಾದ, ಆತ್ಮದ ಪ್ರಖರ ಕ್ರಾಂತಿಯಾದ, ಆತನನ್ನೆಲ್ಲಾ ಸಂತೋಷಗಳಿಗೆ ಅಂತಿಮ ರೂಪವಾದ ಎಂದು ಜಲಾಲುದ್ದೀನ್ ರೂಮೀ ವರ್ಣಿಸಿದ್ದಾನೆ. ಅಷ್ಟೇ ಅಲ್ಲ ಗುರು ಶಂಷುದ್ದೀನ್‌ನೊಡನೆ ೪೦ ದಿನ ಉಪವಾಸ, ೩ ದಿನ ಹಬ್ಬ, ೪೦ ದಿನ ಕಾಲ ಊರಲ್ಲಿ, ೩ ದಿನಗಳ ಕಾಲ ಕಾಡಲ್ಲಿ, ೪೦ ದಿನಗಳ ಕಾಲ ಮೌನ ವ್ರತ, ೩ ದಿನಗಳ ಕಾಲ ಮಾತು, ಮುಂತಾದ ಕ್ರಿಯೆಯಲ್ಲಿ ರೂಮೀ ತೊಡಗಿಕೊಳ್ಳುತ್ತಾನೆ.

ಅನುಭಾವದ ಪ್ರಖರ ಪ್ರಕಾಶ ಬೀರುತ್ತಿರುವ ಜಲಾಲುದ್ದೀನ್ ರೂಮೀ ತಮ್ಮ ವಿಚಾರಗಳಿಂದ ದೂರ ಸರಿಯಲು ಶಂಷುದ್ದೀನನೇ ಕಾರಣವೆಂದು ಅರಿತ ರೂಮೀಯ ಶಿಷ್ಯಂದಿರು ಶಂಷುದ್ದೀನ್‌ನನ್ನು ಕೊಲೆಮಾಡುತ್ತಾರೆ. ತನ್ನ ಬಾಳಿಗೆ ಬೆಳಕಾಗಿದ್ದ, ಮಾರ್ಗದರ್ಶನವಾಗಿದ್ದ, ಗುರು ಶಂಷ್ಸನನ್ನು ಕಳೆದುಕೊಂಡು ಸಮುದ್ರದ ಮೀನು ದಡದ ಹೊರಕ್ಕೆ ಬಂದಂತೆ ಭಾಸವಾಯಿತು. ತನ್ನ ಶಿಷ್ಯ ಬಳಗದಿಂದಲೇ ಗುರುವಿನ ಪ್ರಾಣಕ್ಕೆ ಸಂಚಕಾರವಾಯಿತೆಂದು ರೂಮೀ ತನ್ನ ಸಂಕಟ, ದುಃಖ ದುಮ್ಮಾನ ಯಾರ ಬಳಿ ತೋಡಿಕೊಳ್ಳಬೇಕೆಂದು ದಿಕ್ಕು ತೋಚದೆ ಕಂಗಾಲಾಗಿ ಅದಕ್ಕೊಂದು ಮಾರ್ಗ ಕಂಡುಹಿಡಿದ. ತನ್ನ ತೋಟದಲ್ಲೊಂದು ಕಂಬ ನೆಟ್ಟು ಆ ಕಂಬದ ಸುತ್ತಲೂ ರಾಶಿಯ ಖಣಕ್ಕೆ ಹಂತಿ ಕಟ್ಟಿದ ಎತ್ತಿನಂತೆ ತಿರುಗುತ್ತಾ, ತಿರುಗುತ್ತಾ ಶಂಷುದ್ದೀನ್‌ನ ಗುಣಗಾನ ಮಾಡುತ್ತ ಉನ್ಮಾದದಲ್ಲಿ ತನ್ನ ದೈವದೊಂದಿಗೆ ಬೆರೆಯಲು ತಿರುಗುಣಕಿ ನೃತ್ಯದಲ್ಲಿ ತಲ್ಲೀನನಾದ. ಆ ನೃತ್ಯಕ್ಕೆ ತಿರುಗುಣಕಿ ನೃತ್ಯ, ದರ್ವೇಶಿಗಳ ತಿರುಗುಣಕಿ ನೃತ್ಯ ಎಂದು ಕರೆಯುವರು.

ನಮ್ಮ ಶಿಶುನಾಳ ಶರೀಫರು ತಂಬೂರಿಯ ತಂತಿ ಮೀಟುತ್ತಾ ತತ್ವಪದಗಳನ್ನು ಹಾಡುತ್ತ, ಹಾಡುತ್ತ ಹಾಡಿನಲ್ಲಿಯೇ ತಲ್ಲೀನರಾದಂತೆ ವರ್ಲಿಂಗ್ ಡ್ಯಾನ್ಸ್ (ದರ್ವೇಶಿ ನೃತ್ಯ)ನಲ್ಲಿಯೇ ತನ್ಮಯತೆಯಿಂದ ದಿನಾಂಕ ೧೭–೧೨–೧೨೭೩ರಂದು ಭೌತಿಕವಾಗಿ ನಮ್ಮಿಂದ ಅಷ್ಟೇ ಅಲ್ಲ, ಈರ್ವರು ಪತ್ನಿಯರು, ನಾಲ್ಕು ಜನ ಮಕ್ಕಳು, ಸಹಸ್ರಾರು ಶಿಷ್ಯಂದಿರು, ಕೋಟ್ಯಂತರ ಜನ ಸಾಹಿತ್ಯಾಭಿಮಾನಿಗಳಿಂದ ದೂರವಾದರೂ ರೂಮೀಯ ಸಾಹಿತ್ಯ, ವಿಚಾರಗಳು ಶತಶತಮಾನ ಗಳಿಂದಲೂ ಜನಮಾನಸದಲ್ಲಿ ಅಚ್ಚೊತ್ತಿವೆ. ಆ ಬೆಳಕಿನ ಕಿರಣ ಸೂಸುತ್ತಲೇ ಇರುತ್ತದೆ.

ಟರ್ಕಿಯ ಕೋನ್ಯಾದಲ್ಲಿ ರೂಮೀಯ ಸಮಾಧಿ ವಸ್ತು ಸಂಗ್ರಹಾಲಯಗಳಿವೆ. ಈ ಲೋಕದೊಳಗೆ ಇನ್ನೊಂದು ಲೋಕವಿದೆ ಎಂದು ತಿಳಿದು ಆಧ್ಯಾತ್ಮಿಕ ಪರಮಾನಂದ ಹೊಂದಲು ಸಂಗೀತ–ನೃತ್ಯದ ಮೂಲಕ ದಾರಿ ತೋರಿಸಿದಾತ ರೂಮೀ. ಸೂಫಿ ಕವಿ ರೂಮೀಯ ಈ ಮಾತುಗಳು ಕೇವಲ ಪ್ರೇಮಿಯ ಹೃದಯದ ವ್ಯಾಖ್ಯಾನವಲ್ಲ. ಬದಲಿಗೆ ಸೃಷ್ಟಿಕರ್ತನನ್ನೇ ಪ್ರೇಮಿಸುವ ಸೂಫಿಯ ಹೃದಯದ ಭಾಷೆಯಾಗಿದೆ.

ಜಾಗತಿಕವಾಗಿ ಇಂದು ಕೋಮುವಾದ, ಜಾತಿವಾದ, ಸ್ವಜನಪಕ್ಷವಾದ, ಭಯೋತ್ಪಾದನೆ ಎಗ್ಗಿಲ್ಲದಂತೆ ನಡೆಯುತ್ತಿವೆ. ಇದಕ್ಕೆ ಕಡಿವಾಣ ಹಾಕಲು ಜಾತಿವಾದಕ್ಕಿಂತ ಸೂಫಿವಾದವೇ ಮದ್ದಲ್ಲವೆ ?

**ಎ. ಎಸ್. ಮಕಾನದಾರ**
ನಿರಂತರ ಪ್ರಕಾಶನ, ಗಾಂಧೀ ನಗರ, ೫ನೇ ಅಡ್ಡರಸ್ತೆ
ಲೋಯಲಾ ಕಾನ್ವೆಂಟ್ ಹಿಂಭಾಗ, ಬೆಟಗೇರಿ
ಗದಗ – ೫೮೨ ೧೦೨

# ಪಿಂಕ್: ಒಂದು ದಿಟ್ಟ ಚಲನಚಿತ್ರ

ಮ. ಶ್ರೀ. ಮುರಳಿ ಕೃಷ್ಣ

ಆಯಾಯ ಕಾಲಘಟ್ಟದ ಸಾಮಾಜಿಕ, ಆರ್ಥಿಕ, ರಾಜಕೀಯ, ಸಾಂಸ್ಕೃತಿಕ ಇತ್ಯಾದಿ ಸ್ಥಿತಿಗತಿಗಳು ಪ್ರತ್ಯಕ್ಷವಾಗಿಯೋ ಅಥವಾ ಪರೋಕ್ಷವಾಗಿಯೋ ಕಲಾಪ್ರಕಾರಗಳಲ್ಲಿ ಅಭಿವ್ಯಕ್ತಿಗೊಳ್ಳುತ್ತಿರುತ್ತವೆ. ಇದು ಶಕ್ತಿಶಾಲಿ ಮಾಧ್ಯಮವಾದ ಚಲನಚಿತ್ರಕ್ಕೂ ಅನ್ವಯಿಸುತ್ತದೆ ಎಂದು ಪ್ರತ್ಯೇಕವಾಗಿ ಸೂಚಿಸಬೇಕಿಲ್ಲ. ಹಿಂಸೆ, ಸೆಕ್ಸ್ ಇತ್ಯಾದಿಗಳನ್ನು ಅತಿರೇಕವಾಗಿ, ಉದ್ರೇಕಕಾರಿ ರೀತಿಯಲ್ಲಿ ಬಿಂಬಿಸುವ ಮಸಾಲ ಚಲನಚಿತ್ರ ತಯಾರಕರು ತಾವು ಕೂಡ ವಸ್ತುಸ್ಥಿತಿಯನ್ನು ಬಿಂಬಿಸುತ್ತಿದ್ದೇವೆ ಎಂದು ಸಮರ್ಥಿಸಿಕೊಳ್ಳುತ್ತಾರೆ. ಆದರೆ ವಸ್ತುಸ್ಥಿತಿಯ ವಿವಿಧ ಆಯಾಮಗಳು ಕಲಾತ್ಮಕವಾಗಿ ಹೇಗೆ ವ್ಯಕ್ತವಾಗುತ್ತವೆ ಎಂಬುದು ಗಮನೀಯ ಅಂಶ.

ಭಾರತದ ಚಲನಚಿತ್ರ ರಂಗದಲ್ಲಿ ಅನೇಕ ಮಹಿಳಾ ಪ್ರಧಾನ ಚಲನಚಿತ್ರಗಳು ತೆರೆಕಂಡಿವೆ. ಅವುಗಳಲ್ಲಿ ಒಂದು ಚೌಕಟ್ಟಿನ ಒಳಗೆ, ಒಂದು ರೀತಿಯಲ್ಲಿ ಬಂಧನಕ್ಕೊಳಗಾದ ಚಿತ್ರಗಳು; ಚೌಕಟ್ಟಿನಿಂದಾಚೆ ಕಥಾವಸ್ತುಗಳುಳ್ಳವು ಸೇರಿವೆ. ಎರಡನೆ ವಿಭಾಗಕ್ಕೆ ಸೇರಿದ ಚಲನಚಿತ್ರಗಳು ಕಡಿಮೆ ಎಂದೇ ಹೇಳಬೇಕು.

ಇತ್ತೀಚೆಗೆ ತೆರೆ ಕಂಡ 'ಪಿಂಕ್' ಹಿಂದಿ ಚಲನಚಿತ್ರವನ್ನು ಮೇಲೆ ಪ್ರಸ್ತಾಪಿಸಿರುವ ಎರಡನೇ ವಿಭಾಗಕ್ಕೆ ಸೇರಿಸಬಹುದು. ಈ ಚಲನಚಿತ್ರದ ಶೀರ್ಷಿಕೆಯೇ ಗಮನ ಸೆಳೆಯುವಂತಿದೆ. 'ಪಿಂಕ್' ಎಂದರೆ ನಸುಗೆಂಪು, ಪಾಟಲವರ್ಣ ಅಥವಾ ಗುಲಾಬಿಕೆಂಪು ಎಂದು ಗುರುತಿಸಬಹುದು. ಸಾಮಾನ್ಯವಾಗಿ ಪಿಂಕ್ ವರ್ಣವನ್ನು ಸ್ತ್ರೀತ್ವದ ಜೊತೆ ಸಮೀಕರಿಸಲಾಗುತ್ತದೆ. ಕೋಮಲ ಭಾವನೆಗಳು, ರೊಮಾನ್ಸ್ ಮತ್ತು ಸದೃಢವಾಗಿರುವ ಆರೋಗ್ಯದ ಸ್ಥಿತಿಯನ್ನು ಇದು ಪ್ರತಿನಿಧಿಸುತ್ತದೆ. ಇರಲಿ...

'ಪಿಂಕ್'ನ ಕಥಾಹಂದರ ಹೀಗಿದೆ: ಮಿನಲ್ ಅರೋರ (ಅಭಿನೇತ್ರಿ ತಾಪ್ಸಿ ಪನ್ನು) ಫಲಕ್ ಅಲಿ (ಕೀರ್ತಿ ಕುಲ್ಹರಿ) ಮತ್ತು ಆಂದ್ರಿಯ (ಆಂದ್ರಿಯ ತರಿಯಂಗ್) ಎಂಬ ಮೂವರು ಯುವತಿಯರು ದಕ್ಷಿಣ ದೆಹಲಿಯ ಉನ್ನತ ವರ್ಗದ ಬಡಾವಣೆಯ ಫ್ಲ್ಯಾಟ್‌ವೊಂದರಲ್ಲಿ ವಾಸ್ತವ್ಯ ಹೂಡಿರುತ್ತಾರೆ. ಅವರು ತಮ್ಮ ಆಯ್ಕೆಯ ಕ್ಷೇತ್ರದಲ್ಲಿ ಕೆಲಸ ಮಾಡುತ್ತಿರುತ್ತಾರೆ. ಒಂದು ರಾತ್ರಿ ರಾಕ್ ಸಂಗೀತ ಕಾರ್ಯಕ್ರಮದ ತರುವಾಯ ರಾಜ್‌ವೀರ್ (ಅಂಗದ್ ಬೇಡಿ) ಮತ್ತು ಆತನ ಇಬ್ಬರು ಮಿತ್ರರ ಆಹ್ವಾನದ ಮೇರೆಗೆ ಫರಿದಾಬಾದ್ ಜಿಲ್ಲೆಯ ಸೂರಜ್‌ಕುಂಡ್‌ನ ರೆಸಾರ್ಟ್‌ಗೆ ಹೋಗುತ್ತಾರೆ. ದಕ್ಷಿಣ ದೆಹಲಿಯ ಒಬ್ಬ ಪ್ರಭಾವಿ ರಾಜಕಾರಣಿಯ ಅಕ್ಕನ ಮಗನಾದ ರಾಜ್‌ವೀರ್‌ಗೆ ಮಿನಲ್ ಒಬ್ಬ ಸ್ನೇಹಿತನ ಮೂಲಕ ಪರಿಚಯವಾಗಿರುತ್ತಾಳೆ. ರೆಸಾರ್ಟ್‌ನಲ್ಲಿ ರಾಜ್‌ವೀರ್ ಮತ್ತು ಆತನ ಸ್ನೇಹಿತರು ಪಾನಮತ್ತರಾಗುತ್ತಾರೆ. ಮಿನಲ್ ಮತ್ತು ಆಕೆಯ ಸ್ನೇಹಿತೆಯರೂ ಗುಂಡನ್ನು ಸೇವಿಸಿರುತ್ತಾರೆ. ದುರುದ್ದೇಶದಿಂದ ಈ ಅವಕಾಶವನ್ನು ಬಳಸಿಕೊಳ್ಳಲು ಮೂವರು ಸ್ನೇಹಿತರು ಮುಂದಾಗುತ್ತಾರೆ. ಉಪಾಯದಿಂದ ಮೂವರು ಸ್ನೇಹಿತೆಯರನ್ನು ಬೇರ್ಪಡಿಸುತ್ತಾರೆ. ನಂತರ ರಾಜ್‌ವೀರ್ ಮಿನಲ್ ಮೇಲೆ ಬಲಾತ್ಕಾರ ಮಾಡಲು ಪ್ರಯತ್ನಿಸುತ್ತಾನೆ. ಇದಕ್ಕೆ ಮಿನಲ್‌ಳ ಸಮ್ಮತಿ ಇರುವುದಿಲ್ಲ. ಆಕೆ ಸ್ಪಷ್ಟವಾಗಿ "ಇಲ್ಲ" ಎನ್ನುತ್ತಾಳೆ. ಆದರೂ ರಾಜ್‌ವೀರ್ ಕೇಳುವ ಪರಿಸ್ಥಿತಿಯಲ್ಲಿ ಇರುವುದಿಲ್ಲ. ಮಿನಲ್ ಬಾಟಲ್‌ವೊಂದನ್ನು ಎತ್ತಿಕೊಂಡು, ರಾಜ್‌ವೀರ್‌ನ ಕಣ್ಣಿಗೆ ಹೊಡೆಯುತ್ತಾಳೆ. ಪೆಟ್ಟಾಗಿ, ರಕ್ತ ಹರಿಯುತ್ತದೆ.

ಇದಕ್ಕೆ ಪ್ರತೀಕಾರವಾಗಿ ರಾಜ್‌ವೀರ್ ಮತ್ತು ಆತನ ಸ್ನೇಹಿತರು ಮೂವರು ಯುವತಿಯರನ್ನು ಫ್ಲ್ಯಾಟ್‌ನಿಂದ ಹೊರಹಾಕುವಂತೆ ಅದರ ವೃದ್ಧ ಮಾಲೀಕನಿಗೆ ಧಮಕಿ ಹಾಕುತ್ತಾರೆ. ಯುವತಿಯರ ಚಾರಿತ್ರ್ಯ ಸರಿಯಿಲ್ಲವೆಂದು ತಿಳಿಸುತ್ತಾರೆ. ಫಲಕ್ ಒಬ್ಬ 'ಕಾಲ್ ಗರ್ಲ್' ಎಂಬಂತೆ ನೆಟ್‌ನಲ್ಲಿ ಬಿಂಬಿಸುವಂತಹ ಚಿತ್ರ ಹಾಕಿ ಅದನ್ನು ಆಕೆ ಕೆಲಸ ಮಾಡುವ ಕಂಪನಿಯ ಬಾಸ್‌ಗೆ ರವಾನಿಸುತ್ತಾರೆ. ಇದರಿಂದ ಆಕೆ ಕೆಲಸಕ್ಕೆ ರಾಜೀನಾಮೆ ನೀಡಬೇಕಾಗುತ್ತದೆ. ಮಿನಲ್ ಅನ್ನು ಅಪಹರಿಸಿ, ಧಾವಿಸುವ ಕಾರಿನಲ್ಲೇ ಅತ್ಯಾಚಾರ ಮಾಡಲು ಪ್ರಯತ್ನಿಸುತ್ತಾರೆ ಅಥವಾ ಬೆದರಿಕೆಯನ್ನು ಒಡ್ಡುತ್ತಾರೆ. ಕೊನೆಗೆ ಧೈರ್ಯಮಾಡಿ, ಮಿನಲ್ ಪೊಲೀಸ್ ಠಾಣೆಗೆ ಧಾವಿಸಿ, ಎಫ್‌ಐಆರ್ ದಾಖಲಿಸಲು ಮುಂದಾಗುತ್ತಾಳೆ. ಅಲ್ಲಿನ ಮಹಿಳಾ ಅಧಿಕಾರಿಗೆ ರಾಜ್‌ವೀರ್‌ಗಿರುವ ಪ್ರಬಲ ರಾಜಕೀಯ ನಂಟಸ್ತನದ ಬಗ್ಗೆ ತಿಳಿದಿರುತ್ತದೆ. ಆಕೆ ದೂರನ್ನು ದಾಖಲಿಸುವುದಿಲ್ಲ. ಇದನ್ನರಿತ ರಾಜ್‌ವೀರ್ ಯುವತಿಯರ ಮೇಲೆ ಒಂದು ಖೋಟಾ ಎಫ್‌ಐಆರ್ ದಾಖಲಿಸುವಂತೆ ಪ್ರಭಾವ ಬೀರುತ್ತಾನೆ. ಅದರಲ್ಲಿ ಮೂವರು ಗೆಳತಿಯರನ್ನು ವೈಶ್ಯೆಯರೆಂದು



ಬಿಂಬಿಸಲಾಗುತ್ತದೆ. ಹತ್ಯೆ ಮಾಡುವ ಉದ್ದೇಶ ಮತ್ತು ಗಿರಾಕಿಯನ್ನು ಸೆಳೆಯುವ ಪ್ರಯತ್ನಕ್ಕಾಗಿ, ಆಪಾದನೆ ನ್ಯಾಯಾಲಯದಲ್ಲಿ ಸಾಬೀತಾದರೆ, ಮಿನಲ್‌ಗೆ ಹತ್ತು ವರ್ಷದ ಜೈಲು ಶಿಕ್ಷೆಯಾಗುವ ಸಂಭವವಿರುತ್ತದೆ. ಇತರ ಇಬ್ಬರು ಸ್ನೇಹಿತೆಯರನ್ನು ಸಹ–ಅಪರಾಧಿಗಳೆಂದು ಪೊಲೀಸ್ ದಾಖಲೆಗಳಲ್ಲಿ ನಿರೂಪಿಸಲಾಗುತ್ತದೆ.

ಈ ಗೆಳತಿಯರ ನೆರೆಯ ಫ್ಲ್ಯಾಟ್‌ನಲ್ಲಿ ದೀಪಕ್ ಸೆಹಗಲ್ (ಅಮಿತಾಬ್ ಬಚ್ಚನ್) ಎಂಬ ನಿವೃತ್ತ ವಕೀಲ ವಾಸವಾಗಿರುತ್ತಾನೆ. ಆತನಿಗೆ ಈ ಯುವತಿಯರು ಎದುರಿಸುತ್ತಿರುವ ಭೀಕರ ಸನ್ನಿವೇಶಗಳ ಸುಳಿವು ಸಿಗುತ್ತದೆ. ಆತ ಬೈಪೊಲಾರ್ ಡಿಸ್‌ಆರ್ಡರ್ ಎಂಬ ಮಾನಸಿಕ ಸಮಸ್ಯೆಯಿಂದ ಬಳಲುತ್ತಿರುತ್ತಾನೆ. ಇದರಿಂದ ಅವನ ಮೂಡ್‌ನಲ್ಲಿ ಏರಿಳಿತಗಳಿರುತ್ತದೆ. ಅಸ್ವಸ್ಥತೆಯಿಂದ ಬಾಧಿತಳಾಗಿರುವ ಆತನ ಪತ್ನಿಯ ಜೊತೆ ಯುವತಿಯರ ಪಾಡನ್ನು ತಿಳಿಸಿ, ಮಿನಲ್ ಆರೋರಳ ರಕ್ಷಣಾ ವಕೀಲನಾಗಿ ನ್ಯಾಯಾಲಯದಲ್ಲಿ ವಾದ ಮಾಡಲು ನಿರ್ಧರಿಸುತ್ತಾನೆ. ಆತ ಯಾವ ರೀತಿ ವಾದ ಮಾಡಿ, ಅನ್ಯಾಯಕ್ಕೆ ತುತ್ತಾಗಿರುವ ಯುವತಿಯರಿಗೆ ನ್ಯಾಯವನ್ನು ದೊರಕಿಸಿಕೊಡುತ್ತಾನೆ ಎಂಬುದರ ಸುತ್ತ ಕತೆ ಹೆಣೆಯಲ್ಪಟ್ಟಿದೆ.

ಈ ಚಲನಚಿತ್ರದ ನಿರ್ದೇಶಕರಾದ ಅನಿರುದ್ ರಾಯ್ ಚೌಧರಿ ಮೂಲತಃ ಬಂಗಾಳಿ ಸಿನಿಮಾದಲ್ಲಿ ಕೆಲಸ ಮಾಡಿ, ತಮ್ಮ ಛಾಪನ್ನು ಮೂಡಿಸಿದ್ದಾರೆ. ಅವರ ನಿರ್ದೇಶನದ ಎರಡು ಬಂಗಾಳಿ ಚಲನಚಿತ್ರಗಳು – "ಅನುರಣನ್" (೨೦೦೬) ಮತ್ತು "ಅಂತಹೀನ್" (೨೦೦೯) ರಾಷ್ಟ್ರಮಟ್ಟದ ಪ್ರಶಸ್ತಿಗಳನ್ನು ಗಳಿಸಿವೆ. "ಪೀಕು" ಹಿಂದಿ ಚಲನಚಿತ್ರವನ್ನು ನಿರ್ದೇಶಿಸಿದ ಶೂಜಿತ್ ಸರ್ಕಾರ್ ಈ ಚಲನಚಿತ್ರದ ನಿರ್ಮಾಪಕರು. ಚಿತ್ರಕಥೆ ಹಾಗೂ ಸಂಭಾಷಣೆಯನ್ನು ರಿತೇಶ್ ಶಾ ಬರೆದಿದ್ದಾರೆ. ಅಭಿಕ್ ಮುಖ್ಯೋಪಾಧ್ಯಾಯ ಕ್ಯಾಮರಾದ ಹಿಂದೆ ಕೆಲಸ ಮಾಡಿದ್ದಾರೆ.

ಪ್ರಾರಂಭದ ಕ್ರೆಡಿಟ್ ಸರಣಿಯಲ್ಲಿ ಒಂದು ಯುವಜನರ ಗುಂಪು ಮೋಜಿನ ಸಮಯವನ್ನು ಆನಂದಿಸುತ್ತಿರುವ ಸಂಭಾಷಣೆ ಕೇಳಿಬರುತ್ತದೆ. ಕ್ರೆಡಿಟ್ ಶೀರ್ಷಿಕೆಯಲ್ಲಿ ಮೊದಲು ತಾಪ್ಸಿ ಪನ್ನು, ಕೀರ್ತಿ ಕುಲ್ಹರಿ ಮತ್ತು ಆಂಡ್ರಿಯರ ಹೆಸರುಗಳು ಕಾಣಿಸುತ್ತವೆ. ಈ ಅಭಿನೇತ್ರಿಯರು ಅಂತಹ ಹೆಸರು ಮಾಡಿದವರಲ್ಲ. ನಂತರ ಬರುವುದು ಅಮಿತಾಬ್ ಬಚ್ಚನ್‌ರ ಹೆಸರು. ಒಂದರ್ಥದಲ್ಲಿ ಇದು ಚಿತ್ರ ತಯಾರಿಸಿದ ಮನಸ್ಸುಗಳ ದೃಷ್ಟಿಕೋನವನ್ನು ಅನಾವರಣಗೊಳಿಸುತ್ತದೆ (ಈ ಚಲನಚಿತ್ರಕ್ಕೆ ಸಂಬಂಧಿಸಿದಂತೆ...). ಪ್ರಥಮ ದೃಶ್ಯದಲ್ಲಿ ಕಣ್ಣಿನಲ್ಲಿ ತೀವ್ರ ಗಾಯವಾಗಿರುವ ರಾಜ್‌ವೀರ್ ಮತ್ತು ಆತನ ಸ್ನೇಹಿತರು ಮತ್ತು ಯುವತಿಯರು ಗಾಬರಿಯಿಂದ ಪಯಣ ಮಾಡುತ್ತಿರುವುದು, ಇವರ ನಡುವೆ ಜರುಗಬಹುದಾದ ಎಲ್ಲ ಬಗೆಯ ತಾಕಲಾಟಗಳಿಗೆ ಮುನ್ನುಡಿಯಂತಿದೆ.

ನಮ್ಮದು ಪಿತೃಪ್ರಧಾನ ಸಮಾಜ. ನಮ್ಮಲ್ಲಿ ಗಂಡಿನ ಸ್ವಾತಂತ್ರ್ಯದ ವ್ಯಾಪ್ತಿ ದೊಡ್ಡದು. ಇಲ್ಲಿ ಸ್ವಾತಂತ್ರ್ಯ ಎಂಬ ಪದವನ್ನು ಅದರ ವಿಶಾಲಾರ್ಥದಲ್ಲಿ ಬಳಸಲಾಗಿದೆ. ಅದೇ ಹೆಣ್ಣಿಗೆ ಅನೇಕ ತೆರನಾದ ಕಟ್ಟುಪಾಡುಗಳಿವೆ. ತನ್ನ ಜೀವಮಾನದಲ್ಲಿ ಹೆಣ್ಣೊಬ್ಬಳು ಗೊಂಬೆಯಾಟದ ಗೊಂಬೆಯಂತೆ ಇರುತ್ತಾಳೆ. ಈ ಗೊಂಬೆಯನ್ನು ಅನೇಕ ಸೂತ್ರದಾರರು ಆಟವಾಡಿಸುತ್ತಿರುತ್ತಾರೆ. ನಮ್ಮ ಸಮಾಜ ಎಷ್ಟೇ ಪ್ರಗತಿಯನ್ನು ಸಾಧಿಸಿದ್ದರೂ ಹೆಣ್ಣನ್ನು ನೋಡುವ ದೃಷ್ಟಿಕೋನ ಮಾತ್ರ ಅಷ್ಟಾಗಿ ಬದಲಾಗಿಲ್ಲ. ಗಂಡು ಏನೇ ಮಾಡಿದರೂ ಸಹಿಸಿಕೊಳ್ಳುವ ಸಮಾಜ, ಹೆಣ್ಣು ಸ್ವಲ್ಪ ವಿಭಿನ್ನವಾಗಿ ಜೀವಿಸಿದರೆ ಆಕೆಯ ಚಾರಿತ್ರ್ಯವಧೆ ಶುರುವಾಗುತ್ತದೆ. ಮೆಟ್ರೊಪಾಲಿಟನ್ ನಗರಗಳಲ್ಲೂ ಈ ತರಹದ ವರ್ತನೆ ಢಾಳಾಗಿ ಕಂಡುಬರುತ್ತದೆ. ಒಂಟಿಯಾಗಿ ಜೀವಿಸುವ ಹೆಣ್ಣು ಅನೇಕ ಅಪಾರ್ಥಗಳಿಗೆ ಈಡಾಗುತ್ತಾಳೆ; ಅನೇಕ ನಾಲಿಗೆಗಳಿಗೆ ಆಹಾರವಾಗುತ್ತಾಳೆ. ಇದು ಕಟುವಾಸ್ತವದ ಸಂಗತಿ. ಒಬ್ಬ ಹೆಣ್ಣು ಸಾರ್ವಜನಿಕವಾಗಿ ಧೂಮಪಾನ ಮಾಡಿ, ಗುಂಡನ್ನು ಹಾಕಿ, ತನಗೆ ಇಷ್ಟವಾದ ದಿರಸುಗಳನ್ನು ಧರಿಸಿ ತನ್ನ ಸ್ನೇಹಿತರೊಡನೆ ಆತ್ಮೀಯವಾಗಿ ಒಡನಾಡಿದರೆ, ಆ ಹೆಣ್ಣು ಸಲೀಸಾಗಿ ದೊರಕುವವಳೆಂದು ಮೌಲ್ಯಮಾಪನ ಮಾಡಲಾಗುತ್ತದೆ. ಆದರೆ ಗಂಡಿಗೆ ಸಂಬಂಧಿಸಿದಂತೆ ಹೇಳುವುದಾದರೆ, ಈ ಕೃತ್ಯಗಳು ಆತನ ಪುರುಷತ್ವವನ್ನು ಸಂಕೇತಿಸುತ್ತವೆ. ಈ ಚಲನಚಿತ್ರದ ಒಂದು ದೃಶ್ಯದಲ್ಲಿ ಸುಶಿಕ್ಷಿತ (?) ರಾಜ್‌ವೀರ್, ಮಿನಲ್ ಕುರಿತಂತೆ "ಇಂತಹ ಹೆಣ್ಣುಗಳಿಗೆ ಹೀಗೇ ಆಗುತ್ತದೆ..." ಎಂಬರ್ಥ ಬರುವ ಮಾತುಗಳನ್ನು ಆಡುತ್ತಾನೆ. ಇಂತಹ ಕೆಲವು ಗಹನ ವಿಚಾರಗಳನ್ನು ಸಮರ್ಥವಾಗಿ, ದಿಟ್ಟವಾಗಿ ಈ ಚಲನಚಿತ್ರದಲ್ಲಿ ಬಿಂಬಿಸಲಾಗಿದೆ.

ಆದರೆ ಇತ್ತೀಚಿನ ವರ್ಷಗಳಲ್ಲಿ ಮಹಿಳೆಯರ ಮೇಲೆ ಆಗುತ್ತಿರುವ ಅತ್ಯಾಚಾರ ಇತ್ಯಾದಿ ವಿಷಯಗಳಿಗೆ ಸಂಬಂಧಿಸಿದಂತೆ ನಗರ ಪ್ರದೇಶಗಳಲ್ಲಿ ಗಟ್ಟಿ ಪ್ರತಿರೋಧದ ದನಿಗಳು ಕೇಳಿಬರುತ್ತಿವೆ. ದೀಪಕ್ ಸೆಹಗಲ್‌ನ ಪಾತ್ರ ಇಂತಹ ದನಿಗಳಿಗೆ ಪುಷ್ಟಿ ನೀಡುವಂತಿದೆ. ಈ ಚಲನಚಿತ್ರದಲ್ಲಿ ಮಾರ್ಮಿಕವಾದ ಸಂಭಾಷಣೆಗಳಿವೆ.

ಕಾವ್ಯಲೋಕ



## ಲೋಕ

ಬೇಯಿಸಿಕೊಂಡ ಅನ್ನಕ್ಕಿಂತಲೂ
ನನ್ನ ಹಸಿವು ಬೆಳೆಯುತಿದೆ ಹಿರಿದಾಗಿ

ಹೊಲಿದುಕೊಂಡ ಬಟ್ಟೆಗಿಂತಲೂ
ನನ್ನ ಮಾನ ಬೆಳೆಯುತಿದೆ ಹಿರಿದಾಗಿ

ನೆಲ–ಮುಗಿಲ ನೀರಿಗಿಂತಲೂ
ನನ್ನ ದಾಹ ಬೆಳೆಯುತಿದೆ ಹಿರಿದಾಗಿ

ಒಲಿಸಿಕೊಂಡ ಪ್ರೀತಿಗಿಂತಲೂ
ನನ್ನ ಪ್ರಾಣ ಮಿಡಿಯುತಿದೆ ಹಿರಿದಾಗಿ

ನನ್ನಂಥವನ ಹಸಿವು–ದಾಹಗಳ
ಮಾನ–ಪ್ರಾಣಗಳ ಹಿರಿದಾಗಿಸಿದ ಲೋಕ
ಮಾನಕೆ ತಕ್ಕ ಬಟ್ಟೆ
ದಾಹಕೆ ತಕ್ಕ ನೀರು
ಪ್ರಾಣಕೆ ತಕ್ಕ ಪ್ರೀತಿ
ನೀಡಲಾರದ ಲೋಕ

ನನ್ನಂಥವರನೇ ನೋಡಿ
ನಗುತಿರುವ ಹಾಗಿದೆ,
ಮತ್ತೆ ಮತ್ತೆ ನಗುತಿದೆ.

**ಗಣೇಶ ಹೊಸ್ಮನೆ**
ಜಾನ್ಮನೆ – ೫೮೧ ೩೦೫
ಶಿರಸಿ, ಉತ್ತರ ಕನ್ನಡ ಜಿಲ್ಲೆ





## ಅನಿತಾ ಕೌಲ್ ನಿಧನ

ಮಾತೃ ಹೃದಯದ, ದಕ್ಷತೆ, ಸರಳತೆ ಮತ್ತು ಪ್ರಾಮಾಣಿಕತೆಯನ್ನು ಮೈಗೂಡಿಸಿಕೊಂಡು ಜನಸಾಮಾನ್ಯರ ಒಳಿತಿಗೆ ಬದ್ಧತೆಯಿಂದ ೩೫ ವರ್ಷಗಳ ಕಾಲ ಸೇವೆ ಸಲ್ಲಿಸಿದ ಐ.ಎ.ಎಸ್. ಅಧಿಕಾರಿ ಅನಿತಾ ಕೌಲ್ ಇತ್ತೀಚೆಗೆ ನಿಧನರಾಗಿದ್ದಾರೆ. ಮಾನವೀಯ ಮೌಲ್ಯಗಳು, ಸಮಾನತೆಯ ಆಶಯ ಹಾಗೂ ಪ್ರಗತಿಪರ ಚಿಂತನೆಗಳಿಗೆ ಬದ್ಧರಾಗಿದ್ದ ಅನಿತಾ ಅವರು ಸರ್ಕಾರಿ ಅಧಿಕಾರಿಗಳಿಗೆ ಮಾದರಿಯಾಗಿದ್ದರು.

ದಿವಂಗತರಿಗೆ 'ನವಕರ್ನಾಟಕ ಪ್ರಕಾಶನ' ಮತ್ತು 'ಹೊಸತು' ಬಳಗದ ನಮನಗಳು.

ಹಾಗೆಯೇ ಮೌನವೂ ಕೂಡ ಗಾಢ ಪರಿಣಾಮವನ್ನು ಬೀರುತ್ತದೆ. ಅದು ಕೂಡ ಒಂದು ಪಾತ್ರವೇನೋ ಎಂದು ಭಾಸವಾಗುತ್ತದೆ !

ಮೇಘಾಲಯದ ಆಂದ್ರಿಯ ರಾಜ್‌ವೀರ್ ಪರ ವಕೀಲ ಪ್ರಶಾಂತ್ ಮೆಹ್ರಾನ ಪ್ರಶ್ನೆಯೊಂದಕ್ಕೆ ಉತ್ತರಿಸುತ್ತ, "ನಾನು ಈಶಾನ್ಯ ಪ್ರದೇಶದ ಹುಡುಗಿ. ನಾನು ಒಬ್ಬ ಸರಾಸರಿ ಭಾರತೀಯ ಹುಡುಗಿಗಿಂತ ಹೆಚ್ಚಾಗಿ ಕಿರುಕುಳಕ್ಕೆ ಒಳಗಾಗಿದ್ದೇನೆ" ಎಂದು ಹೇಳುತ್ತಾಳೆ. ಇದು ಇತ್ತೀಚಿನ ವರ್ಷಗಳಲ್ಲಿ ನಮ್ಮಲ್ಲಿ ಹೆಚ್ಚುತ್ತಿರುವ ಒಂದು ಬಗೆಯ ಜನಾಂಗೀಯ ದ್ವೇಷದ ಬಗೆಗೆ ಬೆಳಕನ್ನು ಚೆಲ್ಲುತ್ತದೆ.

ಇಡೀ ಚಲನಚಿತ್ರದಲ್ಲಿ ಮೂರು ಹಾಡುಗಳಿವೆ. ಇದರಲ್ಲಿ "ಕಾರಿ ಕಾರಿ ರೈನ..." ಎಂಬ ಹಾಡು ಹೆಚ್ಚು ಕಾಡುವಂತಿದೆ. ಹಿನ್ನೆಲೆ ಸಂಗೀತ ಹಿತಮಿತವಾಗಿದೆ. ಎಲ್ಲೂ ಅಬ್ಬರ ಎಂದೆನಿಸುವುದಿಲ್ಲ. ಮಧ್ಯಂತರ ತರುವಾಯ ಕೋರ್ಟಿನ ಕಲಾಪಗಳ ದೃಶ್ಯಗಳೇ ಜಾಸ್ತಿ ಇವೆ.

ಪಾತ್ರಗಳ ಕಟ್ಟುವಿಕೆಯಲ್ಲಿ ಸ್ವಲ್ಪ ಅರೆಕೊರೆಗಳಿವೆ. ಫಲಕ್‌ಳಿಗೆ ರೂ. ೪೦,೦೦೦/– ಸಂಬಳ ನೀಡುತ್ತಿದ್ದ ಕೆಲಸ ಅನಿವಾರ್ಯ ಎಂಬುದನ್ನು ಚಲನಚಿತ್ರದಲ್ಲಿ ಸೂಚಿಸಲಾಗಿದೆ. ಆದರೆ ಆಕೆ ಯಾವ ಪರಿಯ ಪ್ರತಿಕ್ರಿಯೆಯನ್ನೂ ನೀಡದೆ ಜಾಗ ಖಾಲಿ ಮಾಡುತ್ತಾಳೆ. ತಾನಿರುವ ಸಂಕಷ್ಟದ ಪರಿಸ್ಥಿತಿಯಿಂದ ಆಕೆ ಈ ಕ್ರಮಕ್ಕೆ ಜೋತುಬಿದ್ದಳೇ ಎಂಬುದು ಪ್ರಶ್ನೆಯಾಗಿಯೇ ಉಳಿಯುತ್ತದೆ. ನ್ಯಾಯಾಲಯದಲ್ಲಿ ದೀಪಕ್ ಸೆಹಗಲ್ ಮಿನಲ್‌ಳನ್ನು ಪಾಟಿ ಸವಾಲಿಗೆ ಒಳಪಡಿಸುತ್ತಾನೆ. ಆಗ ಆಕೆಯ ಕನ್ಯತ್ವ ಯಾವಾಗ ಹೋಯಿತು ಎಂಬಿತ್ಯಾದಿ ಪ್ರಶ್ನೆಗಳನ್ನು ಕೇಳುತ್ತಾನೆ. ಅಲ್ಲಿಯವರೆಗೂ ಪೆಡಸಾಗಿ ಬಿಟ್ಟು ಬಿಟ್ಟು ಮಾತನಾಡುತ್ತಿದ್ದ ಆತ ಚಕ್ಕನೆ ಸ್ಫುಟವಾಗಿ ಕರಾರುವಾಕ್ಕಾಗಿ ಮಾತನಾಡಲು ತೊಡಗುತ್ತಾನೆ. ಈ ಪರಿವರ್ತನೆ ಅಸಹಜ ಎಂದೆನಿಸುತ್ತದೆ. ಮಿನಲ್‌ಳ ಅಪಹರಣ ಹಾಗೂ ಅತ್ಯಾಚಾರದ ಪ್ರಯತ್ನ ಈ ಕಟ್ಲೆಯ ಅಂತಿಮ ಆಗುಹೋಗುಗಳಿಗೆ ನೇರವಾಗಿ ಸಂಬಂಧಿಸಿದ್ದರೂ, ಈ ವಿಷಯ ನ್ಯಾಯಾಲಯದಲ್ಲಿ ಪ್ರಸ್ತಾಪವಾಗುವುದೇ ಇಲ್ಲ !

ಈ ಚಲನಚಿತ್ರದಲ್ಲಿ ವಿನಲ್ ಮತ್ತು ದೀಪಕ್ ಸೆಹಗಲ್‌ರದ್ದು ಸಶಕ್ತ ಪಾತ್ರಗಳು. ಮೊದಲು ಪೋಷಕ ಪಾತ್ರವಾಗಿ ಬಿಂಬಿಸಲ್ಪಡುವ ಫಲಕ್ ನಂತರ ಒಂದು ಶಕ್ತಿಶಾಲಿ ಮಹಿಳಾ ಪಾತ್ರವಾಗಿ ಹೊರಹೊಮ್ಮುತ್ತಾಳೆ. ಎರಡು ಸಂದರ್ಭಗಳಲ್ಲಿ ಆಕೆಯ ಸಹನೆ ಕಟ್ಟೆಯೊಡೆದು ತನ್ನ ತಳಮಳ, ಕೋಪಾಗ್ನಿಗಳನ್ನು ಹರಿಬಿಡುತ್ತಾಳೆ. ಹೀಗಾಗಿ, ಇತರ ಚಲನಚಿತ್ರಗಳಂತೆ, ಪಿಂಕ್ ಮಹಿಳಾ ರಕ್ಷಣೆ ಹೊತ್ತ ಪುರುಷ ಕೇಂದ್ರಿತ ಚಲನಚಿತ್ರವಾಗುವುದಿಲ್ಲ. "ಪ್ರತಿ ಮಹಿಳೆಗೂ, ಲೈಂಗಿಕ ಕಾರ್ಯಕರ್ತೆಗೂ ಕೂಡ ಸಮ್ಮತಿ ನೀಡುವ ಹಕ್ಕಿರುತ್ತದೆ. ಸೇವೆಗೆ ಬೆಲೆ ಕಟ್ಟಿದರೂ, ಸೇವೆಯನ್ನು ನೀಡುವವಳ ವೈಯಕ್ತಿಕ ಇಚ್ಛೆಯನ್ನು ತುಚ್ಛೀಕರಿಸಬಾರದು..." ಎಂಬ ಫಲಕ್‌ಳ ಮಾತುಗಳು ಪರಿಣಾಮಕಾರಿಯಾಗಿವೆ.

ಆದರೆ ಚಲನಚಿತ್ರದ ಅಂತ್ಯ ಭಾಗದಲ್ಲಿ ದೀಪಕ್ ಸೆಹಗಲ್, "ಬೇಡ (ನೊ) ಎಂಬುದು ಒಂದು ಪದವಲ್ಲ. ಅದು ನಿಖರವಾಗಿ ಒಪ್ಪಿಗೆಯಿಲ್ಲ ಎಂದು ಸೂಚಿಸುವ ಇಡೀ ವಾಕ್ಯ. ಇದಕ್ಕೆ ತರ್ಕ, ಸ್ಪಷ್ಟೀಕರಣ ಅಥವಾ ವಿವರಣೆಯ ಅಗತ್ಯವಿರುವುದಿಲ್ಲ. ಆಕೆ ಪರಿಚಿತೆಯಾಗಿರಲಿ, ಸ್ನೇಹಿತೆಯಾಗಿರಲಿ, ಲೈಂಗಿಕ ಕಾರ್ಯಕರ್ತೆಯಾಗಿರಲಿ, ಅಷ್ಟೆ ಏಕೆ ನಿಮ್ಮ ಪತ್ನಿಯೇ ಆಗಿರಲಿ, ಬೇಡ ಎಂದರೆ ಬೇಡ ಅಷ್ಟೇ..." ಎಂದು ಹೇಳುತ್ತಾನೆ. ಇದು ಈ ಚಲನಚಿತ್ರದ ಸಂಭಾಷಣೆಗಳ ಮುಕುಟಮಣಿಯಾಗಿದೆ. ಆದರೆ ಹೆಚ್ಚಿನ ವೀಕ್ಷಕರು ಫಲಕ್‌ಳ ಇದೇ ರೀತಿಯ ಸಂಭಾಷಣೆಯನ್ನು ಅಷ್ಟಾಗಿ ಪರಿಗಣನೆಗೆ ತೆಗೆದುಕೊಳ್ಳುವುದಿಲ್ಲವೇನೋ...

ಇಡೀ ಚಲನಚಿತ್ರದಲ್ಲಿ ಅಮಿತಾಬ್‌ರ ನಟನೆಯ ಛಾಪು ಎದ್ದು ಕಾಣಿಸುತ್ತದೆ. ಆದರೆ ಇಂತಹ ಮೇರುನಟನಿಗೆ ನಿರ್ದೇಶಕರು ನಟನೆ ಕುರಿತಂತೆ ಸೂಕ್ತ ನಿರ್ದೇಶನ ನೀಡಿಲ್ಲವೇನೋ ಎಂದೆನಿಸುತ್ತದೆ. ಇತರ ನಟ–ನಟಿಯರು ತಮ್ಮ ಪಾತ್ರಗಳಿಗೆ ನ್ಯಾಯ ಒದಗಿಸಿದ್ದಾರೆ. ಘಟನೆ ಎಲ್ಲೇ ಜರುಗಿರಲಿ, ಅದಕ್ಕೆ ಸಂಬಂಧಿಸಿದ ನೊಂದವರು ನ್ಯಾಯ ದೊರಕಿಸಿಕೊಳ್ಳುವ ನಿಟ್ಟಿನಲ್ಲಿ ಯಾವ ಪೊಲೀಸ್ ಠಾಣೆಯಲ್ಲಾದರೂ ಎಫ್‌ಐಆರ್‌ಅನ್ನು ದಾಖಲಿಸಬಹುದು. ಇದಕ್ಕೆ ಝಿರೋ ಎಫ್‌ಐಆರ್ ಎಂದು ಕರೆಯುತ್ತಾರೆ. ನಂತರ ಈ ಎಫ್‌ಐಆರ್‌ಅನ್ನು ಘಟನೆ ಜರುಗಿದ ಸ್ಥಳವನ್ನು ಒಳಗೊಳ್ಳುವ ಪೊಲೀಸ್ ಠಾಣೆಗೆ ವರ್ಗಾಯಿಸಬಹುದು. ಹಾಗೆಯೇ ವಾರಾಂತ್ಯದಲ್ಲಿ, ಅಂದರೆ ರಜಾ ದಿನಗಳಲ್ಲಿ, ಮಹಿಳೆಯರು ಮತ್ತು ಮಕ್ಕಳಿಗೆ ಸಂಬಂಧಿಸಿದಂತೆ, ನ್ಯಾಯಮೂರ್ತಿಗಳ ಮನೆಗಳಲ್ಲೇ ಜಾಮೀನನ್ನು ಪಡೆಯಬಹುದು ಎಂಬ ವಿಚಾರಗಳು ಈ ಚಲನಚಿತ್ರದಲ್ಲಿ ಅಡಕಗೊಂಡಿವೆ. ಇವು ವೀಕ್ಷಕರ ಕಾನೂನುಗಳ ಬಗೆಗಿನ ಅರಿವನ್ನು ಹೆಚ್ಚಿಸುತ್ತವೆ.

ಟೈಮ್ಸ್ ಆಫ್ ಇಂಡಿಯಾದ ತಮ್ಮ ಬ್ಲಾಗ್‌ನಲ್ಲಿ ಹಿರಿಯ ಬರಹಗಾರ ವೀರೇಶ್ ಮಲಿಕ್ 'ಪಿಂಕ್'ನ ಅರ್ಥವನ್ನು ತಿಳಿಸಿದ್ದಾರೆ. ಅವರ ಪ್ರಕಾರ ಅನೇಕ ದೇಶಗಳಲ್ಲಿ ಮತ್ತು ಸಂಸ್ಕೃತಿಗಳಲ್ಲಿ 'ಪಿಂಕ್' ಎಂದರೆ "ಹಿಂಸೆಯ ಮೂಲಕ ಖರೀದಿಸಲ್ಪಡುವ ಯೋನಿ (Vagina of the sort that is bought with violence) ಇರಬಹುದೇನೋ..."

ಇದು 'ಪಿಂಕ್' ಚಲನಚಿತ್ರದ ವಿಮರ್ಶೆಯಲ್ಲ. ಆದರೆ ಒಬ್ಬ ಸಾಮಾನ್ಯ ವೀಕ್ಷಕನ ಕೆಲವು ಅನಿಸಿಕೆಗಳು, ಅಷ್ಟೆ .

**ಮ. ಶ್ರೀ. ಮುರಳಿ ಕೃಷ್ಣ**
# ೩೮, ೩ನೇ ಅಡ್ಡರಸ್ತೆ , ರಾಜಾ ಗಾರ್ಡನಿಯಾ ಬಡಾವಣೆ, ತುರಹಳ್ಳಿ, ಬೆಂಗಳೂರು – ೬೧

## ಹೊಸತು – ೨೦೧೭ ಜನವರಿ ಸಂಚಿಕೆ : ಓದುಗರ ವೇದಿಕೆ

ಆತ್ಮೀಯ ಓದುಗ ಬಂಧುಗಳೇ,

ವರ್ಷವಿಡೀ ದೇಶಪ್ರೇಮ, ದೇಶದ್ರೋಹದ ಬಗೆಗಿನ ವಿವಾದ ದೊಡ್ಡದಾಗಿತ್ತು. 'ದೇಶಪ್ರೇಮ'ವನ್ನು ರಾಜಕೀಯದ ಹಿನ್ನೆಲೆಯಲ್ಲಿ, ವಿವಿಧ ರೀತಿಯಿಂದ ವ್ಯಾಖ್ಯಾನಿಸಲಾಗಿತ್ತು. 'ಕೇವಲ ಭಾರತ ಮಾತಾಕಿ ಜೈ' ಎಂದ ತಕ್ಷಣ ಅದು ದೇಶಪ್ರೇಮದ ಅಭಿವ್ಯಕ್ತಿಯೆ, ಕಾನೂನಿನ ದೃಷ್ಟಿಯಲ್ಲಿ, ದೇಶದ ಅಭಿವೃದ್ಧಿ, ಐಕ್ಯತೆ, ಸಮಗ್ರತೆ ಹಿನ್ನೆಲೆಯಲ್ಲಿ ದೇಶಪ್ರೇಮವನ್ನು ಹೇಗೆ ವ್ಯಾಖ್ಯಾನಿಸಬಹುದು. ದೇಶ ಮತ್ತು ಪ್ರೇಮವನ್ನು ಜನತೆಯ ಹಿತದೃಷ್ಟಿಯಿಂದ ಹೇಗೆ ವಿಶ್ಲೇಷಿಸಬಹುದು. ದೇಶವೆಂದರೆ ಭೌಗೋಲಿಕ ವ್ಯಾಪ್ತಿ ಮಾತ್ರವೇ ? ಅಥವಾ ಅದರೊಟ್ಟಿಗೆ ದೇಶವಾಸಿಗಳೂ ಸೇರುತ್ತಾರೆಯೇ ? ಈ ಎಲ್ಲ ಪ್ರಶ್ನೆಗಳ ಹಿನ್ನೆಲೆಯಲ್ಲಿ ಪ್ರಜ್ಞಾವಂತರಾದ ಹೊಸತು ಓದುಗರು 'ದೇಶಪ್ರೇಮ' ಕುರಿತು ೨೫೦ ಪದಗಳಿಗೆ ಮೀರದಂತೆ ಲೇಖನ ಬರೆದು ಡಿಸೆಂಬರ್ ೧ರೊಳಗೆ ಹೊಸತು ವಿಶೇಷ ಸಂಚಿಕೆಯ 'ಓದುಗರ ವೇದಿಕೆ'ಗೆ ಕಳಿಸಿಕೊಡಬೇಕಾಗಿ ವಿನಂತಿ.

*– ಸಂ.*




## ಅಮೆರಿಕಾ ಅಧ್ಯಕ್ಷೀಯ ಚುನಾವಣೆ

ಅಮೆರಿಕಾದಲ್ಲಿ ನಾಲ್ಕು ವರುಷಗಳಿಗೊಮ್ಮೆ ಅಧ್ಯಕ್ಷೀಯ ಚುನಾವಣೆ ನಡೆಯುತ್ತದೆ. ಹೆಸರಿಗೆ ನಾಲ್ಕು ವರ್ಷ, ಆದರೆ ಚುನಾವಣೆಯ ತಮಾಷೆ ಕನಿಷ್ಠ ಎರಡು ವರ್ಷಗಳ ಮೊದಲೇ ಆರಂಭವಾಗುತ್ತದೆ. ಇಡೀ ಪ್ರಪಂಚವು ಈ ಚುನಾವಣೆಯನ್ನು ತವಕದಿಂದ ವೀಕ್ಷಿಸುವ, ವಿಶ್ಲೇಷಿಸುವ ಮತ್ತು ನಿರೀಕ್ಷಿಸುವ ಅಗತ್ಯ ಸುತರಾಂ ಇಲ್ಲ. ಆದರೆ ಅದೇನೋ ಅತಿ ಮಹತ್ವದ ಸಂಗತಿ ಎಂಬಂತೆ ಭಾರತವೂ ಸೇರಿದಂತೆ ಹಲವು ದೇಶಗಳಲ್ಲಿ ವೃತ್ತಪತ್ರಿಕೆಗಳು ಮತ್ತು ನಿಯತಕಾಲಿಕೆಗಳು ನೂರಾರು ಪುಟಗಳನ್ನು ದುರ್ವ್ಯಯ ಮಾಡುತ್ತವೆ. ಇರುವ ಅಭ್ಯರ್ಥಿಗಳು ಇಬ್ಬರು, ಅವರಲ್ಲಿ ಯಾರು ಗೆದ್ದರೂ ಸಾಮಾನ್ಯವಾಗಿ ಮೂಲಭೂತ ಬದಲಾವಣೆಗಳೇನೂ ಇರುವುದಿಲ್ಲ. ಟ್ವೀಡಲ್‌ಡಂ ಮತ್ತು ಟ್ವೀಡಲ್‌ಡೀ ಇಬ್ಬರು ಒಬ್ಬರೇ, ಅವರನ್ನು ಭಿನ್ನೈಸಿ ವ್ಯಾಖ್ಯಾನಿಸುವುದು ತೀರಾ ಅಸಂಗತ. ಯಾರು ಚುನಾಯಿತರಾದರೂ ಪ್ರಪಂಚದಲ್ಲಿ ಬೇರೆ ಬೇರೆ ಜಾಗಗಳಲ್ಲಿ ಆಗಾಗ್ಗೆ ಬಾಂಬುಗಳ ಸುರಿಮಳೆ ಅನಿವಾರ್ಯ. ಈ ಬಾರಿಯ ಸ್ಪರ್ಧಿಗಳಿಬ್ಬರೂ ರಸಿಕರು, ಮಾತಿನ ಮಲ್ಲರು ಮತ್ತು ಕೋಟಿ–ಕೋಟಿ ಡಾಲರುಗಳ ಸುಪ್ಪತ್ತಿಗೆಗಳ ಮೇಲೆ ಪವಡಿಸಿರುವವರು. ಡೊನಾಲ್ಡ್ ಟ್ರಂಪ್ ಆನೆಪಕ್ಷದ ರಿಪಬ್ಲಿಕನ್ ಅಭ್ಯರ್ಥಿ ಮತ್ತು ಹಿಲರಿ ಕ್ಲಿಂಟನ್ ಕತ್ತೆಪಕ್ಷದ ಡೆಮಾಕ್ರಟಿಕ್ ಪಕ್ಷದ ಅಭ್ಯರ್ಥಿ. ಟ್ರಂಪ್ ಅಮೆರಿಕಾದ ಕೃತಕ ಪೈಲ್ವಾನರಂತಿದ್ದಾನೆ, ಹಾಗೆಯೇ ಮಾತನಾಡುತ್ತಾನೆ. ಮಕ್ಕಳು ನೋಡಿ ಕುಪ್ಪಳಿಸುವ "ಡಬ್ಲ್ಯುಡಬ್ಲ್ಯುಎಫ್ ಹೀರೋ" ಮಾದರಿಯ ಟ್ರಂಪ್, ತನ್ನ ಖಾಸಗಿ ಜೀವನದ ತುಣುಕುಗಳನ್ನು ನಿರ್ಭಿಡೆಯಿಂದ ಹಂಚಿಕೊಂಡಿದ್ದಾನೆ. ಅದೇನು ಮಾದರಿಯೋ ಏನೋ, ಅಮೆರಿಕದ ಅನೇಕ ಮಹಿಳೆಯರು ಎಷ್ಟೋ ವರ್ಷಗಳ ಹಿಂದಿನ ಘಟನೆಗಳನ್ನು ಬಹಿರಂಗಗೊಳಿಸಿ ಟ್ರಂಪ್ ಎಂತಹ ಕಾಮುಕನೆಂದು ಬಣ್ಣಿಸಿದ್ದಾರೆ. ಮುಖ್ಯವಾಗಿ ಆತನ ಬಳಿ ಲೆಕ್ಕಕ್ಕೆ ಸಿಗದಷ್ಟು ಸಂಪತ್ತಿದೆ. ಅಧ್ಯಕ್ಷನಾಗಲು ಅದು ಒಳ್ಳೆಯ ಹಿನ್ನೆಲೆ. ತನ್ನಲ್ಲಿ ಅಷ್ಟು ಹಣವಿಲ್ಲದಿದ್ದರೂ ಟ್ರಂಪ್‌ನನ್ನು ಮೀರಿಸುವ ಬಂಡವಳಿಗರು ಹಿಲರಿಯ ಬೆನ್ನಿಗಿದ್ದಾರೆ. ವಿದೇಶಾಂಗ ಕಾರ್ಯದರ್ಶಿಯಾಗಿ ಅನುಭವವಿರುವ ಆಕೆಗೆ ಎಲ್ಲೆಲ್ಲಿ ಎಂತೆಂತಹ ಆಳ್ವಿಕೆಗಳಿವೆ, ಅವುಗಳಲ್ಲಿ ಮುಳುಗಿಸಬೇಕಾದ್ದು ಯಾವುವು ಎಂಬ ಖಚಿತ ಮಾಹಿತಿ ಇದೆ. ಮೆಕ್ಸಿಕೋದಿಂದ ನುಸುಳಿ ಬರುವವರನ್ನು ತಡೆಯಲು ಟ್ರಂಪ್ ಗೋಡೆಯನ್ನು ಕಟ್ಟಿಸುತ್ತಾನಂತೆ. ಶತಮಾನಗಳ ಹಿಂದೆ ಚೀಣಾದಲ್ಲಿ "ಚೀಣಾದ ಮಹಾನ್ ಗೋಡೆ" ಕಟ್ಟಲಾಗಿತ್ತು. ಇಂದಿನ ಪ್ರವಾಸಿಗರಿಗೆ ಅದೊಂದು ಆಕರ್ಷಣೆ ಎನ್ನುವುದನ್ನು ಬಿಟ್ಟರೆ ಅದರಿಂದೇನೂ ಪ್ರಯೋಜನವಾಗಿಲ್ಲ. ಗೋಡೆ ಕಟ್ಟಲು ಹೊರಟರೆ ಒಂದಷ್ಟು ಉದ್ಯೋಗಗಳು ಸೃಷ್ಟಿಯಾಗುತ್ತವೆ, ಅಷ್ಟೆ. ಅಮೆರಿಕಾದ ಕೃಷಿಕ್ಷೇತ್ರದಲ್ಲಿ ಕಾನೂನುಬಾಹಿರವಾಗಿ ಅಮೆರಿಕಾ ಪ್ರವೇಶಿಸಿರುವ ಮೆಕ್ಸಿಕೋದ ಜನ ದುಡಿಯುತ್ತಿದ್ದಾರೆ ಮತ್ತು ಅವರು ನಿರ್ಗಮಿಸಿದರೆ ಕೃಷಿಯು ಕುಸಿಯುತ್ತದೆ. ಇದು ಅಮೆರಿಕಾದ ಎಲ್ಲ ರಾಜಕಾರಣಿಗಳಿಗೂ ಗೊತ್ತು. ಆದ್ದರಿಂದ ಯಾರು ಚುನಾಯಿತರಾದರೂ ನುಸುಳಿ ಬಂದಿರುವವರಿಗೆ ಆಘಾತದ ಭೀತಿಯೇನೂ ಇಲ್ಲ. ಮೇಲಾಗಿ, ಅಮೆರಿಕಾದ ಚುನಾವಣೆ ಯಾವುದೇ ರಾಷ್ಟ್ರೀಯ ಸಮಸ್ಯೆಯನ್ನು ಕೇಂದ್ರೀಕರಿಸಿ ನಡೆಯುವುದಿಲ್ಲ. ಎಲ್ಲಾ ಹಣದ ಮಾಯೆ. ಹೀಗಾಗಿ ಅದೊಂದು ಮೋಜಿನ ಪ್ರಸಂಗ. ಎಲ್ಲಕ್ಕಿಂತಲೂ ಮುಖ್ಯವಾಗಿ ಅಮೆರಿಕಾದ ಚುನಾವಣೆಯು ಪ್ರಜಾಪ್ರಭುತ್ವದ ನಿಯಮಗಳ ಅಡಿಪಾಯವನ್ನು ಹೊಂದಿಲ್ಲ. ಒಂದು ರಾಜ್ಯದಲ್ಲಿ ಬಹುಮತ ಪಡೆದರೆ ಆ ರಾಜ್ಯದ ಎಲ್ಲ ಮತಗಳನ್ನೂ ಪಡೆದಂತೆ! ದೊಡ್ಡ ನಾಲ್ಕೈದು ರಾಜ್ಯಗಳಲ್ಲಿ ಶೇ. ೫೧ ಮತ ಪಡೆದರೆ ಸಾಕು, ಅಧ್ಯಕ್ಷ ಪದವಿ ದೊರೆತೇ ದೊರೆಯುತ್ತದೆ. ಟ್ರಂಪ್‌ನ ಕಾಮಕೇಳಿಗಳೇನೇ ಇರಲಿ, ಯಾವುದಕ್ಕೂ ಆತ ಅಂಜಬೇಕಾಗಿಲ್ಲ, ಮೊಕದ್ದಮೆ ಎದುರಿಸಬೇಕಾಗಿಲ್ಲ. ಭಾರತವು ಈಚಿನ ದಿನಗಳಲ್ಲಿ ಅಮೆರಿಕಾದ ಮೆಚ್ಚಿನ ರಾಷ್ಟ್ರವಾಗುತ್ತಿದೆ. ಅದರಿಂದಾಗಿ ರಷ್ಯಾವನ್ನು ದೂರಮಾಡಲಾಗುತ್ತಿದೆ. ಕಾಶ್ಮೀರದ ಪ್ರಶ್ನೆಯು ವಿಶ್ವಸಂಸ್ಥೆಯ ಭದ್ರತಾ ಮಂಡಲಿಯಲ್ಲಿ ಚರ್ಚೆಗೆ ಬಂದಾಗೆಲ್ಲಾ ನಿರ್ಣಯಗಳ ವಿರುದ್ಧವಾಗಿ ಸೋವಿಯೆತ್ ಒಕ್ಕೂಟವು ವೀಟೋ ಚಲಾಯಿಸುತ್ತಿತ್ತು. ಮುಂದಿನ ದಿನಗಳಲ್ಲಿ ಏನು ಸಮಸ್ಯೆ ಎದುರಿಸಬೇಕಾಗುತ್ತದೋ ಹೇಳಬರುವುದಿಲ್ಲ. ಟ್ರಂಪ್ ಆಗಲಿ ಹಿಲರಿ ಆಗಲಿ ನಮ್ಮ ನೆರವಿಗೆ ಬರುವುದಿಲ್ಲವೆಂದು ತೋರುತ್ತದೆ.

## ಯುದ್ಧದ ನಂಜಿನ ವಾತಾವರಣ

ಕೆಲವು ರಾಜಕೀಯ ನಾಯಕರು ಈಚಿನ ದಿನಗಳಲ್ಲಿ ಮಾತನಾಡುತ್ತಿರುವ ಶೈಲಿ ನೋಡಿದರೆ ಇನ್ನೇನು ಭಾರತ–ಪಾಕಿಸ್ತಾನ ಯುದ್ಧ ಅನಿವಾರ್ಯವೇನೋ ಎನಿಸುತ್ತದೆ. ಪಾಕಿಸ್ತಾನವು ತನ್ನ ಅಣ್ವಸ್ತ್ರಗಳ ದಾಸ್ತಾನಿನ ಪ್ರಸ್ತಾಪ ಮಾಡಲು ಸಹ ಹೇಸಿಲ್ಲ. "ಬಾಂಬ್ ಹಾಕಿದರೆ ದಕ್ಷಿಣ ಭಾರತದ ಮೇಲೆ ಹಾಕಲಾಗುತ್ತದೆ" ಎಂಬ ಗುಸುಗುಸು ಮಾತು ಸಹ ಪ್ರಚಲಿತವಾಗಿದೆ. ಉತ್ತರ ಭಾರತದ ಮೇಲೆ ಅಣ್ವಸ್ತ್ರ ಪ್ರಯೋಗಿಸಿದರೆ ವಿಕಿರಣದ ಬಾಧೆ ಪಾಕಿಸ್ತಾನಕ್ಕೂ ತಟ್ಟಬಹುದು; ಆದ್ದರಿಂದ ದಕ್ಷಿಣ ಭಾರತವನ್ನೇ ಗುರಿಮಾಡಲಾಗುತ್ತದೆ, ಎಂಬ ತರ್ಕ ಕೇಳಿಬರುತ್ತಿದೆ. ಇದೆಲ್ಲಾ ಯುದ್ಧೋನ್ಮಾದದ ಮಾತುಗಳು. ಯುದ್ಧದ ಕಾರ್ಮೋಡಗಳು ಈಗಾಗಲೇ ಆವರಿಸಿಬಿಟ್ಟಿವೆಯೆಂದು ಭಾವಿಸಬೇಕಾಗಿಲ್ಲ. ಆಳುವ ಪಕ್ಷದ ಕೆಲವು ನಾಯಕರ ಅತಿರೇಕದ ಮಾತುಗಳನ್ನು ಉತ್ಸಾಹದ ಅಭಿವ್ಯಕ್ತಿ ಎಂದಷ್ಟೇ ಭಾವಿಸುವುದು ತಪ್ಪಲ್ಲ. ರಾಷ್ಟ್ರೀಯತೆಯ ಅಪವ್ಯಾಖ್ಯಾನಗಳಿಂದ ಆಕಸ್ಮಿಕವಾಗಿ ಯುದ್ಧಗಳು ನಡೆದಿರುವುದು ಇತಿಹಾಸದಲ್ಲಿ ದಾಖಲಾಗಿದೆ. ಬರ್ಟ್ರಂಡ್ ರಸೆಲ್ ತನ್ನೊಂದು ಪ್ರಬಂಧದಲ್ಲಿ ರಾಷ್ಟ್ರೀಯತೆಯ ಆಯಾಮಗಳನ್ನು ಚರ್ಚಿಸುತ್ತಾ "ಅದರಲ್ಲಿ ಉದ್ರೇಕವು ಪ್ರಾಥಮ್ಯ ಪಡೆಯುವ ಸಾಧ್ಯತೆ ಬಹಳ ಜಾಸ್ತಿ" ಎಂದು ವಾದಿಸಿದ್ದ. ಆತನ ಮಾತು ಮನನಯೋಗ್ಯವಾಗಿದೆ : "ರಾಷ್ಟ್ರೀಯತೆ ಎಂಬುದು ಸಾಮೂಹಿಕ ಬುದ್ಧಿಪಲ್ಲಟದ ಇನ್ನೊಂದು ಹೆಸರು." ನಾವು ಆ ಹಂತವನ್ನು ಮುಟ್ಟಿಲ್ಲವೆಂಬ ಆಶಾಭಾವನೆ ತಾಳುವುದು ಅವಶ್ಯಕ. ಭಾರತ–ಪಾಕಿಸ್ತಾನಗಳ ನಡುವೆ ನಡೆದಿರುವ ಮೂರು–ನಾಲ್ಕು (ಸಿಯಾಚಿನ್ ಸೇರಿದಂತೆ ನಾಲ್ಕು) ಯುದ್ಧಗಳು ನಿರ್ಣಾಯಕವಾಗಿ ಉತ್ತಮ ಫಲವನ್ನು ನಮಗೆ ನೀಡಿಲ್ಲ. ಪಾಕಿಸ್ತಾನಕ್ಕಂತೂ ಯಾವ ಫಲವೂ ದಕ್ಕಿಲ್ಲ, ಮುಂದೆಯೂ ದಕ್ಕುವ ಸಂಭವವಿಲ್ಲ. ಗೋಪಾಲಕೃಷ್ಣ ಗಾಂಧಿ ತನ್ನೊಂದು ಲೇಖನದಲ್ಲಿ (ದಿ ಹಿಂದು, ೩.೧೦.೨೦೧೬) ಯುದ್ಧಗಳಲ್ಲಿ ನಮ್ಮೆರಡು ದೇಶಗಳು ಅನುಭವಿಸಿರುವ ಜೀವಹಾನಿಯನ್ನು ದಾಖಲಿಸಿರುವುದುಂಟು. ೧೯೪೭–೪೮ರ ಯುದ್ಧದಲ್ಲಿ ಭಾರತವು ೧೫೦೦ ಮಂದಿ ಸೈನಿಕರನ್ನು ಕಳೆದುಕೊಂಡಿತು, ಪಾಕಿಸ್ತಾನವು ೬೦೦೦ ಮಂದಿಯನ್ನು ಕಳೆದುಕೊಂಡಿತು. ೧೯೬೫ರ ಯುದ್ಧದಲ್ಲಿ ಆ ಸಂಖ್ಯೆಗಳು ೩೦೦೦ ಮತ್ತು ೩೮೦೦ ಆಗಿತ್ತು. ೧೯೭೧ರ ಬಂಗ್ಲಾದೇಶ ವಿಮೋಚನಾ ಯುದ್ಧದಲ್ಲಿ ಭಾರತಕ್ಕೆ ಕೀರ್ತಿ ದೊರಕಿತು, ಪಾಕಿಸ್ತಾನವು ತನ್ನ ದೇಶದ ಒಂದು ಭಾಗವನ್ನು ಕಳೆದುಕೊಂಡಿತು. ಸಾವು ೩೦೦೦ (ಭಾರತ) ಮತ್ತು ೮೦೦೦ (ಪಾಕಿಸ್ತಾನ) ಆಗಿತ್ತು. ೧೯೯೯ರ ಕಾರ್ಗಿಲ್ ಸಂದರ್ಭದಲ್ಲಿ ಅದು ೫೫೦ (ಭಾರತ) ಮತ್ತು ೧೦೦೦ (ಪಾಕಿಸ್ತಾನ) ಆಗಿತ್ತು. ಯುದ್ಧವು ಸಾವುನೋವುಗಳಿಲ್ಲದೆ, ಆರ್ಥಿಕ ಏರುಪೇರುಗಳಿಲ್ಲದೆ, ಮುಕ್ತಾಯವಾಗುವುದಿಲ್ಲ. ಅಣ್ವಸ್ತ್ರಗಳು ಎರಡು ರಾಷ್ಟ್ರಗಳಲ್ಲೂ ಇರುವುದರಿಂದ ಮುಂದೇನಾದರೂ ಯುದ್ಧ ಸಂಭವಿಸಿದರೆ ಸಾವಿನ ಪ್ರಮಾಣ ಎಷ್ಟಾಗಬಹುದೆಂಬುದು ಊಹೆಗೆ ನಿಲುಕುವುದಿಲ್ಲ.

ಭಯೋತ್ಪಾದನೆಯನ್ನು ಅಧಿಕೃತ ನೀತಿಯನ್ನಾಗಿಸಿಕೊಂಡಿರುವ ಪಾಕಿಸ್ತಾನಕ್ಕೆ ನಮ್ಮ ದೇಶದ ಮತೀಯ ವೈಷಮ್ಯಗಳು ಒಂದು ರೀತಿಯ ಸಾಧನವಾಗಿವೆ. ನಮ್ಮ ಆಂತರಿಕ ವೈಷಮ್ಯಗಳಿಗೆ ನೆರೆರಾಷ್ಟ್ರದ ಭಯೋತ್ಪಾದನೆಯು ಪ್ರತಿಕ್ರಿಯೆಯೆಂದು ಇದರರ್ಥವಲ್ಲ. ಭಯೋತ್ಪಾದನೆಗೆ ಯಾವ ಸಮರ್ಥನೆಯೂ ಇಲ್ಲವೆಂದು ಘೋಷಿಸುತ್ತಿರುವ ನಮ್ಮ ಪ್ರಪಂಚ ಅದರ ನಿರ್ಮೂಲನೆಗೆ ಯತ್ನಿಸಿಲ್ಲ. ಅಮೆರಿಕಾ ಒಂದು ಭಯೋತ್ಪಾದಕ ರಾಷ್ಟ್ರವೆಂಬ ಮಾತಿನಲ್ಲಿ ಹುರುಳಿದೆ. ಮೊನ್ನೆ ಮೊನ್ನೆ ಅದು ಯೆಮೆನ್‌ನಲ್ಲಿ ಸೌದಿ ಅರೇಬಿಯಾ ಜೊತೆಗೂಡಿ ಬಾಂಬುಗಳನ್ನು ಸುರಿಸಲು ಆರಂಭಿಸಿತು. ಇರಾನ್ ದೇಶವನ್ನು ಮೂಲೆಗುಂಪಾಗಿಸಲು ಯೆಮೆನ್ ಮೇಲೆ ಅಮೆರಿಕಾದ ಬಾಂಬುಗಳು! ಇದು ವರ್ತಮಾನದ ವಿದ್ಯಮಾನ. ಮಾರಕಾಸ್ತ್ರಗಳ ಮಾರಾಟವು ಆರ್ಥಿಕ ಜೀವಾಳವಾದಾಗ ಯುದ್ಧಗಳನ್ನು ಪ್ರೇರೇಪಿಸುತ್ತಿರಬೇಕು. ಅಮೆರಿಕಾ ಮತ್ತು ಯೂರೋಪಿನ ಕೆಲವು ದೇಶಗಳು ಅದಕ್ಕೆ ಸೊಪ್ಪು ಹಾಕುತ್ತವೆ. ಯುದ್ಧಗಳಿಗೆ ಪ್ರತಿರೋಧ ಒಡ್ಡಬೇಕಾದ ವಿಶ್ವಸಂಸ್ಥೆಯು ಇರಾಕ್–ಅಮೆರಿಕಾ ಯುದ್ಧದ ಕಾಲದಿಂದ ಮೂಕಸಾಕ್ಷಿಯಾಗಿ ಕುಳಿತಿದೆ. ಇಂದಿನ ಸನ್ನಿವೇಶದಲ್ಲಿ ಭಾರತವು ಒಂದೇ ಒಂದು ತಪ್ಪು ಹೆಜ್ಜೆಯನ್ನೂ ಇಡಕೂಡದೆಂಬುದು ಇದೆಲ್ಲದರ ಮಥಿತಾರ್ಥ.






## ಮೌಢ್ಯಾಚರಣೆ ನಿಷೇಧ ಕಾಯ್ದೆ ಔಚಿತ್ಯ

*ಕೋಚೆ*

**ಪುಟ : ೭೨**

**ಬೆಲೆ : ರೂ. ೪೦**

**ಶ್ರೀ ಅರವಿಂದ ಪ್ರಕಾಶನ**

ನಂ. ೧೨೭

ವೆಸ್ಟ್ ಆಫ್ ಕಾರ್ಡ್ ರೋಡ್

ಬೆಂಗಳೂರು – ೫೬೦ ೦೮೬

*ಕರ್ನಾಟಕ ಸರಕಾರ ಮೌಢ್ಯಾಚರಣೆ ನಿಷೇಧ ಕಾಯ್ದೆ ಜಾರಿಗೆ ತರುವಲ್ಲಿ ವಿಳಂಬ ಮಾಡುತ್ತಿರುವ ಸಂದರ್ಭದಲ್ಲಿ ಸಾಹಿತಿ, ಚಿಂತಕ, ನ್ಯಾಯಾಧೀಶ ಶ್ರೀ ಕೋ. ಚೆನ್ನಬಸಪ್ಪ ನವರು 'ಮೌಢ್ಯಾಚರಣೆ ನಿಷೇಧ ಕಾಯ್ದೆ ಔಚಿತ್ಯ' ಎಂಬ ಕೃತಿಯನ್ನು ಪ್ರಕಟಿಸಿದ್ದಾರೆ. ಇಂದಿನ ಸಾಮಾಜಿಕ ಜೀವನದಲ್ಲಿ ಮೌಢ್ಯ ಅಪಾಯಕಾರಿಯಾಗಿ ಬೆಳೆಯುತ್ತಿರುವ ಸಂದರ್ಭದಲ್ಲಿಯೇ ಅದು ವ್ಯಾಪಾರ ಮತ್ತು ರಾಜಕಾರಣದ ಮಾಧ್ಯಮವಾಗುತ್ತಿದೆ. ರಾಜ್ಯದ ಆಡಳಿತ ಪಕ್ಷದಲ್ಲಿ, ವಿರೋಧ ಪಕ್ಷಗಳಲ್ಲಿ ಮೌಢ್ಯಾಚರಣೆಯ ಪರವಾಗಿಯೇ ಹೆಚ್ಚಿನ ಜನರಿದ್ದು ವೈಜ್ಞಾನಿಕ ಮನೋಭಾವಕ್ಕೆ ವಿರೋಧಿಗಳಾಗಿದ್ದಾರೆ. ಇಂಥ ಸಂದರ್ಭದಲ್ಲಿ ಸಾರ್ವಜನಿಕರ, ಜನಪ್ರತಿನಿಧಿಗಳ ಗೊಂದಲ ನಿವಾರಿಸುವಲ್ಲಿ ಕೋಚೆಯವರ ಈ ಕೃತಿ ಉಪಯುಕ್ತವಾಗುತ್ತದೆ. ತತ್ವಜ್ಞಾನ ಮತ್ತು ನ್ಯಾಯಶಾಸ್ತ್ರದ ದೃಷ್ಟಿಕೋನದಲ್ಲಿ, ಸಂವಿಧಾನದ ಆಶಯದ ಹಿನ್ನೆಲೆಯಲ್ಲಿ ಯಾವುದು ಆಚರಣೆ, ಯಾವುದು ಮೌಢ್ಯಾಚರಣೆ ಎಂಬ ವಿಶ್ಲೇಷಣೆಯನ್ನು ಪ್ರಸ್ತುತಪಡಿಸುವ ಈ ಕೃತಿ ಶಾಲಾ ಕಾಲೇಜುಗಳಲ್ಲಿ ಪಠ್ಯವಾಗುವ ಅರ್ಹತೆ ಪಡೆದಿದೆ. ತತ್ತ್ವಶಾಸ್ತ್ರ ಹಾಗೂ ನ್ಯಾಯಶಾಸ್ತ್ರದಲ್ಲಿ ಪರಿಣತರಾಗಿರುವ ಕೋಚೆಯವರು ಮೂಢನಂಬಿಕೆ ಮತ್ತು ಧಾರ್ಮಿಕ ಶ್ರದ್ಧಾ ನಂಬಿಕೆಗಳ ವ್ಯತ್ಯಾಸವನ್ನು ಸಾದರಪಡಿಸಿದ್ದಾರೆ. ಸ್ವತಃ ನ್ಯಾಯಾಧೀಶರಾಗಿದ್ದ ಅವರು ಮೌಢ್ಯಾಚರಣೆ ನಿಷೇಧ ಕಾಯ್ದೆ ಔಚಿತ್ಯವನ್ನು ಹೇಳುವುದರ ಮೂಲಕ ಈ ಕಾಯ್ದೆ ಜಾರಿಗೆ ಅಡ್ಡಿಪಡಿಸುತ್ತಿರುವ ಕಂದಾಚಾರಿಗಳಿಗೆ ಸರಿಯಾದ ಉತ್ತರ ಕೊಟ್ಟಿದ್ದಾರೆ.*

– **ಶ್ರೀಸುಮಿತ್ರಾಸುತ** *ಅಗಸಬಾಳ*

## ನಮ್ಮ ಸಂಸ್ಕೃತಿ (ಸಂಸ್ಕೃತಿ ಚಿಂತನೆಯ ಬಿಡಿ ಬರಹಗಳು)

*ಮರಾಠಿ ಮೂಲ : ಇರಾವತಿ ಕರ್ವೆ, ಕನ್ನಡಕ್ಕೆ : ಚಂದ್ರಕಾಂತ ಪೋಕಳೆ*

**ಪುಟ : ೧೧೨** **ಬೆಲೆ : ರೂ. ೮೫**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧



*ಸುಮಾರು ೧೯೪೫ರಿಂದ ೧೯೬೦ರ ಆಸುಪಾಸಿನಲ್ಲಿ ಬರೆದ ಈ ಬರಹಗಳು ಒಂದು ಬಗೆಯ ಹಿನ್ನೋಟವನ್ನು ಒದಗಿಸಿವೆ. ಸಂಸ್ಕೃತಿಯನ್ನು ಚಿಂತನೆಯ ಒರೆಗೆ ಹಚ್ಚಿದ ಮಹತ್ವದ ಲೇಖನಗಳಿವು. ಶಾಸ್ತ್ರ – ಸಂಪ್ರದಾಯ – ಸಂಸ್ಕೃತಿ ಇವು ಮೂರೂ ಒಂದಕ್ಕೊಂದು ಹಾಸುಹೊಕ್ಕಾಗಿರುವ ಪದಗಳಾದರೂ ಬೇರೆ ಬೇರೆ ಅರ್ಥ ಹೊರಡಿಸುತ್ತವೆ. ಒಂದು ಕಾಲದ ಜನರಿಗೆ ಸ್ವೀಕಾರಾರ್ಹ ಎಂದುಕೊಂಡ ಆಚರಣೆಗಳು ಮುಂದುವರಿದರೆ ಅದು ಸಂಪ್ರದಾಯ. ಮುಂದೆ ಅದನ್ನೇ ನಮ್ಮ ಸಂಸ್ಕೃತಿಯೆಂದು ಶಾಸ್ತ್ರಸಿದ್ಧವಾಗಿ ದಾಖಲಿಸಿ ಜನರ ಮೇಲೆ ಹೇರಿದಾಗ ಗೊಂದಲಗಳು ಸೃಷ್ಟಿಯಾದಾವು. ಮುಂದಿನ ಪೀಳಿಗೆ ಅದನ್ನು ಒಪ್ಪದೆ ಇರಬಹುದು. ಇಲ್ಲಿನ ಬರಹಗಳು ಅಂದಿನ ಕಾಲದ ಸಮಾಜದಲ್ಲಿ ರೂಢಿಯಲ್ಲಿದ್ದ ರೀತಿ ನೀತಿಗಳನ್ನು ಪರಿಚಯಿಸಿ, ಚಿಂತಿಸಿ ನಮಗೆ ಕೆಲವು ವಿಚಾರಗಳನ್ನು ಸ್ಪಷ್ಟಪಡಿಸುತ್ತವೆ. ಸುಸಂಸ್ಕೃತಿ ಒಳಿತನ್ನೇ ಮಾಡಬಹುದು. ದುಷ್ಟ ಸಂಪ್ರದಾಯಗಳು ಉಳಿದುಬಿಟ್ಟರೆ ಕೇಡು ಖಂಡಿತ. ಸಂಸ್ಕೃತಿ ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾಗಿರಲು ಸಾಧ್ಯ. ಆಚಾರ ವಿಚಾರಗಳು ಕ್ರಮೇಣ ಬದಲಾವಣೆ ಹೊಂದುತ್ತವೆ. ಕೇವಲ ಅವು ಸಾಮಾಜಿಕ ಸ್ತರದಲ್ಲಷ್ಟೇ ಅಲ್ಲದೆ ಶೈಕ್ಷಣಿಕ ಮತ್ತು ಕಾನೂನುಗಳ ವಿಚಾರದಲ್ಲಿಯೂ ರಾಜಕೀಯ ಕ್ಷೇತ್ರದಲ್ಲೂ ಪಲ್ಲಟ ಹೊಂದುತ್ತವೆ. ಹಲವಾರು ಧರ್ಮಗಳು ಬೇರುಬಿಟ್ಟಿರುವ ನಮ್ಮ ದೇಶದಲ್ಲಿ ಹಲವು ಸಂಸ್ಕೃತಿಗಳು ತಲೆ ಎತ್ತಿ ಪರಸ್ಪರ ಸೌಹಾರ್ದದ ವಾತಾವರಣವಿಲ್ಲದೆ ಮೇಲಾಟ ನಡೆಸುವುದು ಕೂಡ ಒಂದು ಕೆಟ್ಟ ಸಂಸ್ಕೃತಿಯೇ ಆಗಿದೆ.*



## ಚಂದನದ ಮರ (ಆಯ್ದ ಕೊಂಕಣಿ ಕಥೆಗಳು)

*ಕೊಂಕಣಿ ಮೂಲ : ಮೀನಾ ಕಾಕೊಡಕಾರ್, ಕನ್ನಡಕ್ಕೆ : ಡಾ॥ ಗೀತಾ ಶೆಣೈ*

**ಪುಟ : ೧೧೬** **ಬೆಲೆ : ರೂ. ೮೫**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧

*ಕಥೆಗಳು ಬಲು ಮಾರ್ಮಿಕವಾದಂಥವು. ಮೇಲ್ನೋಟಕ್ಕೆ ದಿನವೂ ನಾವು ಕಾಣುವ ಸಂಗತಿಗಳೇ ಆದರೂ ಇಣಿಕಿ ನೋಡಿದಾಗ ಅವು ನಮಗೊಂದು ಎಚ್ಚರಿಕೆಯ ಸಂದೇಶ ನೀಡಿವೆ. ಒಂದೊಂದು ಕಥೆಗೂ ಒಂದೊಂದು ನಿಟ್ಟುಸಿರು ನಮಗರಿವಿಲ್ಲದೆ ಹೊರ ಬರುತ್ತದೆ. ಸಮಾಜದಲ್ಲಿ ಕಡೆಗಣಿಸಲ್ಪಟ್ಟ ನೊಂದ, ಅಸಹಾಯಕ ಜನರ ಮೊರೆ ಇಲ್ಲಿನ ಗಟ್ಟಿ ದನಿ. ಅನಾಥ ಪ್ರಜ್ಞೆ ಮತ್ತು ನೋವಿನ ಎಳೆಗಳಿಂದ ಹೆಣೆದುಕೊಂಡ ಸಾಮಾನ್ಯರ ಬದುಕಿನ ಚಿತ್ರಣ. ವ್ಯವಸ್ಥೆಯ ಸಂಕೋಲೆಯಿಂದ ಬಿಗಿಯಲ್ಪಟ್ಟು ನಿವಾರಿಸಲಾಗದ ಸಮಸ್ಯೆಯಾಗಿ ಕಾಡುವ ದುರಂತವನ್ನು ಇವು ಹೇಳುತ್ತಿವೆ. ಮನುಷ್ಯನನ್ನು ಹಿಂಡಿ ಹಿಪ್ಪೆ ಮಾಡುವುದೇ ಅಸಹಾಯಕತೆ ಮತ್ತು ಅನಿವಾರ್ಯತೆ. ಕಥಾ ಪಾತ್ರಗಳು ಇದನ್ನು ಚೆನ್ನಾಗಿ ಬಿಂಬಿಸಿವೆ. ಚೌಕಟ್ಟು ಮತ್ತು ನಿಯಮಗಳನ್ನು ಮೀರಿದಾಗ ಜೀವನ ಗೊಂದಲದ ಗೂಡು – ತುಮುಲಗಳ ಕಾಡು. ಎಚ್ಚರಿಕೆ ಮತ್ತು ದಿಟ್ಟತನದ ಕೊರತೆಯಾದಾಗ ಮಾತ್ರ ಸೋಲು ಕಟ್ಟಿಟ್ಟ ಬುತ್ತಿ. ನಾವು ಬೆನ್ನಟ್ಟುವುದು ಶ್ರೀಮಂತಿಕೆಯ ವೈಭವವನ್ನು. ಆದರೆ ಕಳೆದುಕೊಳ್ಳುವುದು ಹೆಚ್ಚಿನ ಸಂದರ್ಭಗಳಲ್ಲಿ ನೆಮ್ಮದಿ ಮತ್ತು ಸಂತೃಪ್ತಿಯನ್ನು! ಇಂತಹ ಹಲವಾರು ಸತ್ಯಗಳನ್ನು ಕಥೆಗಳು ಗರ್ಭೀಕರಿಸಿಕೊಂಡಿವೆ.*

– **ಇಂದಿರಾಕುಮಾರಿ,** *ಯಶವಂತಪುರ, ಬೆಂಗಳೂರು – ೨೨*

## ಪ್ರಣೀತೆ (ಗಜಲ್ ಸಂಕಲನ)

ಪ್ರೇಮಾ ಹೂಗಾರ

**ಪುಟ : ೫೪** **ಬೆಲೆ : ರೂ. ೧೦೦**

**ಶ್ರೀ ಸಿದ್ಧೇಶ್ವರ ಪ್ರಕಾಶನ,** ಬೀದರ

*'ಗಜಲ್' ಎಂದರೆ ಗೆಳತಿಯೊಂದಿಗಿನ ಮಾತುಕತೆ; ಆಕೆಯ ಮುಂದೆ ಪ್ರೀತಿ, ಪ್ರೇಮ, ಮೋಹದ ಬಗ್ಗೆ ತನ್ನ ಅನಿಸಿಕೆಗಳನ್ನು ವ್ಯಕ್ತಪಡಿಸುವುದು ಎಂದರ್ಥ. ಆದರೆ, 'ಗಜಲ್' ರಚನೆಯ ವಿಚಾರದಲ್ಲಿ ಪ್ರೇಮಾ ಹೂಗಾರ ಅವರು ಕಂಡುಕೊಂಡ ದಾರಿಯೇ ಬೇರೆ! ಅವರ ಆಲೋಚನಾಕ್ರಮ ಪ್ರೀತಿ, ಪ್ರೇಮ, ಮೋಹದಂಥ ವಿದ್ಯಮಾನಗಳ ಹೇಳಿಕೆಗಳಿಗಿಂತ ಭಿನ್ನವಾಗಿದೆ. ಅವರಿಗೆ 'ಗಜಲ್' ರಚಿಸುವುದೆಂದರೆ ತಮ್ಮ ಅಂತರಂಗದ ದನಿಗೆ ಕಿವಿ ಮತ್ತು ಮನಸ್ಸುಗಳನ್ನು ಕೀಲಿಸಿ ನಡೆಸುವ ಏಕಾಗ್ರ ಧ್ಯಾನ. ಅವರು, ತಮ್ಮ ಸುತ್ತಲಿನ ವ್ಯವಸ್ಥೆಯಲ್ಲಿ ಅನುಭವಕ್ಕೆ ಬಂದ ಯಾವುದೇ ಸಂಗತಿಗಳ ಕುರಿತಾಗಿ ಬೇರೆಯದೇ ಆದ ಇನ್ನೊಂದು ನೆಲೆಯಲ್ಲಿ ಗ್ರಹಿಸಿ, ಆ ಗ್ರಹಿಕೆಗಳನ್ನು ಪ್ರತಿಮೆ–ರೂಪಕಗಳಿಗೆ ಅಳವಡಿಸಿ 'ಗಜಲ್'ಗಳನ್ನು ರಚಿಸುತ್ತಾರೆ. ಹೀಗಾಗಿ, ಇವು ಓದುಗನ ಮನ ಕಲಕುವ ರಚನೆಗಳಾಗಿವೆ. ಪ್ರಸ್ತುತ, ಪ್ರೇಮಾ ಅವರ, 'ಪ್ರಣೀತೆ' ಸಂಕಲನದಲ್ಲಿನ 'ಗಜಲ್'ಗಳಲ್ಲಿ ಶ್ರೇಣೀಕೃತ ವ್ಯವಸ್ಥೆ ರೂಪಿಸಿರುವ ಕಟ್ಟುಪಾಡುಗಳ ವಿಚಾರದಲ್ಲಿ ಅವರಿಗಿರುವ ಆಕ್ರೋಶ, ಜಾಗತೀಕರಣ ಪ್ರಕ್ರಿಯೆಯಿಂದಾಗಿ ನಮ್ಮ ನೆಲದ ಒಂದು ಕಾಲದ ಸಂಸ್ಕೃತಿ–ಸಂಪ್ರದಾಯಗಳು ಕಳೆದುಹೋಗುತ್ತಿರುವ ಬಗ್ಗೆ ಕಳವಳ, ಈ ವ್ಯವಸ್ಥೆಯಲ್ಲಿ ಜಾತಿ–ಧರ್ಮಗಳು ಅಳವಡಿಸಿಕೊಂಡಿರುವ ವಿಚ್ಛಿದ್ರಕಾರಿ ಧೋರಣೆಗಳ ಕುರಿತಾದ ವಿರೋಧ ಮತ್ತು ಮೋಹದ ಬಲೆಗೆ ಬಿದ್ದವರ ಮುಖವಾಡ ಕಳಚಿಡುವ ಪ್ರಯತ್ನ – ಈ ಎಲ್ಲ ವಿಚಾರಗಳು ತುಂಬಿಕೊಂಡಿವೆ. ಹೀಗೆ, ತಮ್ಮ ಕಾಲದ ತಳಮಳಗಳಿಗೆ ವಿರುದ್ಧವಾಗಿ ಪ್ರೇಮಾ ಅವರು ಖಚಿತವಾದ ನಿಲುವು ಕಂಡುಕೊಂಡು ಇಲ್ಲಿನ 'ಗಜಲ್'ಗಳನ್ನು ರಚಿಸಿದ್ದಾರೆ.*

– **ಕಲ್ಲೇಶ್ ಕುಂಬಾರ್,** *ಹಾರೂಗೇರಿ, ಬೆಳಗಾವಿ*




# ಶುಕ್ರ–ಶನಿ ಸಮಾಗಮ

**ನ**ವೆಂಬರ್ ೭ರ ಸಂಜೆ ಪಶ್ಚಿಮದಲ್ಲಿ ಚಂದ್ರನನ್ನು ಹುಡುಕುವ ಪ್ರಯತ್ನ ಮಾಡಬೇಕು. ತೆಳ್ಳನೆಯ ಗೆರೆಯಂತೆ ಕಾಣುವ ಚಂದ್ರನ ಸನಿಹದಲ್ಲೇ ಕಾಣುವ ಪ್ರಕಾಶಮಾನವಾದ ಚುಕ್ಕೆಯೇ ಶುಕ್ರ. ಸೂಕ್ಷ್ಮವಾಗಿ ಗಮನಿಸಿದಲ್ಲಿ ಕಾಣುವ ಇನ್ನೊಂದು ಚುಕ್ಕೆಯೇ ಶನಿ. ಆಕಾಶ ಶುಭ್ರವಾಗಿದ್ದಲ್ಲಿ ಜ್ಯೇಷ್ಠಾ ನಕ್ಷತ್ರವನ್ನು ಕಾಣಬಹುದು. ಮರುದಿನ ಇನ್ನೂ ಮೇಲೇರುವ ಚಂದ್ರ ಸ್ಫುಟವಾಗಿ ಕಾಣುವುದು. ಹೀಗೆ ಶುಕ್ರ–ಶನಿಗಳು ಅಕ್ಟೋಬರ್ ೩೧ರಂದು ಸಮಾಗಮ ನಡೆಸಿ ಈಗ ದೂರವಾಗುತ್ತಾ ಸಾಗುವುವು. ತಿಂಗಳ ಕೊನೆಗೆ ಶನಿ ಸಂಜೆಗೆಂಪಿನಲ್ಲಿ ಕರಗಿಹೋಗುವುದು. ಏಕೆಂದರೆ ದಿಗಂತದ ಅಂಚನ್ನೇ ತಲುಪುವುದು. ಶುಕ್ರ ಮಾತ್ರ ಮೇಲುಮೇಲಕ್ಕೆ ಏರಿ ಇನ್ನೂ ಪ್ರಕಾಶಮಾನವಾಗಿ ರಾತ್ರಿ ೮ರ ನಂತರವೂ ಕಾಣುವುದು. ತಿಂಗಳ ಕೊನೆಯ ವಾರದಲ್ಲಿ ದಿಗಂತದ ಅಂಚಿನಲ್ಲಿ ಇನ್ನೊಂದು ಹೊಸ ಚುಕ್ಕೆ ಮೂಡುವುದು. ಸಾಮಾನ್ಯವಾಗಿ ಗುರುತಿಸುವುದು ಕಷ್ಟವಾಗುವ ಬುಧ ಗ್ರಹ ಇದು.

೭ರ ಸಂಜೆ ಚಂದ್ರನ ಪಕ್ಕ ಕಾಣುವ ಮಿನುಗದ ಚುಕ್ಕೆಯೇ ಮಂಗಳ ಗ್ರಹ. ಇದನ್ನು ಕೆಂಪು ಬಣ್ಣದ ಕಾರಣ ಗುರುತಿಟ್ಟುಕೊಳ್ಳಬಹುದು. ಇದರ ಆಸುಪಾಸಿನಲ್ಲಿ ಧನುರಾಶಿಯ ಹಲವಾರು ಕ್ಷೀಣ ನಕ್ಷತ್ರಗಳಿವೆ. ತಿಂಗಳ ಕೊನೆಗೆ ಇದು ಮಕರರಾಶಿಯನ್ನು ತಲುಪುವುದು.

ಇನ್ನೊಂದು ಗ್ರಹ ಗುರು ಮುಂಜಾವಿನಲ್ಲಿ ಕಾಣುವುದು. ಪೂರ್ವದ ಅಂಚಿನಲ್ಲಿ ಹೊಳೆಯುವ ಈ ಪ್ರಕಾಶಮಾನ ಚುಕ್ಕೆಯನ್ನು ಗುರುತಿಸಲು ಯಾರ ಸಹಾಯವೂ ಬೇಕಿಲ್ಲ. ತಿಂಗಳ ಕೊನೆಗೆ ಗ್ರಹದ ಕೆಳಗೆ ಚಿತ್ರಾ ನಕ್ಷತ್ರವನ್ನು ಗುರುತಿಸಬಹುದು; ಸ್ವಲ್ಪ ಉತ್ತರಕ್ಕೆ ಕೆಂಪು ಬಣ್ಣದ ಸ್ವಾತಿಯನ್ನೂ ಗುರುತಿಸಬಹುದು.

ಮಳೆಗಾಲ ಮುಗಿದು ಚಳಿಗಾಲದ ಶುಭ್ರ ಆಕಾಶ ಈಗ ದೊರಕುವ ಕಾರಣ ಸಂಜೆಯ ಆಕಾಶದಲ್ಲಿ ಆಕಾಶಗಂಗೆಯನ್ನು ಗುರುತಿಸಬಹುದು. ಶುಕ್ರ ಮತ್ತು ಶನಿ ಗ್ರಹಗಳ ನಡುವೆ ಸೂಕ್ಷ್ಮವಾಗಿ ಗಮನಿಸಬೇಕು. ಬೆಳದಿಂಗಳು ಇಲ್ಲದ ಸಂಜೆ ಈ ಕಾರ್ಯ ನಡೆಸಬಹುದು. ಧನುರಾಶಿಯಲ್ಲಿ ನೆಬ್ಯುಲಾಗಳು, ನಕ್ಷತ್ರ ಗುಚ್ಛಗಳು ಹರಡಿವೆ. ಆದರೆ ಮಕರ ರಾಶಿಯಲ್ಲಿ ನಕ್ಷತ್ರಗಳೂ ಅಷ್ಟೇನೂ ಪ್ರಕಾಶಮಾನವಾಗಿಲ್ಲ. ತಿಂಗಳ ಕೊನೆಗೆ ಶುಕ್ರ ಧನುರಾಶಿಯನ್ನು ಹಾದುಹೋಗುವ ಸಂದರ್ಭವನ್ನು ಉಪಯೋಗಿಸಿಕೊಂಡು ಸುತ್ತಲಿನ ನೆಬ್ಯುಲಾಗಳನ್ನು ನೋಡಬಹುದು. ಆದರೆ, ದುರ್ಬೀನು ದೂರದರ್ಶಕಗಳ ಮೂಲಕ ಬಹಳ ಪ್ರಕಾಶಮಾನವಾಗಿ ಕಾಣುವ ಶುಕ್ರ ಈ ಕ್ಷೀಣಕಾಯಗಳನ್ನು ಮುಚ್ಚಿಹಾಕಿಬಿಡಬಹುದು.


*ನವೆಂಬರ್ ೨ರ ಮುಸ್ಸಂಜೆ ಶುಕ್ರ, ಶನಿ ಮತ್ತು ಚಂದ್ರ*

**ಅತಿ ದೊಡ್ಡ ಚಂದ್ರ !**

ಈ ತಿಂಗಳಲ್ಲಿ ಹುಣ್ಣಿಮೆ ಎಂಬ ಘಟನೆ ೧೪ರಂದು ೧೯:೨೨ಕ್ಕೆ ನಡೆಯಲಿದೆ. ಅದಕ್ಕೆ ಕೇವಲ ಎರಡೂವರೆ ಗಂಟೆ ಮೊದಲು ಚಂದ್ರ–ಭೂಮಿ ನಡುವಿನ ದೂರ ಕನಿಷ್ಠವಾಗಿರುತ್ತದೆ. ಆದ್ದರಿಂದ ಈ ಹುಣ್ಣಿಮೆಯ ಚಂದ್ರ ಸಾಧಾರಣ ಗಾತ್ರಕ್ಕಿಂತ ದೊಡ್ಡದಾಗಿ ಕಾಣುತ್ತದೆ. ಕಡಲತೀರದ ಉಬ್ಬರ ಇಳಿತಗಳು ಗಮನಾರ್ಹವಾಗಿ ಹೆಚ್ಚಾಗುತ್ತವೆ.

ಉ
ಧ್ರುವ
ಕುಂತಿ
ಸುಯೋಧನ
ಪಾರ್ಥ
ದ್ರೌಪದಿ
ಭೀಮ
ವೀಣಾ
ರಾಜಹಂಸ
ಮೇಷ
ನಕುಲ
ಪೂ
ಗರುಡ
ಪ
ಮೀನ
ಕುಂಭ
ತಿಮಿಂಗಿಲ
ಮಕರ
ಮಂಗಳ
ಧನು
ಬಕ
ದ

ನವೆಂಬರ್ ೧೭ರಂದು ಸಿಂಹರಾಶಿಯಿಂದ ಹೊರಟಂತೆ ಕಾಣುವ ಲಿಯೋನಿಡ್ಸ್ ಉಲ್ಕಾವೃಷ್ಟಿ ಗರಿಷ್ಠ ಮುಟ್ಟಲಿದೆ. ಆದರೆ ಹುಣ್ಣಿಮೆಯ ಸಮೀಪದ ಚಂದ್ರನ ಬೆಳಕು, ಕ್ಷೀಣ ಉಲ್ಕೆಗಳನ್ನು ಕಾಣದಂತೆ ಮಾಡಬಹುದು. ಆದ್ದರಿಂದ ಉಲ್ಕೆಗಳನ್ನು ಹುಡುಕುತ್ತಾ ಕುಳಿತರೆ ಗಂಟೆಗೆ ೧೫–೨೦ ಕಂಡೀತು.

ಹುಣ್ಣಿಮೆಯ ದಿನ ಚಂದ್ರನ ಪಕ್ಕದಲ್ಲಿ ಕಾಣುವ ನಕ್ಷತ್ರ ಗುಚ್ಛವೇ ಕೃತ್ತಿಕಾ. ಆದರೆ ಅದೇ ರಾತ್ರಿ ಈ ಗುಚ್ಛವನ್ನು ಪತ್ತೆ ಮಾಡುವುದು ಕಷ್ಟವೇ ಆಗಬಹುದು. ಹುಣ್ಣಿಮೆಯ ಒಂದೆರಡು ದಿನಗಳ ನಂತರದಲ್ಲಿ ಸ್ಫುಟವಾಗಿ ಕಾಣುವುದು. ದುರ್ಬೀನಿನಿಂದ ನೋಡಿದಾಗ ಏಳು ನಕ್ಷತ್ರಗಳು ಕಾಣುವುವು.

೨ರಂದು ಸಂಜೆ ಶುಕ್ರದ ಪಕ್ಕದಲ್ಲಿಯೇ ಚಂದ್ರ ಕಾಣುವ ಅವಕಾಶ ಉಪಯೋಗಿಸಿಕೊಂಡು ಕ್ಯಾಮೆರಾ ಬಳಸಿ ಖಗೋಳ ಕಾಯಗಳ ಚಿತ್ರ ತೆಗೆಯಲು ಕಲಿಯಬಹುದು; ಇಂತಹುದೇ ಅವಕಾಶವನ್ನು ೨೦ರ ಮುಂಜಾವು ಗುರುಗ್ರಹ ಒದಗಿಸಲಿದೆ.

**ನವೆಂಬರ್ ತಿಂಗಳ ಖಗೋಳ ದಿನಚರಿ**

೨ ಶುಕ್ರ–ಶನಿ–ಚಂದ್ರ ಪುಟ್ಟ ಗುಂಪು*
೩ ಶುಕ್ರ–ಚಂದ್ರ ನಡುವೆ ಕನಿಷ್ಠ ಅಂತರ*
೬ ಮಂಗಳ–ಚಂದ್ರ ಜೋಡಿ*
೭ ಚಾಂದ್ರಮಾಸದ ಮೊದಲ ಪಾದ
೧೪ ಚಂದ್ರ–ಭೂಮಿ ನಡುವೆ ಕನಿಷ್ಠ ದೂರ ೧೬:೫೦ಕ್ಕೆ
ಹುಣ್ಣಿಮೆ ೧೯:೨೨ಕ್ಕೆ
೧೫ ಚಂದ್ರ–ರೋಹಿಣಿ ಜೋಡಿ* (ಆಚ್ಛಾದನೆ ಕಾಣುವುದಿಲ್ಲ)
೧೭ ಲಿಯೋನಿಡ್ಸ್ ಉಲ್ಕಾವೃಷ್ಟಿ*
೧೮ ಬುಧ–ಜ್ಯೇಷ್ಠಾ ಜೋಡಿ*
೨೧ ಚಾಂದ್ರ ಮಾಸದ ಕೊನೆಯ ಪಾದ
೨೪ ಬುಧ–ಶನಿ ಜೋಡಿ
೨೫ ಗುರು–ಚಂದ್ರ ಜೋಡಿ*
೨೭ ಚಂದ್ರ–ಭೂಮಿ ನಡುವೆ ಗರಿಷ್ಠ ದೂರ
೨೯ ಅಮಾವಾಸ್ಯೆ ೧೭:೪೮ಕ್ಕೆ
೩೦ ಶನಿ–ಚಂದ್ರ ಜೋಡಿ
(* ಛಾಯಾಗ್ರಹಣಕ್ಕೆ ಸದವಕಾಶ)

**ಡಾ॥ ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು – ೫೬೦ ೦೦೧

# ತ್ರಿವಳಿ ತಲಾಖ್

ತನ್ನ ಗಂಡ ತನ್ನೆದುರಿಗೇ ಮತ್ತೊಬ್ಬಳ ಪತಿಯಾದರೆ ಅಥವಾ ತನ್ನನ್ನು ತ್ರಿವಳಿ ತಲಾಖ್ ಮುಖಾಂತರ ಕೆಲವೇ ಕ್ಷಣಗಳಲ್ಲಿ ಕಾನೂನಾತ್ಮಕವಾಗಿ ವಿಚ್ಛೇದನಕ್ಕೆ ಒಳಪಡಿಸಿದರೆ ಯಾವ ಹೆಣ್ಣು ತಾನೇ ಸಂತೋಷವಾಗಿರುತ್ತಾಳೆಂದು ನಿಮಗನಿಸಿದೆ ಎಂದು ನಾನೊಮ್ಮೆ ಒಬ್ಬ ಮೌಲ್ವಿಯನ್ನು ಕೇಳಿದೆ. ಅದಕ್ಕೆ "ಅವಳು ಒಳ್ಳೆಯ ಮುಸಲ್ಮಾನ ಹೆಣ್ಣಾದರೆ ಸಂತೋಷವಾಗಿರುತ್ತಾಳೆ" ಎಂದು ಆತ ಉತ್ತರಿಸಿದ. ಈ ಪ್ರಮುಖ ವಿಚಾರದಲ್ಲಿ ಆರಂಭವಾಗುವ ಚರ್ಚೆಗಳು ಹೀಗೆ ಈ ಹಂತದಲ್ಲೇ ಅಂತ್ಯ ಕಾಣುತ್ತವೆ. ಕುರಾನ್‌ನ ವಿಚಾರಧಾರೆಗೆ ಎಷ್ಟೇ ವ್ಯತಿರಿಕ್ತವಾಗಿದ್ದರೂ ಮೌಲ್ವಿಗಳ ತೀರ್ಮಾನಗಳಿಗೆ ಬದ್ಧನಾಗಿದ್ದರೆ ಅಂತಹವನು ಒಳ್ಳೆಯ ಮತ್ತು ಶ್ರದ್ಧಾವಂತ ಮುಸಲ್ಮಾನ ಎನಿಸಿಕೊಳ್ಳುತ್ತಾನೆ. ಪ್ರತಿ ಬಾರಿ ತಲಾಖ್ ಹೇಳಿದಾಗಲೂ ಒಂದು ತಿಂಗಳು ಮತ್ತು ಹತ್ತು ದಿನಗಳ ಹಾಗೂ ಮೂರನೆ ಬಾರಿ ತಲಾಖ್ ಉಚ್ಚರಿಸಿದ ನಂತರ ಮೂರು ತಿಂಗಳು ಮತ್ತು ಹತ್ತು ದಿನಗಳ ಕಾಲಾವಕಾಶವನ್ನು ನೀಡಬೇಕೆಂದು ಕುರಾನ್ ಸ್ಪಷ್ಟವಾಗಿ ನಿರ್ದೇಶಿಸುತ್ತದೆಂದು ಮೌಲ್ವಿಗಳೂ ಒಪ್ಪುತ್ತಾರೆ. ಆದರೆ ಈಗ ಇದನ್ನು ಜಾರಿಗೊಳಿಸಿದರೆ ಮುಸ್ಲಿಂ ಪುರುಷರು ಅಂತಿಮ ವಿಚ್ಛೇದನಕ್ಕಾಗಿ ಆರು ತಿಂಗಳು ಕಾಯುವ ಬದಲು ತಮ್ಮ ಮಡದಿಯರನ್ನು ಕೊಲೆಗೈಯ್ಯುತ್ತಾರೆಂದು ಅಖಿಲ ಭಾರತ ಮುಸ್ಲಿಂ ವೈಯಕ್ತಿಕ ಕಾನೂನು ಮಂಡಳಿ ಹೇಳುತ್ತದೆ. ಹಾಗಾದರೆ ಸುನ್ನಿ ಮುಸ್ಲಿಮರು ತಮ್ಮ ಪತ್ನಿಯರಿಂದ ದೂರವಾಗಬೇಕೆಂದು ಅಷ್ಟೊಂದು ಹತಾಶರಾಗಿದ್ದಾರೆಯೇ ? ಅಥವಾ ನ್ಯಾಯಕ್ಕಾಗಿ, ಘನತೆಯ ಬದುಕಿಗಾಗಿ ಆಗ್ರಹಿಸಿ ಬೀದಿಯ ಮೇಲೆ ಹೋರಾಟ ನಡೆಸುತ್ತಿರುವ ಮಹಿಳೆಯರಿಗೆ, "ಪ್ರತಿರೋಧ ಮತ್ತು ಪ್ರತಿಭಟನಾ ಪ್ರದರ್ಶನಗಳನ್ನು ನಿಲ್ಲಿಸಿ ಇಲ್ಲವೇ ನೀವು ಕೊಲೆಯಾಗುವಿರಿ" ಎಂದು ಅಖಿಲ ಭಾರತ ಮುಸ್ಲಿಂ ವೈಯಕ್ತಿಕ ಕಾನೂನು ಮಂಡಳಿ ಬೆದರಿಕೆ ಒಡ್ಡುತ್ತಿದೆಯೇ ?

**ಮೂಲ : ನೂರ್ ಝಾಹೀರ್**
**ಕನ್ನಡಕ್ಕೆ : ಜ್ಯೋತಿ ಎ.**

ಆಗಾಗ್ಗೆ ಕೆಲ ವರ್ಷಗಳಿಗೊಮ್ಮೆ ಮಹಿಳಾ ಹಕ್ಕುಗಳಿಗೆ ಸಂಬಂಧಿಸಿದಂತೆ ತ್ರಿವಳಿ ತಲಾಖ್‌ನ ಪ್ರಶ್ನೆ ಚರ್ಚೆಗೆ ಬರುತ್ತದೆ. ವಿಚ್ಛೇದನ ಪ್ರಕ್ರಿಯೆ ಹೇಗೆ ನಡೆಯಬೇಕೆಂಬುದರ ಬಗ್ಗೆ ಕುರಾನ್ ಸ್ಪಷ್ಟವಾಗಿ ಹೇಳಿದ್ದರೂ ರೂಢಿಗತ ಆಚರಣೆಗಳಿಂದ ಹೊರಬರಲು ಮೌಲ್ವಿಗಳು ಒಪ್ಪುತ್ತಿಲ್ಲ. ಇದರ ಪರಿಣಾಮ ಸಾಮಾನ್ಯವಾಗಿ ತ್ರಿವಳಿ ತಲಾಖ್ ಮುಖಾಂತರ ಕೆಲವೇ ಕ್ಷಣಗಳಲ್ಲಿ ಕಾನೂನಾತ್ಮಕವಾಗಿ ವಿಚ್ಛೇದನಕ್ಕೆ ಒಳಗಾದ ಮಹಿಳೆಯರು ನ್ಯಾಯಕ್ಕಾಗಿ ಸರ್ವೋಚ್ಚ ನ್ಯಾಯಾಲಯದ ಮೊರೆ ಹೋಗುತ್ತಿದ್ದಾರೆ. ಯಾರು ಫಲಾನುಭವಿಯಾಗಬೇಕು, ಯಾರು ರಕ್ಷಣೆಗೊಳಗಾಗಬೇಕು, ಯಾರು ಸೋಲುತ್ತಾರೆ ಇತ್ಯಾದಿ ವಿಷಯಗಳನ್ನು ಕುರಿತ ವಾದವಿವಾದಗಳು ಸಹಜವಾಗಿಯೇ ಆನಂತರ ಆರಂಭವಾಗುತ್ತದೆ. ಈ ಕುರಿತು ತಮ್ಮ ಚಿಂತನೆಗಳ ಪುನರ್ವಿಮರ್ಶೆ ಮಾಡುವ ಬದಲು ಮುಸ್ಲಿಂ ಪುರೋಹಿತಶಾಹಿಗಳು (ಮುಲ್ಲಾಗಳು) ಮತ್ತಷ್ಟು ಪ್ರತಿರೋಧವನ್ನೇ ಪ್ರದರ್ಶಿಸುತ್ತಿದ್ದಾರೆ. ಅವರು ಮಹಿಳೆಯರ ವಿರುದ್ಧ ದಾಳಿ ಮಾಡುತ್ತಾ ಸರ್ಕಾರಗಳನ್ನು ಅಲ್ಪಸಂಖ್ಯಾತರ ವಿರುದ್ಧ ಎಂದು ಬಣ್ಣಿಸಿ ಸಂವಿಧಾನದ ವೈಯಕ್ತಿಕ ಕಾನೂನಿನ ಹಕ್ಕನ್ನು ಉಲ್ಲೇಖಿಸಿದಾಗ ಎಲ್ಲವನ್ನೂ ವಾಪಸ್ ಮಗುಚಿ ಮುಚ್ಚಿಹಾಕಿಬಿಡಲಾಗುತ್ತದೆ. ಹಿಂದೆಲ್ಲಾ ನಡೆದಂತೆ ಈಗಲೂ ಪುನರಾವರ್ತನೆಯಾಗದಿರಲಿ ಎಂದು ಆಶಿಸೋಣ.

ನಾನಿಲ್ಲಿ ಒಂದಂಶ ಸ್ಪಷ್ಟಪಡಿಸುತ್ತೇನೆ. ಈಗ ನ್ಯಾಯಾಲಯಗಳ ಮೆಟ್ಟಿಲೇರುತ್ತಿರುವುದು ಅಲ್ಪಸಂಖ್ಯಾತ ಸಮುದಾಯಗಳಿಗೆ ಸೇರಿದ ಮಹಿಳೆಯರು. ತಮಗೆ ಸಂಬಂಧಿಸಿದ ವೈಯಕ್ತಿಕ ಕಾನೂನುಗಳು ನ್ಯಾಯಯುತವಾಗಿಲ್ಲವೆಂದು, ಭಾರತದ ಸಂವಿಧಾನವು ತನ್ನ ಪೀಠಿಕೆಯಲ್ಲೇ ಸಮಾನತೆಯನ್ನು ಖಾತರಿಗೊಳಿಸುವಾಗ ಪ್ರಜಾಸತ್ತಾತ್ಮಕ ದೇಶದಲ್ಲಿ ವಿವಿಧ ಸಮುದಾಯಗಳಿಗೆ ಸೇರಿದ ಪ್ರಜೆಗಳ ನಡುವೆ ಕಾನೂನಿನ ಕಾರಣದಿಂದಾಗಿ ತಾರತಮ್ಯ ಏರ್ಪಡಬಾರದೆಂಬುದು ಈ ಮಹಿಳೆಯರಿಗೆ ಅರಿವಾಗಿದೆ. ಎಲ್ಲಾ ವೈಯಕ್ತಿಕ ಕಾನೂನುಗಳಿಂದಲೂ ಒಳ್ಳೆಯ ಮತ್ತು ನ್ಯಾಯಸಮ್ಮತವಾದ ಅಂಶಗಳನ್ನು ಪಡೆದರೆ ತಪ್ಪೇನಿಲ್ಲ. ಹಾಗೆ ಮಾಡಿದರೆ ಬಹುಪತ್ನಿತ್ವ ಮತ್ತು ಬೇಕಾಬಿಟ್ಟಿ ನಡೆಯುವ ವಿಚ್ಛೇದನಗಳು ಕಾನೂನುಬಾಹಿರಗೊಳ್ಳುತ್ತವೆ. ಇದು ಅಲಕ್ಷ್ಯ ಮಾಡುವಂತಹ ಅಥವಾ ಗಂಭೀರವಾದ ವಿಚಾರವಲ್ಲವೆಂದು ತಳ್ಳಿಹಾಕುವಂತಹ ಸಣ್ಣ ವಿಷಯವೇನಲ್ಲ. ಈ ಅಂಶಗಳ ಮೇಲೆ ಗಮನ ಹರಿಸುವುದೆಂದ ಮಾತ್ರಕ್ಕೆ 'ಮುಸ್ಲಿಮರನ್ನು ಹಿಂದುತ್ವದ ಕಾರ್ಯಸೂಚಿಯಲ್ಲಿ ಶಿಸ್ತುಗೊಳಪಡಿಸುವ' ಗುರಿಯನ್ನು ಹೊಂದಬೇಕಿಲ್ಲ. ಮುಸ್ಲಿಮರನ್ನು ಹೊಡೆಯುವ ಬಡಿಗೆಯನ್ನಾಗಿ ಇದನ್ನು ಬಳಸುವುದಲ್ಲ. ಆದರೆ ತ್ರಿವಳಿ ತಲಾಖ್‌ನ ನಿಷೇಧವು ಬಹುಕಾಲದಿಂದ ಚರ್ಚೆ ನಡೆಯಬೇಕಿದ್ದ ವಿಚಾರವಾಗಿದೆ.

ಹಿಂದೂ ಅವಿಭಜಿತ ಕುಟುಂಬಗಳನ್ನು ಎತ್ತಿ ಹಿಡಿಯುವ ಹಿಂದೂ ವೈಯಕ್ತಿಕ ಕಾನೂನಿಗೆ ವ್ಯತಿರಿಕ್ತವಾಗಿ ೧೯೩೦ರಿಂದಲೂ ಮುಸ್ಲಿಮ್ ವೈಯಕ್ತಿಕ ಕಾನೂನುಗಳಲ್ಲಿ ವೈಯಕ್ತಿಕ ಆಸ್ತಿ ಹಕ್ಕನ್ನು ನೀಡಲಾಗಿರುವುದು ನಿಜವೇ. ಆದ ಕಾರಣ ಅದನ್ನು ಸ್ವಲ್ಪ ಮಟ್ಟಿಗೆ ಆಧುನಿಕವೆಂದು ಪರಿಗಣಿಸಲ್ಪಟ್ಟರೂ ವೈಯಕ್ತಿಕ ಕಾನೂನುಗಳೆಂದರೆ ಕೇವಲ ವ್ಯಕ್ತಿಯ ಅಥವಾ ಕುಟುಂಬದ ಆಸ್ತಿಗೆ ಸಂಬಂಧಿಸಿದ್ದಲ್ಲ. ಸಾಂಪ್ರದಾಯಿಕ ಹಿಂದೂ ಕಾನೂನುಗಳನ್ನು ಹಿಂದುಳಿದವೆಂದು ಮತ್ತು ಅವುಗಳಿಗೆ ಆಧುನಿಕತೆಯ ಅಗತ್ಯದ ಬಗ್ಗೆ ಆಲೋಚಿಸುವುದು ಸರಿಯೇ ಆಗಿದ್ದರೂ ಹಿಂದೂಗಳು ಅಂತಹ ಚಳವಳಿಯನ್ನು ಮುನ್ನಡೆಯಲು ಅವಕಾಶ ನೀಡಿದ್ದಾರೆ. ಆದರೆ ಮುಸ್ಲಿಮ್ ವೈಯಕ್ತಿಕ ಕಾನೂನುಗಳು ಜಡವಾಗಿ ಹಿಂದೆ ಸರಿದಿವೆ.

ಇಂದಿನ ದಿನಗಳಲ್ಲಿ ಎಲ್ಲಾ ವಿವಾಹಗಳೂ ಒಂದು ನಾಗರಿಕ ಒಪ್ಪಂದವಾಗಬೇಕು. ಅಂದರೆ ಇದರ ಉದ್ದೇಶ ಎಲ್ಲಾ ಮದುವೆಗಳನ್ನೂ ನೋಂದಣಿಗೊಳಿಸಬೇಕು. ಇದನ್ನು ಮುಸ್ಲಿಮ್ ಪುರೋಹಿತಶಾಹಿಗಳು ವಿರೋಧಿಸುತ್ತಿದ್ದಾರೆ. ಮುಸ್ಲಿಮ್ ವೈಯಕ್ತಿಕ ಕಾನೂನಿನಲ್ಲಿರುವಂತೆ ಮದುವೆಯ ಸಂದರ್ಭದಲ್ಲಿ ಪತ್ನಿಗೆ ಪತಿಯ ಕುಟುಂಬದಿಂದ ನೀಡುವಂತಹ ಮೆಹರ್ ಕೇವಲ ಪತ್ನಿಯ ಆಸ್ತಿಯಾಗಿರುತ್ತದೆ ಮತ್ತು ವಿಚ್ಛೇದನ ನೀಡುವ ಸಂದರ್ಭದಲ್ಲಿಯೂ ಅವಳದ್ದೇ ಆಗಿ ಉಳಿಯುವುದೆಂಬ ಪರಿಕಲ್ಪನೆಯನ್ನು ಹಲವು ಮಹಿಳಾವಾದಿಗಳು ಪ್ರಶಂಸಿಸುತ್ತಾರೆ. ಆದರೆ ವಾಸ್ತವದಲ್ಲಿ ಇದು ಬಹುತೇಕ ನಡೆಯುವುದೇ ಇಲ್ಲ. ಸಾಮಾನ್ಯವಾಗಿ ನಿಖಾ (ವಿವಾಹದ ಮುಹೂರ್ತ)ದ ಸಂದರ್ಭದಲ್ಲಿ ನೀಡಬೇಕಾದ ಮೆಹರ್‌ಅನ್ನು ವಿಚ್ಛೇದನದ ಸಮಯದಲ್ಲಿ ನೀಡುವುದಾಗಿ ಹೇಳಿ ಮುಂದೂಡಲಾಗುತ್ತದೆ. ಇನ್ನು ವಿಚ್ಛೇದನವನ್ನು ನೀಡುವವನು

ಪುರುಷಪ್ರಧಾನ ಸಮಾಜವು ವಿವಾಹದ ಮೂಲಕ ಮಹಿಳೆಗೆ ಭದ್ರತೆ ದೊರೆಯುತ್ತದೆ ಎಂದು ನೀಡಿರುವ ಆಶ್ವಾಸನೆಯು ಇಂದು ಹುಸಿಯಾಗಿರುವುದನ್ನು ಕಾಣಬಹುದು. ಸಾಮಾನ್ಯವಾಗಿ ಬಹುತೇಕ ಮಹಿಳೆಯರಿಗೆ ಕೌಶಲ್ಯರಹಿತ ದುಡಿಮೆಯ ತಮ್ಮ ಸಾಮರ್ಥ್ಯವೇ ಸಕಲವೂ ಆಗಿದೆ. ಆದ್ದರಿಂದ ಹೆಣ್ಣುಮಕ್ಕಳಿಗೆ ಓದುವ ಮತ್ತು ಮದುವೆಯ ಮುನ್ನವೇ ಕೌಶಲ್ಯಗಳನ್ನು ಕಲಿಯುವ ಹಕ್ಕನ್ನು ನೀಡುವ ಒಂದು ವ್ಯವಸ್ಥೆಯತ್ತ ನಾವು ಮುನ್ನಡೆಯಬೇಕು. ಆದರೆ ಈವರೆಗೂ ಇದನ್ನು ಮುಸ್ಲಿಮ್ ಪುರೋಹಿತಶಾಹಿಗಳು ವಿರೋಧಿಸುತ್ತಲೇ ಬಂದಿದ್ದಾರೆ. ಕೇರಳದಲ್ಲಿ ಮೌಲ್ವಿಗಳನ್ನು ಸಂತೈಸುವ ಸಲುವಾಗಿ ಕೆಲವರ್ಷಗಳ ಹಿಂದೆ ರಾಜ್ಯ ಸರ್ಕಾರವು ಮುಸ್ಲಿಮ್ ಹೆಣ್ಣುಮಕ್ಕಳ ವಿವಾಹ ವಯಸ್ಸನ್ನು ೧೫ ವರ್ಷಗಳಿಗೆ ಇಳಿಸಿತ್ತು. ಹೀಗಾದರೆ ಮುಸ್ಲಿಮ್ ಹೆಣ್ಣುಮಕ್ಕಳು ಸುಶಿಕ್ಷಿತರಾಗಿ ತರಬೇತಿ ಪಡೆದು ಆರ್ಥಿಕವಾಗಿ ಸ್ವತಂತ್ರರಾಗುವುದಾದರೂ ಹೇಗೆ ?

ಪತಿಯೇ ಆಗಿರುತ್ತಾನೆ. ಮೆಹರ್ ಮೊತ್ತದ ಮೇಲಿನ ಬಡ್ಡಿಯನ್ನು ಲೆಕ್ಕ ಹಾಕಲಾಗುವುದಿಲ್ಲ. ಹಾಗಾಗಿ ವಿವಾಹದ ಸಮಯದಲ್ಲಿ ಐವತ್ತು ಸಾವಿರಗಳನ್ನು ನೀಡುವುದಾಗಿ ಒಪ್ಪಿದ್ದರೆ ಇಪ್ಪತ್ತು ವರ್ಷಗಳು ಕಳೆದ ನಂತರವೂ ವಿಚ್ಛೇದನವಾದಾಗ ಅದು ಐವತ್ತೇ ಸಾವಿರಗಳಾಗಿರುತ್ತವೆ. ಹಾಗೊಮ್ಮೆ ಪತ್ನಿಯು ವಿಚ್ಛೇದನ ಬಯಸಿದರೆ (ಖುಲಾ ಎಂದು ಕರೆಯಲಾಗುತ್ತದೆ), ಅವಳಿಗೆ ಮೆಹರ್ ಹಣವು ಸಿಗುವುದಿಲ್ಲ ಹಾಗೂ ಅವಳೇನಾದರೂ ವಿವಾಹದ ಸಂದರ್ಭದಲ್ಲಿ ಮೆಹರ್ ಪಡೆದಿದ್ದರೆ ಅದನ್ನು ಪತಿಗೆ ಹಿಂದಿರುಗಿಸಬೇಕಾಗುತ್ತದೆ. ಆದ್ದರಿಂದ ತನ್ನ ಜೀವಮಾನವೆಲ್ಲಾ ಕುಟುಂಬ–ಮನೆಗಾಗಿ ದುಡಿದಿರುವ, ಮಕ್ಕಳನ್ನು ಹೆತ್ತು ಹೊತ್ತು ಸಾಕಿ ಸಲಹಿರುವ, ತನ್ನ ಕುಟುಂಬಕ್ಕಾಗಿ ಸೇವೆ ಸಲ್ಲಿಸಿರುವ ಮುಸ್ಲಿಮ್ ಮಹಿಳೆಗೆ ಕುಟುಂಬದಲ್ಲಿನ ಹಕ್ಕಾದರೂ ಏನು ? ಒಪ್ಪೊತ್ತಿನ ಊಟಕ್ಕಾಗಿ, ಮೈಮುಚ್ಚುವ ಬಟ್ಟೆಗಾಗಿ, ತಲೆ ಮೇಲಿನ ಸೂರಿಗಾಗಿ ಅವಳು ಮದುವೆಯಾಗಿದ್ದಳೇ ? ಕಿರುಕುಳಕ್ಕೊಳಗಾದಾಗ, ಸಂಬಂಧಗಳು ಹದಗೆಟ್ಟಾಗ ಮುಸ್ಲಿಮ್ ಮಹಿಳೆಯೊಬ್ಬಳು ಖುಲಾ ಬಯಸಿದರೆ, ಅವಳು ಬಹುತೇಕ ತನ್ನ ಏಕೈಕ ಆರ್ಥಿಕ ಬೆಂಬಲದ ಮೂಲವಾದ ಮೆಹರ್‌ಅನ್ನು ತ್ಯಜಿಸಬೇಕು ! ಹೆಚ್ಚಿನ ಸಂದರ್ಭಗಳಲ್ಲಿ ಮಹಿಳೆಯರು ಪಡೆದಿರುವ ಮೆಹರ್‌ಗಿಂತ ಅಧಿಕ ಮೊತ್ತದ ಲಂಚ ನೀಡಿ ಪುರುಷರನ್ನು 'ತಲಾಖ್' ಹೇಳಲು ಒಪ್ಪಿಸಬೇಕಾಗುತ್ತದೆ. ಏಕೆಂದರೆ ಇಸ್ಲಾಮ್‌ನಲ್ಲಿ ಪತಿ ಅಥವಾ ಪತ್ನಿ ಯಾರೇ ವಿಚ್ಛೇದನ ಬಯಸಿದರೂ ಪುರುಷನೇ 'ತಲಾಖ್' ಉಚ್ಚರಿಸಬೇಕಾಗುತ್ತದೆ. ಓರ್ವ ಹೆಣ್ಣು ತಮ್ಮನ್ನು ಬಿಟ್ಟುಹೋಗಲು ಇಚ್ಛಿಸುವಳೆಂದು ಬಹಳಷ್ಟು ಪುರುಷರು ಒಪ್ಪಲು ಬಯಸದೇ 'ತಲಾಖ್' ಹೇಳಲು ನಿರಾಕರಿಸುತ್ತಾರೆ. ಆಗ ಮಹಿಳೆಯು ಮೌಲ್ವಿಯನ್ನು ಕಂಡಾಗ ಆತ ಆ ನಿರ್ದಿಷ್ಟ ಜನಾಂಗಕ್ಕೆ ಸಂಬಂಧಿಸಿದ ನ್ಯಾಯಶಾಸ್ತ್ರ ವಿಭಾಗವನ್ನು ಸಂಪರ್ಕಿಸುವನು. ಅಲ್ಲಿ ಆಕೆ ವಿಚ್ಛೇದನ ಬಯಸಲು ಕಾರಣ ಕೇಳಲಾಗಿ ಅದು ಸಮಂಜಸವಾಗಿದೆಯೇ ಎಂದು ಅಳೆದು ತೂಗಿ ತೀರ್ಮಾನಿಸಲಾಗುತ್ತದೆ. ಸಾಮಾನ್ಯವಾಗಿ ಮಹಿಳೆಯು ಏಕಪಕ್ಷೀಯವಾಗಿ ವಿಚ್ಛೇದನ ಪಡೆಯಬೇಕಾದರೆ ಹಲವು ವರ್ಷಗಳೇ ಕಳೆಯುತ್ತವೆ.

ಆದರೆ ಪುರುಷನಾದವನು ಫೋನ್, ಎಸ್‌ಎಮ್‌ಎಸ್, ಇ–ಮೇಲ್ ಅಥವಾ ಸ್ಕೈಪ್ ಮುಖಾಂತರವಾದರೂ ಸರಿಯೇ, 'ತಲಾಖ್' ಎಂದು ಮೂರು ಬಾರಿ ಉಚ್ಚರಿಸಿದರೆ ಸಾಕು, ವಿಚ್ಛೇದನ ದೊರೆಯುತ್ತದೆ. ಇಂತಹ ವಿಚ್ಛೇದನಗಳು ಪುನರ್ವಿಮರ್ಶೆಗೆ, ಮಾತುಕತೆಗಳಿಗೆ ಅಥವಾ ಸಂಧಾನಕ್ಕಾಗಲೀ ಯಾವ ಅವಕಾಶವನ್ನೂ ನೀಡುವುದಿಲ್ಲ. ಅಲ್ಲದೆ ಮಹಿಳೆಗೆ ನಡುವೆ ಕೆಲ ತಿಂಗಳುಗಳ ಕಾಲ ಯಾವ ನಿರ್ವಹಣಾ ಭತ್ಯೆಯನ್ನೂ ಸಹ ನೀಡಲಾಗುವುದಿಲ್ಲ. ಈ ಏಕಪಕ್ಷೀಯ ವಿಚ್ಛೇದನವನ್ನು ಪ್ರಶ್ನಿಸಲು ಯಾವುದೇ ವ್ಯವಸ್ಥೆ ಇರುವುದಿಲ್ಲ ಎಂಬುದು ಅತ್ಯಂತ ಪ್ರಮುಖವಾದ ವಿಚಾರ. ಪತಿಯು ತನ್ನ ನಿರ್ಧಾರಕ್ಕೆ ಕಾರಣ ತಿಳಿಸದಿದ್ದರೂ ಪತ್ನಿಯು ಅದನ್ನು ಮಾತಿಲ್ಲದೆ ಒಪ್ಪಿಕೊಳ್ಳಲೇಬೇಕು.

## ಸಮೇತನಹಳ್ಳಿ ರಾಮರಾಯರ ಬಹುಮಾನ

ಬೆಂಗಳೂರಿನ ಸಿಂಧು ಭೈರವಿ ಕುಟೀರದ ಪರವಾಗಿ ಅದರ ಅಧ್ಯಕ್ಷರಾದ ಶ್ರೀಮತಿ. ಭಾರತೀ ಕಾಸರಗೋಡು ಅವರು ಆಗಸ್ಟ್ ೨೦೧೫ರಿಂದ ಜುಲೈ ೨೦೧೬ರವರೆಗಿನ 'ಹೊಸತು' ಸಂಚಿಕೆಗಳಲ್ಲಿ ಪ್ರಕಟವಾದ ಎರಡು ಬರಹಗಳಿಗೆ ತಲಾ ರೂ. ೫೦೦೦/– ಬಹುಮಾನ ನೀಡುತ್ತಿದ್ದಾರೆ. ಅವರಿಗೆ ವಂದನೆ ಸಲ್ಲಿಸುತ್ತಾ ಎರಡು ಬಹುಮಾನಗಳನ್ನು ಘೋಷಿಸಲು 'ಹೊಸತು' ಹರ್ಷಿಸುತ್ತದೆ :

ಅ. ಮಹಿಳೆಯರು ಬರೆದ ಉತ್ತಮ ಸಣ್ಣಕತೆ

**ಒಂದಿಷ್ಟು ಕ್ಷಮೆಯಿರಲಿ, ಗೆಳತಿ**

*– ಶ್ರೀಮತಿ ಕುಸುಮಾ ಶಾನಭಾಗ (ಪ್ರ. ಸೆಪ್ಟೆಂಬರ್ ೨೦೧೫)*

ಆ. ಪುರುಷರು ಬರೆದ ಉತ್ತಮ ಮಹಿಳಾಪರ ಲೇಖನ

**ದೈಹಿಕ ಮಿತಿಯನ್ನು ಮೆಟ್ಟಿನಿಂತ ಛಲಗಾತಿ ಡಾ॥ ಮಹಾಜಬೀನ್**

*– ಶ್ರೀ ಎಸ್. ನಾಗರಾಜು, (ಪ್ರ. ಫೆಬ್ರವರಿ ೨೦೧೬)*

ಸುಮಾರು ೭೦ರ ವಯೋವೃದ್ಧೆ ಶಾಬಾನು ಜೀವನಾಂಶಕ್ಕೆ ಮೊರೆ ಹೋಗಿದ್ದನ್ನು ನೆನಪಿಸಿಕೊಳ್ಳೋಣ. ಮೂವತ್ತರ ಹರೆಯದಲ್ಲಿ ವಿಚ್ಛೇದಿತಳಾದ ಮಹಿಳೆಗೆ ಕೆಲವು ಸಾವಿರಗಳ ಮೆಹರ್ ಎಷ್ಟು ದಿನ ತಾನೇ ಸಹಾಯಕ್ಕೆ ಬಂದೀತು ? ಶಾಬಾನು ಜೀವಮಾನವೆಲ್ಲಾ ದುಡಿದು ಅಂತಿಮವಾಗಿ ತನ್ನ ಸವೆದ ಮೂಳೆಗಳು ಶ್ರಮದ ನೋವನ್ನು ಸಹಿಸಲಾರದೆ ಹೋದಾಗ ನ್ಯಾಯಾಲಯದ ಕದ ತಟ್ಟಿ ಜೀವನಾಂಶದ ಮೊರೆ ಹೋದದ್ದು.

ಆದಾಗ್ಯೂ ಒಂದೇ ಬಾರಿಗೆ ತ್ರಿವಳಿ ತಲಾಖ್ ಹೇಳುವ ಕ್ರಿಯೆಯ ನಿಷೇಧಕ್ಕಾಗಿ ನಡೆಯುತ್ತಿರುವ ಆಗ್ರಹವು ವಿಚ್ಛೇದನಕ್ಕೆ ಸಂಬಂಧಿಸಿದ ವಿಷಯಗಳಲ್ಲಿ ಒಂದು ಭಾಗ ಮಾತ್ರ. ಮುಸ್ಲಿಮ್ ಮಹಿಳೆಯರು ಪತಿಯನ್ನು ವಿಚ್ಛೇದನ ಮಾಡುವ ಸಮಾನ ಹಕ್ಕುಗಳಿಗೂ ಒತ್ತಾಯಿಸಬೇಕು. ಒಂದು ಸಂಬಂಧ ಸಮರ್ಪಕವಾಗಿ ಕೆಲಸ ಮಾಡುತ್ತಿಲ್ಲವೆಂದಾದಾಗ ಅದಕ್ಕೆ ಆದಷ್ಟು ಬೇಗನೇ ಮುಕ್ತಾಯ ಹೇಳುವುದು ಸೂಕ್ತ. ಆದ್ದರಿಂದ ಮಹಿಳೆಯರೂ ಕೂಡ ಮೂರು ಬಾರಿ 'ತಲಾಖ್' ಹೇಳುವ ಹಕ್ಕು ಪಡೆಯಲಿ. ನಿಖಾ ಸಮಯದಲ್ಲಿ ಮೆಹರ್‌ಅನ್ನು ನೀಡಬೇಕು ಮತ್ತು ಅದನ್ನು ಹಿಂಪಡೆಯಬಾರದು. ಶರಿಯಾ ಕಾನೂನಿನ ಪ್ರಕಾರ ಒಬ್ಬ ಪುರುಷನ ಎಲ್ಲಾ ಪತ್ನಿಯರಿಗೂ ಸಮಾನ ಹಕ್ಕುಗಳಿದ್ದು ಪತಿಗೆ ಅವರೆಲ್ಲರ ಮೇಲೆ ಜವಾಬ್ದಾರಿ ಇದೆ ಎನ್ನುತ್ತ ಬಹುಪತ್ನಿತ್ವವನ್ನು ನಿಷೇಧಿಸಿದರೆ ಎರಡನೆ ಮತ್ತು ಇತರ ಎಲ್ಲಾ ಮಡದಿಯರೂ ಕಾನೂನಾತ್ಮಕ ಹಕ್ಕುಗಳಿಂದ ವಂಚಿತರಾಗುವರೆಂದು ಅಲ್ಪಸಂಖ್ಯಾತರ ವೈಯಕ್ತಿಕ ಕಾನೂನುಗಳ ಬೆಂಬಲಿಗರನೇಕರು ಹೇಳುತ್ತಾರೆ. ಮತ್ತೊಮ್ಮೆ ಬೇರೆ ಹೆಣ್ಣನ್ನು ಪ್ರೀತಿಸಿ ವಿವಾಹವಾಗಬೇಡ ಎಂದು ಪುರುಷನಿಗೆ ಯಾರೂ ಹೇಳುತ್ತಿಲ್ಲ. ಆದರೆ ಮೊದಲನೆ ಹೆಂಡತಿಗೆ ವಿಚ್ಛೇದನ ನೀಡಿ ಆಕೆಗೆ ಮತ್ತವಳ ಮಕ್ಕಳಿಗೆ ಜೀವನಾಂಶ ನೀಡಿ ನಂತರ ಮರುಮದುವೆಯಾಗಲಿ. ಪುರುಷನು ಇಬ್ಬರನ್ನೂ ತನ್ನ ಜೊತೆಗೆ ಇರಿಸಿಕೊಳ್ಳುತ್ತಾನೆ. ಏಕೆಂದರೆ ಅವನಿಗೆ ಮೆಹರ್ ನೀಡಲು ಮನಸ್ಸಿರುವುದಿಲ್ಲ ಮತ್ತು ಮೊದಲನೆಯ ಪತ್ನಿಯನ್ನು ಕೂಲಿರಹಿತ ಆಳನ್ನಾಗಿಸಿಕೊಳ್ಳಬಹುದು. ಹೀಗೆ ಒಬ್ಬಳು ಸೇವೆ ಮಾಡಲು ಮತ್ತೊಬ್ಬಳು ಹಾಸಿಗೆ ಹಂಚಿಕೊಳ್ಳಲು. ಇದು ಇಸ್ಲಾಮ್‌ನಲ್ಲಿ ಸ್ವೀಕಾರಾರ್ಹವಲ್ಲ.

ಪುರುಷಪ್ರಧಾನ ಸಮಾಜವು ವಿವಾಹದ ಮೂಲಕ ಮಹಿಳೆಗೆ ಭದ್ರತೆ ದೊರೆಯುತ್ತದೆ ಎಂದು ನೀಡಿರುವ ಆಶ್ವಾಸನೆಯು ಇಂದು ಹುಸಿಯಾಗಿರುವುದನ್ನು ಕಾಣಬಹುದು. ಸಾಮಾನ್ಯವಾಗಿ ಬಹುತೇಕ ಮಹಿಳೆಯರಿಗೆ ಕೌಶಲ್ಯರಹಿತ ದುಡಿಮೆಯ ತಮ್ಮ ಸಾಮರ್ಥ್ಯವೇ ಸಕಲವೂ ಆಗಿದೆ. ಆದ್ದರಿಂದ ಹೆಣ್ಣುಮಕ್ಕಳಿಗೆ ಓದುವ ಮತ್ತು ಮದುವೆಯ ಮುನ್ನವೇ ಕೌಶಲ್ಯಗಳನ್ನು ಕಲಿಯುವ ಹಕ್ಕನ್ನು ನೀಡುವ ಒಂದು ವ್ಯವಸ್ಥೆಯತ್ತ ನಾವು ಮುನ್ನಡೆಯಬೇಕು. ಆದರೆ ಈವರೆಗೂ ಇದನ್ನು ಮುಸ್ಲಿಮ್ ಪುರೋಹಿತಶಾಹಿಗಳು ವಿರೋಧಿಸುತ್ತಲೇ ಬಂದಿದ್ದಾರೆ. ಕೇರಳದಲ್ಲಿ ಮೌಲ್ವಿಗಳನ್ನು ಸಂತೈಸುವ ಸಲುವಾಗಿ ಕೆಲವರ್ಷಗಳ ಹಿಂದೆ ರಾಜ್ಯ ಸರ್ಕಾರವು ಮುಸ್ಲಿಮ್ ಹೆಣ್ಣುಮಕ್ಕಳ ವಿವಾಹ ವಯಸ್ಸನ್ನು ೧೫ ವರ್ಷಗಳಿಗೆ ಇಳಿಸಿತ್ತು. ಹೀಗಾದರೆ ಮುಸ್ಲಿಮ್ ಹೆಣ್ಣುಮಕ್ಕಳು ಸುಶಿಕ್ಷಿತರಾಗಿ ತರಬೇತಿ ಪಡೆದು ಆರ್ಥಿಕವಾಗಿ ಸ್ವತಂತ್ರರಾಗುವುದಾದರೂ ಹೇಗೆ ?

ಮೊದಲನೆಯದಾಗಿ ಸರ್ವೋಚ್ಚ ನ್ಯಾಯಾಲಯದ ತೀರ್ಪು ಮೌಲ್ವಿಗಳು ಅಥವಾ ಸಮುದಾಯದ ಪುರೋಹಿತಶಾಹಿಗಳ ಹಿಡಿತವನ್ನು ತಪ್ಪಿಸುವ ಸಾಧನವಾಗುತ್ತದೆ.

ಪ್ರಸ್ತುತ ತ್ರಿವಳಿ ತಲಾಖ್ ಚರ್ಚೆಯ ಕೇಂದ್ರಬಿಂದುವಾಗಿರುವ ಮಹಿಳೆ ಶಾಯರಾ ಬಾನು. ಆಕೆಗೆ ಅಂಚೆಯ ಮೂಲಕ ತಲಾಖ್ ನೀಡಲಾಗುತ್ತದೆ. ಲಿಂಗಸಮಾನತೆಯ ದೃಷ್ಟಿಕೋನದಿಂದ ಇದು ಯಾವ ನ್ಯಾಯವಾದೀತು ? ಇಸ್ಲಾಮ್‌ನ ಪುರುಷಪ್ರಾಧಾನ್ಯತೆಯನ್ನು ಶಾಯರಾ ಬಾನು ಸಾರ್ವಜನಿಕವಾಗಿ ವಿಮರ್ಶೆಗೊಳಪಡಿಸುತ್ತಿದ್ದಾಳೆ. ಅದು ಅಷ್ಟು ದೊಡ್ಡ ತಪ್ಪಾಗುತ್ತದೆಯೇ ? ಇತ್ತೀಚಿನ ಒಂದು ಸಂದರ್ಶನದಲ್ಲಿ ಆಕೆಯನ್ನು "ಭಾರತ್ ಮಾತಾ ಕೀ ಜೈ ವಿವಾದ"ದ ಬಗ್ಗೆ ಕೇಳಲಾಗಿ ಆಕೆ "ಎಲ್ಲಾ ಮುಸ್ಲಿಮರು ಭಾರತ್ ಮಾತಾ ಕೀ ಜೈ ಎನ್ನಬೇಕು ಎಂದು ನನಗನಿಸುತ್ತದೆ" ಎಂದಿರುವುದರತ್ತ ಹಲವರು ಗಮನ ಸೆಳೆಯುತ್ತಿದ್ದಾರೆ. ಆದ್ದರಿಂದ ಸಂಘ ಪರಿವಾರ ತ್ರಿವಳಿ ತಲಾಖ್ ಎಂಬ ಬಡಿಗೆ ಬಳಸಿ ಮುಸ್ಲಿಮರನ್ನು ಹೊಡೆಯುತ್ತಿದೆ ಎಂದು ಅಭಿಪ್ರಾಯಿಸುವ ಅಲ್ಪಸಂಖ್ಯಾತರ ಹಕ್ಕುಗಳ ಬೆಂಬಲಿಗರಿಗೆ ಈ ಘಟನೆ ಪ್ರಮಾಣವಾಗುತ್ತದೆ. ಇದು ಹೇಗೆಂದರೆ, ಮೌಲ್ವಿಯೋರ್ವನಿಗೆ ಒಂದೇ ಹಾಸಿಗೆಯ ಮೇಲೆ ಪತಿ ಮತ್ತು ಪತ್ನಿ ಮಲಗಬಹುದೇ ಎಂದು ಕೇಳಿದಾಗ ಅವನು

'ಸರಿಯಾದ ನಿಖಾ ಆಗಿದ್ದರೆ' ಎಂದ ಹಾಗೆ. ಆದ್ದರಿಂದ ಲಿವ್ ಇನ್ ರಿಲೇಷನ್‌ಶಿಪ್‌ನಲ್ಲಿ ಜೋಡಿಯು ಜೋಡಿ ಹಾಸಿಗೆಯ ಮೇಲೆ ಮಲಗಬಾರದು. ಹೌದು ! ಮೂರ್ಖ ಪ್ರಶ್ನೆ ಕೇಳಿದರೆ ಇನ್ನೂ ಮೂರ್ಖ ಉತ್ತರ ಸಿಗುತ್ತದೆ. ಏನೇ ಆಗಲಿ, ಶಾಯರಾ ಬಾನು ವಕೀಲನನ್ನು ನೇಮಿಸಿಕೊಂಡು ತನ್ನ ನೋವಿನೆಡೆಗೆ ಸಮಾಜದ ಗಮನ ಸೆಳೆಯಲು ಸಾಧ್ಯವಾಯಿತು. ಆದರೆ ಅಂಚೆ, ದೂರವಾಣಿ, ಎಸ್‌ಎಮ್‌ಎಸ್, ಸ್ಕೈಪ್ ಇತ್ಯಾದಿಗಳ ಮೂಲಕ ತಲಾಖ್ ಬಂದರೆ ಬಹುತೇಕ ಮಹಿಳೆಯರಿಗೆ ನ್ಯಾಯಾಲಯಗಳ ಮೆಟ್ಟಿಲೇರಲು ಯಾವುದೇ ಆರ್ಥಿಕ ಮೂಲಗಳಿರುವುದಿಲ್ಲ.

ಬಹುಪತ್ನಿತ್ವ ಮತ್ತು ತ್ರಿವಳಿ ತಲಾಖ್‌ಗಳನ್ನು ಸಾಂಸ್ಕೃತಿಕ ಹಾಗೂ ಧಾರ್ಮಿಕ ವಿಚಾರಗಳೆಂದೂ ನ್ಯಾಯಾಲಯಗಳು ಇವುಗಳಲ್ಲಿ ಹಸ್ತಕ್ಷೇಪ ಮಾಡಲು ಆಗದೆಂದು ಅಖಿಲ ಭಾರತ ಮುಸ್ಲಿಮ್ ವೈಯಕ್ತಿಕ ಕಾನೂನು ಮಂಡಳಿಯು ಹೇಳುತ್ತದೆ. ಒಂದು ಸಮುದಾಯದ ಒಳಗೆ ನಡೆಯುತ್ತಿರುವ ಅನ್ಯಾಯದ ವಿರುದ್ಧ ಸರ್ವೋಚ್ಚ ನ್ಯಾಯಾಲಯವಲ್ಲದೆ ಬೇರಾರು ಹಸ್ತಕ್ಷೇಪ ಮಾಡಲು ಸಾಧ್ಯ ? ವಿವಾಹವು ಒಂದು ಒಪ್ಪಂದವೆಂದೂ ಆದರೆ ಒಪ್ಪಂದಕ್ಕೊಳಗಾದ ಇಬ್ಬರೂ ಸಮಾನರಲ್ಲವೆಂದು ಅಖಿಲ ಭಾರತ ಮುಸ್ಲಿಮ್ ವೈಯಕ್ತಿಕ ಕಾನೂನು ಮಂಡಳಿಯು ಹೇಳಿದೆ. ಇದು ಈ ದೇಶದ ಎಲ್ಲಾ ಪ್ರಜೆಗಳೂ ಸಮಾನರೆಂದು ಘೋಷಿಸುವ ಸಂವಿಧಾನದ ಆಶಯಕ್ಕೆ ತದ್ವಿರುದ್ಧವಾಗಿದೆ. ಹೀಗಿದ್ದಾಗ ಸರ್ವೋಚ್ಚ ನ್ಯಾಯಾಲಯವು ಈ ಮಂಡಳಿಯ ಅಭಿಪ್ರಾಯಗಳನ್ನೇಕೆ ಆಲಿಸಬೇಕು ? ದೂರುದಾರಳು ಮಹಿಳೆಯಾಗಿದ್ದಾಳೆ. ಮಹಿಳೆಯರೇ ಸಂತ್ರಸ್ತೆಯರಾಗಿದ್ದಾರೆ. ಆದ್ದರಿಂದ ಶೇ. ೨೦ಕ್ಕಿಂತಲೂ ಕಡಿಮೆ ಸಂಖ್ಯೆಯ ಮಹಿಳೆಯರಿರುವ ಈ ಮಂಡಳಿಯ ಸಲಹೆಗಳನ್ನೇಕೆ ಪಡೆಯಬೇಕು ? ಜಗತ್ತಿನ ಇಪ್ಪತ್ತು ದೊಡ್ಡದೊಡ್ಡ ಮುಸ್ಲಿಮ್ ರಾಷ್ಟ್ರಗಳು ತ್ರಿವಳಿ ತಲಾಖ್‌ಗೆ ತಿಲಾಂಜಲಿ ನೀಡಿವೆಯಾದರೂ ಬೃಹತ್ ಪ್ರಜಾಸತ್ತೆಯಾದ ಭಾರತ ಇದಕ್ಕೆ ನಿಷೇಧ ಜಾರಿಗೊಳಿಸಲು ಮೀನಾಮೇಷ ಎಣಿಸುತ್ತಿದೆ.

ತ್ರಿವಳಿ ತಲಾಖ್ ನಿಷೇಧದ ಇನ್ನೂ ಯಾವ ನೆರೆಬಾಗಿಲುಗಳು ಒಡೆಯುವವೋ ಯಾರು ಬಲ್ಲರು ? ತಡೆಗೊಳ್ಳಬಹುದಾದ ವಿಚ್ಛೇದನದ ಭಯದಿಂದ ಪುರುಷರು ವಿವಾಹವಾಗುವುದನ್ನೇ ನಿಲ್ಲಿಸುವ ಸಾಧ್ಯತೆಯೂ ಇದೆ. ಕಾನೂನಿನಲ್ಲಿ ಬದಲಾವಣೆ ತರುವುದರಿಂದ ಸಮಾಜವು ತಕ್ಷಣ ಬದಲಾಗುವುದಿಲ್ಲ. ಜಾಗೃತಿ ಮತ್ತು ಸಂವೇದನೆಗಳನ್ನು ಮೂಡಿಸುವ ಕೆಲಸಗಳು ನಿರಂತರವಾಗಿ ನಡೆಯಬೇಕು. ಸಮಾಜದ ಪರಿವರ್ತನೆಯ ಹಾದಿಯಲ್ಲಿ ಇತರ ಪ್ರಮುಖ ಕೆಲಸಗಳನ್ನು ಮುಂದುವರಿಸಲು ಕಾನೂನಿನಲ್ಲಿ ಬದಲಾವಣೆ ತರುವುದು ಒಂದು ಆರಂಭದ ಹೆಜ್ಜೆ ಮಾತ್ರ. ಈ ಆರಂಭ ಶೀಘ್ರವಾಗಲೆಂದು ಆಶಿಸೋಣ.

ಮೂಲ : **ನೂರ್ ಜ಼ಾಹೀರ್,** ಕನ್ನಡಕ್ಕೆ : **ಜ್ಯೋತಿ ಎ.**
ನಂ.೩೭, ೧೯ನೇ ಮುಖ್ಯರಸ್ತೆ, ಎಂ. ಸಿ. ಲೇಔಟ್
ವಿಜಯನಗರ, ಬೆಂಗಳೂರು – ೫೬೦ ೦೪೦

# ಧಗಧಗಸಿದ ಒಡಲೊಳಗಿನ ಕಿಡಿಗಳು



"**ನಾ**ನು ಒಬ್ಬ ಮನುಷ್ಯ, ಮನುಷ್ಯ ಕುಲವನ್ನು
ಬಾಧಿಸುವ ಎಲ್ಲವೂ ನನ್ನನ್ನೂ ಬಾಧಿಸುತ್ತವೆ"
– ರೋಮನ್ ನಾಟಕಕಾರ

ಆಗ ಹೇಗಿತ್ತೊ ಜಗತ್ತು
ಈಗಲೂ ಹಾಗೆಯೇ ಇದೆ
ರೈತರ ಆತ್ಮಹತ್ಯೆಯ ಹೆಣಗಳ ಸಮಾಧಿಗಳ ಮೇಲೆ
ಮೋಜು–ಮಸ್ತಿ ಕೂಟಗಳ ಆಚರಣೆಯ ಸಡಗರ

ಅವರ ರಾತ್ರಿ ಪಾರ್ಟಿಗಳ
ದೊಡ್ಡ ಸದ್ದು–ಗದ್ದಲಗಳ ಮಧ್ಯೆ
ನಮ್ಮದೇ ಸಹೋದರಿಯರ ಅತ್ಯಾಚಾರದ
ಆಕ್ರಂದನ ಕೇಳದೆ; ಮುದ್ದು
ಕಂದಮ್ಮಗಳ ಬೆಂಕಿಗೆ ಎಸೆದು
ಕೇಸರಿ ಹಸಿರು ಬಣ್ಣದ ಜಗಳಗಳ
ನಡುವೆ ಬಿಳಿಯು ಕಪ್ಪು ಮಸಿಯಾಗಿ
ನೀಲಿಚಕ್ರ ಉರುಳಿದೆ
ಹೆಣದ ಪೆಟ್ಟಿಗೆಗಳು ತಡಿಯದ ದುಃಖಕ್ಕೆ ಕಣ್ಣೀರಿಟ್ಟಿವೆ.

ಆಹಾ ! ಆಹಾ !
ಎಷ್ಟೊಂದು ಹಣತೆಗಳು
ಎಷ್ಟೊಂದು ಶುಭ್ರವಾದ ಬೆಳಕು
ಈ ಮಕ್ಕಳೇಕೆ ಕತ್ತಲಲ್ಲಿ ಓದುತ್ತಿವೆ
ಈ ಜನ ತುಂಬಾ ಜಾಣರು !
ಬೆಳಕಿಗೆ ಬಂದ ಹಾಗೆ ಕತ್ತಲು ಮರೆತರು.

ಪಾಪ...
ರೈತರು, ಪ್ರಾಮಾಣಿಕತೆಗಾಗಿ ಸತ್ತ ಅಧಿಕಾರಿಯ
ಅಸ್ಥಿಪಂಜರಗಳು ಹೊರಳಾಡುತ್ತಿವೆ ಗೋರಿಯೊಳಗೆ

ಬಿಡಿ ಸೇದುವ ಮುದುಕ
ಬೆಳಕಿನ ಹಂಬಲದೊಳಗೆ
ವಿದೇಶದಿಂದ ಬರುವ ಮಗನಿಗಾಗಿ
ಕಾದು ಕುಳಿತ್ತಿದ್ದಾನೆ...
ಬೆಳಕಲ್ಲಿ ಇರುವ ಮಗನ ನೆನೆದು
ದುಡಿದು ದಣಿದು ಕುಡಿದು ಕಾಲ ಕಳೆಯುವವನಿಗೆ
ಮುದುಕನ ನೆನಪಿಲ್ಲ
ಇನ್ನೂ
ಬೆಳಕು ಕಾಣುವ ಹಂಬಲವೆ ಇಲ್ಲ !
ವಿದೇಶಿಯರ ಕತ್ತಲೆ ಹಿತವೆನ್ನಿಸಿದೆ ಅವನಿಗೆ.

ಕ್ರೂರ ಜನರ ಘರ್ಜನೆ
ಪ್ರತಿಕಾರದ ಸಂಚುಗಳ ಮಧ್ಯೆ
ಎನ್ನ ಕವಿತೆಯ ಗರ್ಭ ಒಡೆದು ಒಸರುತ್ತಿದೆ
ಶ್ರೀಮಂತರ ಮಹಲುಗಳ ಮೇಲೆ ದೀಪದ
ಸಾಲುಗಳು ಬೆಳಗುತ್ತಿವೆ...

ಬಂದೂಕಿನ ಸದ್ದೋ ? ಪಟಾಕಿಗಳ ಸದ್ದೋ ?
ಅರಿಯದೆ ಗೊಂದಲವಾಗಿದೆ.

ಆತ್ಮಹತ್ಯೆಯಾದ ರೈತನ ಮನೆಯ ಕತ್ತಲೆಗೆ
ಬದುಕು ನಿರ್ವಹಿಸಲು ಆಗದೆ
ಸತ್ತ ಸೈನಿಕರ ಪತ್ನಿಯ ಗೋಳಾಟದ ವ್ಯಥೆಗೆ
ಯಾವುದೋ ವಠಾರದಿಂದ ಹೆಣ್ಣೊಂದು
ಕೂಗಿದ ಧ್ವನಿ
ಮಡಿಲಲ್ಲಿ ಮಲಗಿದ ಮಗುವೊಂದು ಹಸಿದು
ಅತ್ತ ಯಾತನೆ
ಬೀದಿ ದೀಪದ ಕೆಳಗೆ ಕುಳಿತು ಓದುವ
ವಿದ್ಯಾರ್ಥಿಯ ಸಂಕಟ
ಕಂಡು ನನ್ನ ಕವಿತೆ ಹೋರಾಟಕ್ಕಿಳಿದಿದೆ.

ನಿಮ್ಮದೇ ಬೆಳಕಲ್ಲಿ
ನಿಮ್ಮದೇ ಬಂದೂಕಿನ ಗುಂಡಿಗೆ
ಸಿದ್ಧವಿದೆ ಎನ್ನೆದೆ
ಸುರುವಾಗಲಿ ಗುಂಡಿನ ಸುರಿಮಳೆ
ಕೇಕೆ ಹಾಕಿ ಕುಣಿಯಿರಿ
ಎನ್ನ ಅಂತ್ಯದೊಡನೆ ಪ್ರಾರಂಭವಾಗಲಿ
ಹೊಸ ಹೋರಾಟ...

**ಸುಮಿತ್ ಮೇತ್ರಿ, ಹಲಸಂಗಿ**
ಸರಕಾರಿ ಹಿರಿಯ ಪ್ರಾಥಮಿಕ ಶಾಲೆ, ಕಜ್ಜಿಬಂಡಿ (ಗಲಗ)
ದೇವದುರ್ಗ ತಾಲೂಕು
ರಾಯಚೂರು ಜಿಲ್ಲೆ, ಪಿನ್ – ೫೮೪ ೧೧೬



# ಧರ್ಮದ ಬೆಲೆ

**ಮೂ**ರು ದಿನದಿಂದ ಮೋರಿಯ ಪೈಪ್‌ನೊಳಗೆ ಮುದುಡಿ ಕುಳಿತಿದ್ದ ಭಿಕ್ಷುಕ ಕರ್ಫ್ಯೂ ಸಡಿಲವಾಗಿರುವುದರಿಂದ ಹಸಿವು ನಿವಾರಿಸಿಕೊಳ್ಳಲು ಇಂದು ಬೀದಿಗಿಳಿದಿದ್ದಾನೆ. 'ಅಣ್ಣಾ... ಅಮ್ಮಾ...' ಎನ್ನುತ್ತ ಕೈ ಚಾಚುತ್ತಿದ್ದಾನೆ. "ಮೂರು ದಿನದಿಂದ ಏನೂ ತಿಂದಿಲ್ಲ..." ಎನ್ನುತ್ತ ಗೋಗರೆಯುತ್ತಿದ್ದಾನೆ.

ಅತ್ತ-ಇತ್ತ ನಿಂತವರಲ್ಲಿ ಕೆಲವರು ಸುಟ್ಟ ಮನೆಗಳನ್ನು, ಲೂಟಿಯಾದ ಅಂಗಡಿ ಮುಂಗಟ್ಟುಗಳನ್ನು ನೋಡುವುದರಲ್ಲೇ ಮೈಮರೆತಿದ್ದರು. ಇನ್ನು ಕೆಲವರು ದಿನದ ಅವಶ್ಯಕ ವಸ್ತುಗಳನ್ನು ಕೊಂಡುಕೊಳ್ಳುವುದರಲ್ಲಿ ನಿರತರಾಗಿದ್ದರು. ಇದುವರೆಗೆ ಅವನ ಕೈ ಮೇಲೆ ಎರಡು ಪಾವಲಿಗಳಷ್ಟೇ ಬಿದ್ದಿದ್ದವು. ಇನ್ನೊಂದೆರಡು – ಮೂರು ಬಿದ್ದರೆ ಚಹಾದ ಜೊತೆಗೆ ಇನ್ನೇನನ್ನಾದರೂ ಹೊಟ್ಟೆಗಿಳಿಸಬಹುದು ಎಂದು ಯೋಚಿಸುತ್ತ ಮುಂದಕ್ಕೆ ಸಾಗಿದ.

ಕರ್ಫ್ಯೂ ಸಡಿಲಿಕೆಯ ಅವಧಿ ಮುಗಿಯುವುದರಲ್ಲಿತ್ತು. ಜನರು ಲಗುಬಗೆಯಿಂದ ತಮ್ಮ ತಮ್ಮ ಮನೆಗಳತ್ತ ಮುಖ ಮಾಡತೊಡಗಿದ್ದರು. ಅಂಗಡಿಗಳ ಶಟರ್ಸ್ ಕೂಡ ಇಳಿಮುಖವಾಗತೊಡಗಿದ್ದವು.

ಅವನಿಗೂ ತನ್ನ ಜಾಗದ ಕಡೆಗೆ ಹೋಗಬೇಕಾಗಿತ್ತು. ಎಂಟಾಣೆಯಲ್ಲಿ ಏನು ಸಿಗುತ್ತದೋ ಅದನ್ನೇ ತಿಂದರಾಯಿತು ಎಂದು ಯೋಚಿಸುತ್ತ ಮುಚ್ಚುತ್ತಿರುವ ಅಂಗಡಿಯ ಕಡೆಗೆ ಹೆಜ್ಜೆಯಿಡತೊಡಗಿದ.

ಬೀದಿಯಲ್ಲಿ ಮೂರು-ನಾಲ್ಕು ಜನರು ನಿಂತಿರುವುದನ್ನು ಕಂಡು ಇನ್ನೊಂದೆರಡು ಪಾವಲಿಗಳು ಸಿಗಬಹುದೇನೋ ಎಂಬ ಆಸೆಯಲ್ಲಿ ಕೈ ಚಾಚಿ, "ಅಣ್ಣಾ, ದೇವರ ಹೆಸರಲ್ಲಿ ನಾಕಾಣೆ ನೀಡಿ. ಮೂರು ದಿನದಿಂದ ಏನೇನೂ ತಿಂದಿಲ್ಲ..." ಎಂದು ಬೇಡಿದ.

ನಿಂತಿದ್ದವರು ಅತ್ತಿತ್ತ ಕಣ್ಣು ಹಾಯಿಸಿದರು. ಸುತ್ತೆಲ್ಲ ಸ್ಮಶಾನ ಮೌನ. ಅವರಲ್ಲೊಬ್ಬ ಹೇಳಿದ, "ದೇವರು ಅಂತಿದ್ದಾನೆ. ಹಾಗಿದ್ದರೆ ಇವನು ಹಿಂದುವೇ. ಹೊಡೀರಿ ಆ ರಾಸ್ಕಲ್‌ಗೆ."

"ಬೇಡ, ಬೇಡ, ನನಗೆ ಹೊಡಿಬೇಡಿ. ನಾನು ಹಿಂದು ಅಲ್ಲ."

"ಹಿಂದು ಅಲ್ಲವಾ, ಹಾಗಿದ್ದರೆ ಮುಸಲ್ಮಾನನಾಗಿ ದೇವರು ಅಂತ ಹೇಳ್ತೀಯಾ ? ಧರ್ಮದ್ರೋಹಿ. ಹೊಡೀರಿ ಈ ಕಾಫಿರ್‌ನನ್ನು." ಒಕ್ಕೊರಲಿನ ದನಿ ಮುಗಿಲು ಮುಟ್ಟುವುದರಲ್ಲಿತ್ತು.

"ಇಲ್ಲ, ಇಲ್ಲ ನಾನು ಮುಸಲ್ಮಾನನಲ್ಲ. ನನಗೆ ಹೊಡೀಬೇಡಿ."

"ಹಾಗಿದ್ದರೆ ಯಾರು ನೀನು ? ನಿನ್ನ ಧರ್ಮ ಯಾವುದು ?"

"ಅಯ್ಯಾ ! ನಾನೊಬ್ಬ ಭಿಕ್ಷುಕ. ನನಗೆಲ್ಲಿದೆ ಧರ್ಮ ? ಕೊಡೋ ಪುಣ್ಯವಂತರು ಭಗವಂತನ ಹೆಸರಲ್ಲಿ ಪಾವಲಿ ಹಾಕಿದರೆ ಹಿಂದುವಾಗಿಬಿಡ್ತೇನೆ. ಅಲ್ಲಾಹುವಿನ ಹೆಸರಲ್ಲಿ ಹಾಕಿದರೆ ಮುಸಲ್ಮಾನನಾಗಿಬಿಡ್ತೇನೆ."

ಹೊಡೆಯಲೆಂದು ಎತ್ತಿದ ಕೈಗಳು ಗಾಳಿಯಲ್ಲೇ ತೇಲುತ್ತ ನಿಂತಂತಿದ್ದವು. ಬಹುಶಃ ಇವನು ಹಿಂದುವೋ, ಮುಸಲ್ಮಾನನೋ ಎಂಬುದನ್ನು ಅರ್ಥೈಸಿ ಕೊಳ್ಳುವುದು ಅವರ ಪಾಲಿಗೆ ಕಡು ಕಷ್ಟವಾಗಿರಬೇಕು. ಅಥವಾ ಹೀಗೂ ಇದ್ದಿರಬಹುದು, ಇವರೆಲ್ಲ ಸೇರಿ ಯಾವ ಧರ್ಮದ ಹೆಸರಲ್ಲಿ ಇಷ್ಟೊಂದು ಕೊಲೆ-ರಕ್ತಪಾತದಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವರೋ, ಅದರ ಬೆಲೆ ಕೇವಲ ನಾಲ್ಕಾಣೆಯ ಒಂದು ಪಾವಲಿ, ಎಂಬುದರ ಸಾಕ್ಷಾತ್ಕಾರವೇ ?!

ಮೂಲ : **ಘನಶ್ಯಾಮ್ ಅಗ್ರವಾಲ್**
ಕನ್ನಡಕ್ಕೆ : **ಡಾ॥ ಮಾಧವಿ ಎಸ್. ಭಂಡಾರಿ**
'ಮಂದಾರ', ಪದ್ಮನಾಭನಗರ, ಡಯಾನಾ ಥಿಯೇಟರ್ ಹಿಂಭಾಗ ಉಡುಪಿ – ೫೭೬ ೧೦೧



# ಮಿಸ್ಟರ್ ಫೇಕು

**ಮಂ**ಕು ಬೂದಿಯ 'ಮಿಸ್ಟರ್ ಫೇಕು'
ಈ ಶತಮಾನದ ದೊಡ್ಡ ಜೋಕು
ತೋಳು-ತಲೆಯಿಲ್ಲದ ಅರ್ಧ ಕೋಟು
'ಬಾಟಮ್ ಬೀಫ್' ಲೆಗ್ಗಿಂಗ್ ಟೈಟು !

ಐವತ್ತಾರಿಂಚೆದೆಯ ಭಾಷಣ ಭೂಪ
ವಿದೇಶಯಾತ್ರೆ, ಸೆಲ್ಫಿಮೋಹದ ವಿರಾಟ ರೂಪ
ರೇಡಿಯೊ ಮಾಸಾಶನದ 'ಮಂಕಿ ಬಾತ್'
ಪೇಪರ್ ವಿಕಾಸ, ಜಾಹೀರಾತಿನ 'ಜಿಯೊ'ಸಾತ್ !

ಹೊಸ ಪಿಟೀಲು ಕೊಯ್ದು 'ಅಚ್ಛೆ ದಿನ್'
ಲಗಾಟೆ ಹೊಡೆಯಿತು 'ಬುಲೆಟ್ ಟ್ರೇನ್'
ಮೇಕಪ್ ಇಂಡಿಯ, ಶೇಕಪ್ ಇಂಡಿಯ
ಜಾಟ್-ಗುಜರಾತ್, ಮಹದಾಯಿ-ಮಂಡ್ಯ !

ಸಂಸ್ಕೃತ ಬೆರಕೆ, ಹಿಂದಿ ಹೇರಿಕೆ
ಜ್ಞಾನ-ವಿಜ್ಞಾನ ತಂತ್ರಜ್ಞಾನಗಳ ತೂಕಡಿಕೆ
ಭಕ್ತಗಣಗಳ ತಾರಕನಾದ 'ನಮೋ ನಮೋ'
'ಸ್ವಚ್ಛ ಭಾರತ'ದ ಅರಣ್ಯರೋದ ಲಬೋಲಬೋ !

**ಎಸ್. ಮಂಜುನಾಥ**
ನಂ. ೬೩, ವಾರ್ಡ್-೧೨, ರೆಡ್ಡಿ ಬೀದಿ, ಬಿ.ಎಂ.ಡಿ. ಶಾಲೆ
ಹಿಂಭಾಗ ಬಳ್ಳಾರಿ – ೫೮೩ ೧೦೧

# ಸಾಮಾಜಿಕ ವಾಸ್ತವ : ಬಿಸಿಲುನಾಡಿನ ಪ್ರಮುಖ ಲೇಖಕರ ಕಥೆ-ಕಾದಂಬರಿಗಳ ಅಧ್ಯಯನ

**ಡಾ॥** ಅಮರೇಶ ನುಗಡೋಣಿ ನವ್ಯೋತ್ತರ ವಿಶಿಷ್ಟ ಕವಿ, ಕಥೆಗಾರ ಮತ್ತು ವಿಮರ್ಶಕ. ಅವರು ಕಳೆದ ಮೂರು ದಶಕಗಳಿಂದ ಕನ್ನಡ ಸಾಹಿತ್ಯಕ್ಕೆ ಸತ್ವಯುತ ಕೃತಿಗಳನ್ನು ನೀಡುವ ಮೂಲಕ ನಾಡಿನ ಓದುಗರ, ವಿಮರ್ಶಕರ ಗಮನ ಸೆಳೆದ ಪ್ರತಿಭಾನ್ವಿತ ಲೇಖಕ, ಪ್ರಗತಿಪರ ಚಿಂತಕರು.

ಕರ್ನಾಟಕ ಸಾಹಿತ್ಯ ಮತ್ತು ಸಂಸ್ಕೃತಿಯ ಅಧ್ಯಯನ ದೃಷ್ಟಿಯಿಂದ ಗಮನಿಸಿದಾಗ ಬಹುಮಟ್ಟಿಗೆ ಅಲಕ್ಷಿತ ಕ್ಷೇತ್ರವಾಗಿಯೇ ಉಳಿದಿರುವುದು ಹೈದರಾಬಾದ್ ಕರ್ನಾಟಕ ಪ್ರದೇಶ. ಕಲಬುರಗಿ, ಬೀದರ್, ರಾಯಚೂರು, ಬಳ್ಳಾರಿ, ಕೊಪ್ಪಳ ಹಾಗೂ ಯಾದಗಿರಿ ಜಿಲ್ಲೆಗಳ ಪ್ರದೇಶಕ್ಕೆ ಸ್ಥೂಲವಾಗಿ ಹೈದರಾಬಾದ್ ಕರ್ನಾಟಕ ಪ್ರದೇಶವೆಂದು ಕರೆಯುವ ರೂಢಿ ಇದೆ. ಈ ಪ್ರದೇಶದ ರಾಜಕೀಯ ಚರಿತ್ರೆ, ಸಾಮಾಜಿಕ ಬದುಕು ತುಂಬ ರೋಚಕವಾದ್ದು ಮತ್ತು ಅಷ್ಟೇ ಭಯಾನಕವಾದ್ದು! ರಾಜಕೀಯವಾಗಿ ಮುಸ್ಲಿಮರ ಆಳ್ವಿಕೆ, ಸಾಮಾಜಿಕವಾಗಿ ಭೂಮಾಲೀಕರ ಆಳ್ವಿಕೆ, ಧಾರ್ಮಿಕವಾಗಿ ಲಿಂಗಾಯಿತರ ಮತ್ತು ವೈದಿಕರ ಮೇಲುಗೈ, ಮರಾಠಿ, ತೆಲಗು ಗಡಿಪ್ರದೇಶಗಳು, ಹಲವಾರು ಜಾತಿ, ಭಾಷೆಗಳು, ಸಂಸ್ಕೃತಿ, ಸಂಪ್ರದಾಯಗಳಿಂದ ಕೂಡಿದ ಈ ಪ್ರದೇಶವು ಒಂದು ಅನನ್ಯ ಸಂಕರ ಸಂಸ್ಕೃತಿಯನ್ನು ರೂಪಿಸಿಕೊಂಡಿದೆ. ಮನುಷ್ಯನ ಬದುಕಿನಲ್ಲಿ ಪ್ರೀತಿ, ಪ್ರೇಮ, ವಿಶ್ವಾಸ, ನಂಬಿಕೆ ಮತ್ತು ಕ್ರೌರ್ಯಗಳು ತುಂಬಿವೆ. ಇವೆಲ್ಲದರ ಚರಿತ್ರೆಯೊಂದಿಗೆ ಕಥೆ, ಕಾವ್ಯ, ಕಾದಂಬರಿ, ನಾಟಕ ಬರೆಯುವವರಿಗೆ ಈ ಪ್ರದೇಶ ಕನ್ನೆನೆಲ. ಈ ಪ್ರದೇಶ ಹೋರಾಟ, ಕೋಮುಸೌಹಾರ್ದ, ಹೃದಯಶ್ರೀಮಂತಿಕೆಯ ನೆಲದ ಸಾಹಿತ್ಯೇತಿಹಾಸ ಬಹು ಶ್ರೀಮಂತವಾಗಿದೆ. ಹೈದರಾಬಾದ್ ಕರ್ನಾಟಕ ಪ್ರದೇಶ ಕಥೆ–ಕಾದಂಬರಿಗಳ ಕಣಜ. ಇಂತಹ ನೆಲದಲ್ಲಿ ಸೃಜನಶೀಲ ಪ್ರತಿಭೆಗಳ ಹುಟ್ಟಿಗೇನೂ ಕೊರತೆಯಿಲ್ಲ. ಆದರೆ ಈ ಭಾಗದ ಲೇಖಕರಿಗೆ ಅವಕಾಶಗಳು ಸಿಗುವುದು ತುಂಬ ಅಪರೂಪ.

ಪ್ರಸ್ತುತ 'ಸಾಮಾಜಿಕ ವಾಸ್ತವ' ಅಮರೇಶ ನುಗಡೋಣಿಯವರ ವಿಮರ್ಶಾ ಲೇಖನಗಳ ಸಂಕಲನ. ಹೈದರಾಬಾದ್ ಕರ್ನಾಟಕ ಪ್ರದೇಶದ ನವ್ಯ ಸಾಹಿತ್ಯದಿಂದ ಹಿಡಿದು ಆಧುನಿಕೋತ್ತರ ಕಾಲದವರೆಗಿನ 'ಸಾಮಾಜಿಕ ವಾಸ್ತವ'ವನ್ನು ದಾಖಲಿಸುವ ಅಮರೇಶ ನುಗಡೋಣಿಯವರ ಪ್ರಯತ್ನಕ್ಕೆ ವಿಪುಲ ಓದಿನ ಹಿನ್ನೆಲೆ ಇರುವುದು ವ್ಯಕ್ತವಾಗುತ್ತದೆ. ಹಂಪಿ ವಿಶ್ವವಿದ್ಯಾಲಯದಲ್ಲಿ ಕನ್ನಡ ಪ್ರಾಧ್ಯಾಪಕರಾಗಿರುವ ಅವರು, ಅಲ್ಲಿದ್ದುಕೊಂಡೇ ಕನ್ನಡ ಸಾಹಿತ್ಯದ ಹೊಸ ಬೆಳೆಗಳನ್ನು ಕುತೂಹಲದಿಂದ ಗಮನಿಸುತ್ತಿರುವರು. ಅವರ ಕುತೂಹಲ ಹಾಗೂ ಪ್ರತಿಕ್ರಿಯೆಯನ್ನು ಈ ಕೃತಿಯಲ್ಲಿ ಕಾಣಬಹುದು. ಹೈದರಾಬಾದ್ ಕರ್ನಾಟಕದ ಸಾಮಾಜಿಕ, ಆರ್ಥಿಕ, ಧಾರ್ಮಿಕ ಪ್ರಭಾವ ಹಾಗೂ ಬಡತನ, ಅನಕ್ಷರತೆ, ಮೂಢನಂಬಿಕೆ, ಬರಗಾಲ, ನಿರುದ್ಯೋಗ ಇತ್ಯಾದಿಗಳನ್ನೂ ಒಳಗೊಂಡಂತೆ ಈ ಅಧ್ಯಯನ ಸಹೃದಯದೊಂದಿಗೆ ನೇರವಾಗಿ ಸಂವಾದಕ್ಕಿಳಿಯುತ್ತದೆ. ಈ ದೃಷ್ಟಿಕೋನದಲ್ಲಿ ರಚನೆಗೊಂಡ ಈ ಕೃತಿ ಓದುಗರಿಗೆ ನಿರಂತರ ಕುತೂಹಲ ಮೂಡಿಸುತ್ತ ವರ್ತಮಾನದ ಬದುಕಿನ ಕುರಿತು ಚಿಂತನೆಗೆ ಪ್ರೇರೇಪಿಸುತ್ತದೆ. ಈ ಕೃತಿ ಬಯಲುಸೀಮೆಯ ಪ್ರಮುಖ ಲೇಖಕರ ಕಥೆ–ಕಾದಂಬರಿಗಳಲ್ಲಿನ ಪ್ರಾದೇಶಿಕ ವೈವಿಧ್ಯ, ಬದುಕು, ವಿಶಿಷ್ಟ ಭಾಷೆ, ಕಥೆ ಕಟ್ಟುವ ವಾಸ್ತವವನ್ನು ತೆರೆದಿಡುತ್ತದೆ. ಈ ಭಾಗದ ಪ್ರಮುಖ ಲೇಖಕರ ಕಥೆ–ಕಾದಂಬರಿಗಳಲ್ಲಿ ಪ್ರತಿಫಲಿತವಾದ ಸಾಮಾಜಿಕ ಬದುಕಿನ ಚಿತ್ರಣದ ಬಗ್ಗೆ ಈ ಕೃತಿ ಅನೇಕ ಹೊಳಹುಗಳನ್ನು ಸಂಕ್ಷಿಪ್ತವಾಗಿ ಕೊಡುತ್ತದೆ.

ಜಯತೀರ್ಥ ಪುರೋಹಿತ, ಡಾ॥ ಶಾಂತರಸ, ಚಂದ್ರಕಾಂತ ಕುಸನೂರ, ಡಾ॥ ಚೆನ್ನಣ್ಣ ವಾಲೀಕಾರ, ಡಾ॥ ರಾಜಶೇಖರ ನೀರಮಾನ್ವಿ, ಗೀತಾ ನಾಗಭೂಷಣ, ಪ್ರೊ॥ ಸೂಗಯ್ಯ ಹಿರೇಮಠ, ಪ್ರೊ॥ ಭಾಲಚಂದ್ರ ಜಯಶೆಟ್ಟಿ, ಪ್ರೊ॥ ಮಲ್ಲಿಕಾರ್ಜುನ ಹಿರೇಮಠ, ಶಿವಕುಮಾರ ನಾಗವಾರ, ಗುರುನಾಥ ಅಕ್ಕಣ್ಣ, ಪ್ರೊ॥ ಶ್ರೀಕಾಂತ ಪಾಟೀಲ, ಪ್ರೊ॥ ಕೃಷ್ಣ ನಾಯಕ್, ರಾಜಶೇಖರ ಹತಗುಂದಿ, ಸಿದ್ಧರಾಮ ಹೊನ್ಕಲ್, ಮಹಾಂತೇಶ ನವಲಕಲ್, ಕಲಿಗಣನಾಥ ಗುಡದೂರ, ಜ್ಯೋತಿ ಬಿ. ಕುಲಕರ್ಣಿ, ಸಂಧ್ಯಾ

**ಸಿ. ಎಸ್. ಭೀಮರಾಯ**

ಪ್ರಮುಖ ಲೇಖಕರ ಕಥೆ–ಕಾದಂಬರಿಗಳ ಕುರಿತು ಸೂಕ್ಷ್ಮ ಅಧ್ಯಯನ ಈ ಕೃತಿ ದರ್ಶಿಸುತ್ತದೆ. ಸುಮಾರು ಏಳು ದಶಕಗಳ ಹೈದರಾಬಾದ್ ಕರ್ನಾಟಕದ ಸಾಹಿತ್ಯ ಬೆಳವಣಿಗೆಯ ದಾಖಲಾತಿ ಇಲ್ಲಿದೆ. ಈ ಮೂಲಕ, ನಾಡಿನ ಕನ್ನಡ ಸಾಹಿತ್ಯಕ್ಕೆ ಹೈದರಾಬಾದ್ ಕರ್ನಾಟಕದ ಲೇಖಕರು ನೀಡಿದ ಮೌಲಿಕ ಕೊಡುಗೆಯ ದಾಖಲೆಯೂ ಆಗಿದೆ. ಪ್ರಾಸಂಗಿಕ ವಿಮರ್ಶೆ ಹಾಗೂ ವಿಶ್ಲೇಷಣೆಯೂ ಕೃತಿಯಲ್ಲಿದೆ. 'ಸಾಮಾಜಿಕ ವಾಸ್ತವ'ವನ್ನು ಕೇಂದ್ರವಾಗಿರಿಸಿಕೊಂಡ ಈ ಅಧ್ಯಯನ ಇಂದಿನ ಸಮಾಜ ಎದುರಿಸುತ್ತಿರುವ ಎಲ್ಲ ಬಗೆಯ ಸಮಸ್ಯೆಗಳನ್ನು ಪರಿಣಾಮಕಾರಿಯಾಗಿ ವಿಶ್ಲೇಷಿಸುತ್ತದೆ. ಹೈದರಾಬಾದ್ ಕರ್ನಾಟಕ ಪ್ರದೇಶ ಕಥನಗಳ ಹಿನ್ನೆಲೆಯಲ್ಲಿರುವ ರಾಜಕೀಯ,




ಅಮರೇಶ ನುಗಡೋಣಿಯವರು ಕನ್ನಡದ ನವ್ಯ ಮತ್ತು ಬಂಡಾಯ ಕಥನ ಪರಂಪರೆಯ ಮೊದಲ ತಲೆಮಾರಿಗೆ ಸೇರಿದ ಲೇಖಕರ ಕಥೆ–ಕಾದಂಬರಿಗಳನ್ನೇ ಹೆಚ್ಚಿನ ಸಂಖ್ಯೆಯಲ್ಲಿ ತಮ್ಮ ವಿಮರ್ಶೆಯ ಸೂಕ್ಷ್ಮವಾದ ಅಡಿಯಲ್ಲಿ ತಂದಿದ್ದಾರೆ. ಅಂದರೆ, ಅವರ ನಿಲುವು, ಒಲವು ಯಾವುದರತ್ತ ಇದೆ ಎಂಬುದನ್ನು ಗುರುತಿಸಬಹುದಾಗಿದೆ. ಅಲ್ಲದೆ ಇಲ್ಲಿನ ಲೇಖಕರ ಕಥೆ–ಕಾದಂಬರಿಗಳು ಕನ್ನಡ ಕಥನ ಕಲೆಗೆ ವಿವಿಧ ಬಗೆಯ ಸಂವೇದನೆ, ನೋಟಗಳನ್ನು ಕೊಟ್ಟಂತಹವುಗಳಾಗಿವೆ. ಅಲ್ಲದೆ, ಅವುಗಳ ಚಿತ್ರಣದ ಹಿಂದೆ ಕೆಲಸ ಮಾಡಿರುವ ಲೇಖಕರ ಪ್ರಜ್ಞೆಯ ನಿಜಸ್ವರೂಪವನ್ನು ದಾಖಲಿಸಲು ಇಲ್ಲಿ ಪ್ರಯತ್ನಿಸಲಾಗಿದೆ. ಅವುಗಳ ಶಕ್ತಿ, ಮಿತಿ ಮತ್ತು ಮಹತ್ವವನ್ನು ನಿಖರವಾಗಿ, ಮುಕ್ತವಾಗಿ, ತಮ್ಮ ವಿಮರ್ಶಾ ಲೇಖನಗಳಲ್ಲಿ ಲೇಖಕರು ಗುರುತಿಸಿದ್ದಾರೆ.

ಹೊನಗುಂಟಿಕರ್... ಹೀಗೆ ಅನೇಕ ಲೇಖಕರ ಕಥೆ–ಕಾದಂಬರಿಗಳ ಕುರಿತ ವಿಮರ್ಶೆ ಇಲ್ಲಿದೆ. ಅಮರೇಶ ನುಗಡೋಣಿಯವರು ತಮ್ಮ ವಿಮರ್ಶೆಗೆ ಆಯ್ಕೆಮಾಡಿಕೊಂಡಿರುವ ಎಲ್ಲ ಕಥಾಸಂಕಲನ ಮತ್ತು ಕಾದಂಬರಿಗಳು ಕನ್ನಡದ ಬಹು ಮುಖ್ಯ ಕೃತಿಗಳಾಗಿವೆ. ಹೈದರಾಬಾದ್ ಕರ್ನಾಟಕದ ಲೇಖಕರ ಕಥನ ಕಸಬುಗಾರಿಕೆಯನ್ನು ಗುರುತಿಸುವ ಗುರಿಯನ್ನು ಈ ವಿಮರ್ಶಾ ಲೇಖನಗಳು ಹೊಂದಿವೆ. ಅಮರೇಶ ನುಗಡೋಣಿಯವರು ಕನ್ನಡದ ನವ್ಯ ಮತ್ತು ಬಂಡಾಯ ಕಥನ ಪರಂಪರೆಯ ಮೊದಲ ತಲೆಮಾರಿಗೆ ಸೇರಿದ ಲೇಖಕರ ಕಥೆ–ಕಾದಂಬರಿಗಳನ್ನೇ ಹೆಚ್ಚಿನ ಸಂಖ್ಯೆಯಲ್ಲಿ ತಮ್ಮ ವಿಮರ್ಶೆಯ ಸೂಕ್ಷ್ಮವಾದ ಅಡಿಯಲ್ಲಿ ತಂದಿದ್ದಾರೆ. ಅಂದರೆ ಅವರ ನಿಲುವು, ಒಲವು ಯಾವುದರತ್ತ ಇವೆ ಎಂಬುದನ್ನು ಗುರುತಿಸಬಹುದಾಗಿದೆ. ಅಲ್ಲದೆ ಇಲ್ಲಿನ ಲೇಖಕರ ಕಥೆ–ಕಾದಂಬರಿಗಳು ಕನ್ನಡ ಕಥನ ಕಲೆಗೆ ವಿವಿಧ ಬಗೆಯ ಸಂವೇದನೆ, ನೋಟಗಳನ್ನು ಕೊಟ್ಟಂತಹವುಗಳಾಗಿವೆ. ಅಲ್ಲದೆ, ಅವುಗಳ ಚಿತ್ರಣದ ಹಿಂದೆ ಕೆಲಸ ಮಾಡಿರುವ ಲೇಖಕರ ಪ್ರಜ್ಞೆಯ ನಿಜಸ್ವರೂಪವನ್ನು ದಾಖಲಿಸಲು ಇಲ್ಲಿ ಪ್ರಯತ್ನಿಸಲಾಗಿದೆ. ಅವುಗಳ ಶಕ್ತಿ, ಮಿತಿ ಮತ್ತು ಮಹತ್ವವನ್ನು ನಿಖರವಾಗಿ, ಮುಕ್ತವಾಗಿ, ತಮ್ಮ ವಿಮರ್ಶಾ ಲೇಖನಗಳಲ್ಲಿ ಲೇಖಕರು ಗುರುತಿಸಿದ್ದಾರೆ. ನುಗಡೋಣಿಯವರು ತಮ್ಮ ತೀರ್ಮಾನಗಳನ್ನು ಯಾವುದೇ ಪೂರ್ವಗ್ರಹಗಳಿಗೆ ಎಡೆಯಿಲ್ಲದೆ ಸೂಕ್ಷ್ಮವಾಗಿ ಹೇಳಿರುವುದು ಲೇಖಕರ ಬರಹಗಳಲ್ಲಿ ಎದ್ದುಕಾಣುವ ಅಂಶ. ಲೇಖಕರು ನವ್ಯೋತ್ತರ ಸಾಹಿತ್ಯವನ್ನು ಸಹಜವಾಗಿ ಚರ್ಚಿಸಲಾಗಿದ್ದು, ಕಳೆದ ಶತಮಾನದ ಉತ್ತರಾರ್ಧದಲ್ಲಿ ನಡೆದ ಹಲವು ಬದಲಾವಣೆಗಳನ್ನು ಸ್ಪಷ್ಟವಾಗಿ ಸೂಚಿಸಿದ್ದಾರೆ. ಇಲ್ಲಿಯ ದಾಖಲೆಗಳೆಲ್ಲ ಪ್ರಶ್ನಾತೀತವಾದವುಗಳೆನ್ನಬಹುದು. ಯಾಕೆಂದರೆ, ಕನ್ನಡದ ನವ್ಯೋತ್ತರ ಸಾಹಿತ್ಯದೊಂದಿಗೆ ಅಮರೇಶ ನುಗಡೋಣಿ ಬೆಳೆದಿರುವುದರಿಂದ ಅದನ್ನು ಅವರು ಪ್ರಾಮಾಣಿಕವಾಗಿಯೇ ವಿವರಿಸಿದ್ದಾರೆ.




'ಸಾಮಾಜಿಕ ವಾಸ್ತವ' ಹೈದರಾಬಾದ್ ಕರ್ನಾಟಕ ಪ್ರದೇಶದ ಕಥೆ–ಕಾದಂಬರಿಗಳ ಸಾಹಿತ್ಯ ಅಧ್ಯಯನಕ್ಕೆ ಮಾತ್ರ ಸೀಮಿತವಾಗಿಲ್ಲ. ನಾಗರಿಕ ಜಗತ್ತಿನಲ್ಲಿ ಪ್ರೀತಿ, ಪ್ರೇಮ, ನಂಬಿಕೆ, ವಿಶ್ವಾಸ, ಸತ್ಯ, ಶಾಂತಿ, ಸಮಾನತೆ, ಸಾಮರಸ್ಯದ ಬದುಕಿಗೆ ಅವಶ್ಯಕವಾದ ಜೀವನಮೌಲ್ಯಗಳನ್ನು ಆಪ್ತವಾಗಿ ಪ್ರತಿಪಾದಿಸುವ ಮೂಲಕ ಸಾಮಾಜಿಕ ನ್ಯಾಯಕ್ಕಾಗಿ ಹೊಸದೊಂದು ಆಯಾಮ ನೀಡಿದೆ. ಆದ್ದರಿಂದಲೇ ಈ 'ಸಾಮಾಜಿಕ ವಾಸ್ತವ' ವಿಶಿಷ್ಟ ಕೃತಿಯಾಗಿದೆ. ನವ್ಯೋತ್ತರ ವಿಮರ್ಶೆಯ ಸೂಕ್ಷ್ಮ ಅವಲೋಕನ ಶಕ್ತಿ, ಸಾಂಸ್ಕೃತಿಕ ವಿಮರ್ಶೆಯ ಆಯಾಮ ಮತ್ತು ಕೃತಿಕಾರ–ಕೃತಿ ಸಂಬಂಧಗಳ ಅನ್ವೇಷಣೆಗಳ ಜೊತೆಗೆ ಕನ್ನಡ ಸಂಸ್ಕೃತಿಯ ವಿಶಿಷ್ಟತೆಗಳನ್ನು ಗುರುತಿಸುವ ವಿಶೇಷ ಅಧ್ಯಯನ ಮಾದರಿಯೊಂದು ಅಮರೇಶ ನುಗಡೋಣಿಯವರ ವಿಮರ್ಶೆಯ ಬರಹಗಳಲ್ಲಿ ದೊರೆಯುತ್ತದೆ ಎನ್ನುವುದಕ್ಕೆ ಈ ಕೃತಿಯೇ ಒಂದು ಉತ್ತಮ ನಿದರ್ಶನ. ಹೈದರಾಬಾದ್ ಕರ್ನಾಟಕದ ಪ್ರಮುಖ ಲೇಖಕರ ಕಥೆ–ಕಾದಂಬರಿಗಳ ಸಾಹಿತ್ಯ ಕುರಿತು ವಿಶೇಷವಾಗಿ ಅಧ್ಯಯನ ಮಾಡುವವರಿಗೆ ಈ ಕೃತಿ ಉಪಯುಕ್ತ ಮಾರ್ಗದರ್ಶಿಯಂತಿದೆ.

**ಸಿ. ಎಸ್. ಭೀಮರಾಯ**
ಆಂಗ್ಲ ಉಪನ್ಯಾಸಕರು, ಕೇರಾಫ್ : ಸಿದ್ದಣ್ಣ ಬಿ. ಪೂಜಾರಿ
'ಅಪೂರ್ವ ನಿವಾಸ', ಯಮುನಾ ನಗರ, ಕುಸನೂರ ರಸ್ತೆ
ಕಲಬುರ್ಗಿ – ೫೮೫ ೧೦೫

# ಸಾದರ ಸ್ವೀಕಾರ

**ಚಕ್ರ, ಅಗ್ನಿಸಾಕ್ಷಿ, ಸಯ್ಯರಾಂಡಲ ಬುಡ್ಲೆ** (ತುಳು ಏಕಾಂಕ ನಾಟಕೊಲು) *ಶಿಮಂತೂರು ಚಂದ್ರಹಾಸ ಸುವರ್ಣ*
***ಪುಟ : xii + ೮೦ ಬೆಲೆ: ರೂ. ೧೫೦***

**ಸುವರ್ಣಚಂದ್ರ** *ಶಿಮಂತೂರು ಚಂದ್ರಹಾಸ ಸುವರ್ಣ*
***ಪುಟ : xxxii + ೧೫೪ ಬೆಲೆ: ರೂ. ೨೦೦***

**ಗಾಲ** (ತುಳು ನಾಟಕ)
*ಶಿಮಂತೂರು ಚಂದ್ರಹಾಸ ಸುವರ್ಣ*
***ಪುಟ : xvi + ೯೧ ಬೆಲೆ: ರೂ. ೧೫೦***

ಮೇಲಿನ ಮೂರು ಪುಸ್ತಕಗಳ ಪ್ರಕಾಶಕರು
**ಪೂಜಾ ಪ್ರಕಾಶನ,** ಸಿ/೧, ಜಲಕೀರ್ತಿ ಸಿ.ಎಚ್.ಎಸ್.ಲಿ., ಮಹಿಷ ಮರ್ದಿನಿ ದೇವಸ್ಥಾನದ ಕಯಿತಲ್, ಜಯರಾಜ ನಗರ, ಬೊರಿವಲಿ (ಪ), ಬೊಂಬಯಿ – ೪೦೦ ೦೯೧

**ಲೋಕಗುರುಗಳ ಹಾದಿಯಲ್ಲಿ** (ಡಾ॥ ಗುರುಪಾದ ಮರಿಗುದ್ದಿ ಗೌರವಾಭಿನಂದನ ಗ್ರಂಥ)
*ಸಂ. : ಡಾ॥ ವಿಜಯಕುಮಾರ್ ಎಸ್. ಕಟಗಿಹಳ್ಳಿಮಠ*
***ಪುಟ : xvi + ೫೦೪ = ೫೨೦ ಬೆಲೆ: ರೂ. ೪೦೦***
**ಶ್ರೀ ನಿಜಲಿಂಗೇಶ್ವರ ಗ್ರಂಥಮಾಲೆ,** ಜಗದ್ಗುರು ಶ್ರೀ ದುರದುಂಡೀಶ್ವರ ಸಿದ್ಧಸಂಸ್ಥಾನಮಠ, ನಿಡಸೋಸಿ, ಬೆಳಗಾವಿ ಜಿಲ್ಲೆ, ಕರ್ನಾಟಕ

**ಶಿವಾನುಭವ ಸೂತ್ರದ ವಿಳಾಸ** (ಜಮಖಂಡಿ ಓಲೆಮಠ ಶ್ರೀಗಳ ಪಿಎಚ್.ಡಿ. ಮಹಾಪ್ರಬಂಧ)
*ಸಂ. : ಅಶೋಕ ನರೋಡೆ*
***ಪುಟ : xvi + ೧೨೬ = ೧೪೨ ಬೆಲೆ: ರೂ. ೧೧೦***
**ಶ್ರೀ ಕುಮಾರೇಶ್ವರ ಗ್ರಂಥಮಾಲೆ,** ಓಲೆಮಠ ಜಮಖಂಡಿ, ನವಿಲುತೀರ್ಥ, ಸವದತ್ತಿ, ಜಮಖಂಡಿ–೫೮೭ ೩೦೧

**ಕರಬಂಧಿ ಡಿಕ್ಟೇಟರ್ ಬಾಸಗೋಡ ರಾಮ ನಾಯಕ**
*ಶಾಂತಾರಾಮ ನಾಯಕ ಹಿಚಕಡ*
***ಪುಟ : ೭೦ ಬೆಲೆ: ರೂ. ೭೦***
**ಶಾಂತಾರಾಮ ನಾಯಕ ಹಿಚಕಡ,** ಅಂಕೋಲಾ, (ಉತ್ತರ ಕನ್ನಡ), ಕರ್ನಾಟಕ

**ಏಳು ದಿನಗಳಲ್ಲಿ ಕೇರಳ** (ಕೇರಳ ಪ್ರವಾಸಕಥನ)
*ಅಶೋಕ ನರೋಡೆ*
***ಪುಟ : viii + ೧೪೦ = ೧೪೮ ಬೆಲೆ: ರೂ. ೧೦೦***
**ನಿವೇದಿತ ಪ್ರಕಾಶನ,** ನಂ. ೩೪೩೭, ೧ನೇ ಮಹಡಿ, ೪ನೇ ಮುಖ್ಯರಸ್ತೆ, ೯ನೇ ಅಡ್ಡರಸ್ತೆ, ಶಾಸ್ತ್ರೀನಗರ, ಬನಶಂಕರಿ ೨ನೇ ಹಂತ, ಬೆಂಗಳೂರು – ೨೮

**ಹಿಂದೂ – ಬದುಕಿನ ಸಮೃದ್ಧ ಅಡಕಲು**
*ಮರಾಠಿ ಮೂಲ : ಡಾ॥ ಭಾಲಚಂದ್ರ ನೇಮಾಡೆ*
*ಕನ್ನಡಕ್ಕೆ : ಚಂದ್ರಕಾಂತ ಪೋಕಳೆ*
***ಪುಟ : ೬೦೮ ಬೆಲೆ: ರೂ. ೩೯೦***

ನೀವೆ ಮಾಡಿ ಬಳಸಿ – **ಬಿಸಿಲು ಒಲೆ** *ಜಿ. ವಿ. ಗಣೇಶಯ್ಯ*
***ಪುಟ : ೮೮ ಬೆಲೆ: ರೂ. ೭೦***

**ಸರ್ವಾಂಗೀಣ ಬೆಳವಣಿಗೆಗಾಗಿ ಮಕ್ಕಳಲ್ಲಿ ವೈಜ್ಞಾನಿಕ ಮನೋವೃತ್ತಿ – ಪೋಷಕರ ಜವಾಬ್ದಾರಿ**
*ಎಂ. ಅಬ್ದುಲ್ ರೆಹಮಾನ್ ಪಾಷ*
***ಪುಟ : ೪೦ ಬೆಲೆ: ರೂ. ೨೫***

**ವೈಜ್ಞಾನಿಕ ಮನೋವೃತ್ತಿ – ಮಕ್ಕಳ ಹಕ್ಕು, ಶಿಕ್ಷಕರ ಹೊಣೆ** *ಎಂ. ಅಬ್ದುಲ್ ರೆಹಮಾನ್ ಪಾಷ*
***ಪುಟ : ೩೬ ಬೆಲೆ: ರೂ. ೨೫***

ಮೇಲಿನ ನಾಲ್ಕು ಪುಸ್ತಕಗಳ ಪ್ರಕಾಶಕರು
**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧

**ವಿಷಯ ವಚನಸಂಪುಟಗಳು – ಸಂಪುಟ–೮ ಪುರಾತನರು/ಪ್ರಮಥರು, ಪ್ರಾಣ, ಬಯಲು/ಶೂನ್ಯ, ಭಕ್ತ–ಭಕ್ತಿ** *ಸಂ. : ಡಾ॥ ಸಂಗಮೇಶ ಸವದತ್ತಿಮಠ*
***ಪುಟ : xxxii + ೮೧೦ ಬೆಲೆ: ರೂ. ೩೦೦***
**ಶ್ರೀ ಚೆನ್ನಬಸವೇಶ್ವರ ಸಂಸ್ಥಾನ ಹಿರೇಮಠ,** ಸುಕ್ಷೇತ್ರ ಹಾರಕೂಡ – ೫೮೫ ೪೩೭, ಬಸವಕಲ್ಯಾಣ ತಾಲೂಕು, ಬೀದರ ಜಿಲ್ಲೆ

**ದೀಪ ಹಚ್ಚಿಟ್ಟ ರಾತ್ರಿ** (ಐವತ್ತು ಗಜಲ್‌ಗಳು) ಪ್ರಕಾಶ ಬಿ.
***ಪುಟ : xx + ೫೪ ಬೆಲೆ: ರೂ. ೮೦***
**ಪ್ರತಿಭಾನ ಸಾಂಸ್ಕೃತಿಕ ಹಾಗೂ ಬೌದ್ಧಿಕ ವೇದಿಕೆ,** ನಂ. ೧೩೩, ಶಿವಾದ್ವೈತ, ಸೆಕ್ಟರ್ – ೨, ಶಿವಬಸವ ನಗರ, ಬೆಳಗಾವಿ – ೫೯೦ ೦೧೦

# ಮಾತೃಭಾಷೆಗಳ ಸಂರಕ್ಷಣೆ: ಸಾಧಕ, ಬಾಧಕಗಳು



*ಅಂಡಮಾನ್ ದ್ವೀಪದ ಬೋ ಎಂಬ ಬುಡಕಟ್ಟಿಗೆ ಸೇರಿದ 'ಬೋಆ ಸೀನಿಯರ್'. ಈಕೆ ಬೋ ಭಾಷೆಯನ್ನು ಮಾತಾಡುತ್ತಿದ್ದ ಕೊಟ್ಟ ಕೊನೆಯ ವ್ಯಕ್ತಿ.*

**ಭಾ**ರತವು ಜನವರಿ ೨೬, ೨೦೧೦ರಂದು ಗಣತಂತ್ರ ದಿನವನ್ನು ಸಂಭ್ರಮದಿಂದ ಆಚರಣೆ ಮಾಡುತ್ತಿದ್ದ ಹೊತ್ತಿನಲ್ಲಿಯೇ, ಅದರ ಒಂದು ಭಾಗವಾದ ಅಂಡಮಾನ್ ದ್ವೀಪದಲ್ಲಿ 'ಬೋ' ಎಂಬ ಭಾಷೆಯೊಂದು ಕೊನೆಯುಸಿರೆಳೆಯಿತು. ಹೌದು, ಭಾಷೆಗಳೂ ಸಾಯುತ್ತವೆ. ಅಂಡಮಾನ್ ದ್ವೀಪದ ಬೋ ಎಂಬ ಬುಡಕಟ್ಟಿಗೆ ಸೇರಿದ ಬೋಆ ಸೀನಿಯರ್ ಎಂಬ ಮಹಿಳೆ ತನ್ನ ೮೫ನೇ ವಯಸ್ಸಿನಲ್ಲಿ ನಿಧನರಾದರು. ಅವರು ಬೋ ಭಾಷೆಯನ್ನು ಮಾತಾಡುತ್ತಿದ್ದ ಕೊಟ್ಟಕೊನೆಯ ವ್ಯಕ್ತಿಯಾಗಿದ್ದರು. ಈ ಕುರಿತು ಮಾನವವಿಜ್ಞಾನಿ ಸ್ಟೀಫನ್ ಕೊರಿ ಎನ್ನುವವರು ಹೇಳುತ್ತಾರೆ : "ಬೋಆ ಸೀನಿಯರ್ ಸಾವಿನೊಂದಿಗೆ, ಆ ಮೂಲಕ ಆದ ಬೋ ಭಾಷೆಯ ಅಳಿವಿನೊಂದಿಗೆ ಮಾನವ ಸಮಾಜದ ಅನನ್ಯ ಸಂಪತ್ತೊಂದು ಈಗ ಕೇವಲ ಒಂದು ನೆನಪಾಗಿ ಉಳಿದಿದೆ. ಬೋಆ ಅವರ ಸಾವು, ಬೇರೆ ಬುಡಕಟ್ಟುಗಳ ಸಂದರ್ಭದಲ್ಲಿ ಇದಾಗಬಾರದು ಎಂಬುದರ ಎಚ್ಚರಿಕೆಯನ್ನು ನೀಡುತ್ತದೆ."

ಹೌದು, ಭಾಷೆಗಳೂ ಸಾಯುತ್ತವೆ. ಭಾಷಾವಿಜ್ಞಾನಿಗಳ ಅಂದಾಜಿನ ಪ್ರಕಾರ ಕ್ರಿ. ಪೂ. ೮೦೦೦ರಲ್ಲಿ ಜಗತ್ತಿನಲ್ಲಿ ಸುಮಾರು ೨೦,೦೦೦ ಭಾಷೆಗಳಿದ್ದವು. ಇಂದು ಅವುಗಳ ಸಂಖ್ಯೆ ಕೇವಲ ೬೯೦೯. ಇವುಗಳಲ್ಲಿಯೂ ಅರ್ಧದಷ್ಟು ಮಾತೃಭಾಷೆಗಳು ಅವಸಾನದ ಹಾದಿಯಲ್ಲಿವೆ. ಭಾರತದಲ್ಲಿ ಇಂದು ೧೬೫೦ ಮಾತೃಭಾಷೆಗಳನ್ನು ಆಡುವ ಜನ ಇದ್ದಾರೆ. ಇವುಗಳಲ್ಲಿ ೧೦ ಲಕ್ಷಕ್ಕಿಂತ ಹೆಚ್ಚು ಜನ ಮಾತಾಡುವ ಭಾಷೆಗಳು ಕೇವಲ ೧೫೦ ಮಾತ್ರ. ಉಳಿದವೆಲ್ಲಾ ಕ್ರಮೇಣ ಅಳಿದುಹೋಗುವ ಅಪಾಯದಲ್ಲಿವೆ. ಭಾಷೆಗಳ ಅಳಿವಿನ ಕುರಿತು ನಾವೇಕೆ ಇಷ್ಟು ಚಿಂತಿಸುತ್ತಿದ್ದೇವೆ ? ಯಾವುದೇ ಭಾಷೆ ಕೇವಲ ವಾಕ್ಯ, ವ್ಯಾಕರಣ, ಮಾತುಕತೆಗಳ ಕಂತೆಯಲ್ಲ. ಭಾಷೆ ಒಂದು ವಿಶಿಷ್ಟ ಸಂಸ್ಕೃತಿ, ಇತಿಹಾಸ, ಜನಪದ, ಒಂದು ಸಮುದಾಯದ ಅನನ್ಯ ಲೋಕಜ್ಞಾನ ಮತ್ತು ವಿವೇಕದ ಶ್ರೀಮಂತ ಭಂಡಾರವಾಗಿರುತ್ತದೆ. ಆ ಭಾಷೆ ಬಳಕೆಯಲ್ಲಿದ್ದು ಜೀವಂತ ಇರುವವರೆಗೆ ಅದು ನಿರಂತರ ಬೆಳೆಯುತ್ತಾ ಹೋಗುತ್ತದೆ. ಹೊಸ ವಿದ್ವತ್ತೂ ಸಂಗ್ರಹವಾಗುತ್ತದೆ. ಭಾಷೆ ಅಳಿದರೆ, ಅದರೊಂದಿಗೆ ಆ ಸಂಪತ್ತೂ ಸಮಾಧಿಯಾಗುತ್ತದೆ.

ಭಾಷೆ ಅಳಿಯಲು ಹೇಗೆ ಸಾಧ್ಯ ? ಒಂದು ಭಾಷೆಯನ್ನು ಆಡುವ ಜನರು ಯಾವುಯಾವುದೋ ಕಾರಣಕ್ಕಾಗಿ ಕಡಿಮೆ ಆಗುತ್ತಾ ಹೋಗುವುದು; ಆ ಸಮುದಾಯದ ಮುಂದಿನ ಜನಾಂಗದವರು ಹೊಟ್ಟೆಪಾಡು, ಶಿಕ್ಷಣ, ಉದ್ಯೋಗ ಇತ್ಯಾದಿ ಕಾರಣಕ್ಕಾಗಿ ಸಾಮೂಹಿಕವಾಗಿ ವಲಸೆ ಹೋಗುವುದು; ಹೊಸ ಭಾಷೆಯನ್ನು ಅಳವಡಿಸಿಕೊಳ್ಳುವುದು; ಮಾತೃಭಾಷೆಯನ್ನು ಮರೆಯುವುದು ಇವೆಲ್ಲವೂ ಭಾಷೆಯ ಅವನತಿಗೆ ಕಾರಣವಾಗುತ್ತವೆ. ಕಡೆಗೆ, ಅಂಡಮಾನದ ಬೋ ಭಾಷೆಯ ಸಂದರ್ಭದಲ್ಲಿ ಆದ ಹಾಗೆ, ಆ ಭಾಷೆಯನ್ನು ಆಡುವ ಕೊನೆಯ ವ್ಯಕ್ತಿಗಳು ಕಣ್ಮುಚ್ಚಿದಾಗ ಆ ಭಾಷೆಯೂ ಇತಿಹಾಸದ ಗರ್ಭದಲ್ಲಿ ಸೇರಿ ಮರೆಯಾಗುತ್ತದೆ. ಅದರಲ್ಲಿ ಅಡಗಿದ್ದ ಪಾರಂಪರಿಕ ಸಂಪತ್ತು ಮಣ್ಣುಪಾಲಾಗುತ್ತದೆ.

ಇನ್ನು, ರಾಜ್ಯದ ಮಾತೃಭಾಷೆಗಳ ವಿಚಾರಕ್ಕೆ ಬರುವುದಾದರೆ, ಕರ್ನಾಟಕದಲ್ಲಿ ಕನ್ನಡವಲ್ಲದ ಇತರ ಮಾತೃಭಾಷೆಗಳಲ್ಲಿ ಪ್ರಾಥಮಿಕ ಶಿಕ್ಷಣವನ್ನು ನೀಡುವುದು ಸರಿಯೇ ಎಂಬುದರ ಪ್ರಶ್ನೆಯ ಬಗ್ಗೆಯೂ ನಾವು ಆಲೋಚಿಸಬೇಕು. ಉದಾಹರಣೆಗೆ, ಉರ್ದುವಿನಲ್ಲಿ ಆರನೇ ಅಥವಾ ಹತ್ತನೇ ತರಗತಿಯವರೆಗೆ ಓದಿದ ಮಕ್ಕಳು ಏನು ಮಾಡುತ್ತಾರೆ ? ಸಾಮಾನ್ಯವಾಗಿ ಇವರು ದುಬಾರಿ ಖಾಸಗಿ, ಇಂಗ್ಲಿಷ್ ಮಾಧ್ಯಮ ಶಾಲೆಗೆ ಹೋಗುವ ಸಾಮರ್ಥ್ಯವಿಲ್ಲದಿರುವ ಬಡಕುಟುಂಬದ ಮಕ್ಕಳು. ಅವರಲ್ಲಿ ಹೆಚ್ಚೆಂದರೆ ಬಹುತೇಕವಾಗಿ ಹತ್ತನೇ ತರಗತಿಗೇ ಶಿಕ್ಷಣಕ್ಕೆ ವಿದಾಯ ಹೇಳಿ ಯಾವುದಾದರೂ ನೌಕರಿಯನ್ನೋ, ವೃತ್ತಿಯನ್ನೋ ನೋಡಿಕೊಳ್ಳುತ್ತಾರೆ. ಉರ್ದು ಮಾಧ್ಯಮದಲ್ಲಿ ಹತ್ತನೇ ತರಗತಿಯವರೆಗೆ ಓದಿದ ಮಕ್ಕಳ ವಿದ್ಯಾರ್ಹತೆಗೆ ಎಂಥ ನೌಕರಿ ಸಿಗಬಹುದು ಎಂದು ನಮಗೆಲ್ಲಾ ಗೊತ್ತು. ಇವರೆಲ್ಲಾ ತುಂಬ ಕಡಿಮೆ ಆದಾಯದ ಕೆಳಸ್ತರದ ಕಸಬು, ಸೇವೆ, ವ್ಯಾಪಾರಗಳಲ್ಲಿ ತೃಪ್ತರಾಗಬೇಕಾಗುತ್ತದೆ. ಇತರರಿಗೆ ಇರುವ ಬೆಳವಣಿಗೆಯ ಅವಕಾಶದಿಂದ ಇವರು ವಂಚಿತರಾಗುತ್ತಾರೆ. ಅಂತೆಯೇ ದೇಶದ ಉತ್ಪಾದಕತೆಯಲ್ಲಿ ಪ್ರಯೋಜನಕಾರಿಯಾಗಬಲ್ಲ ಮಾನವ ಸಂಪನ್ಮೂಲ ವ್ಯರ್ಥವಾಗುತ್ತದೆ. ಇನ್ನು ಕರ್ನಾಟಕದಲ್ಲಿ ತೆಲುಗು, ತಮಿಳು, ಮರಾಠಿ ಇತ್ಯಾದಿ ಪ್ರಮುಖ ಭಾಷೆಗಳಲ್ಲಿ ಔಪಚಾರಿಕ ಶಿಕ್ಷಣ ನೀಡಿದರೂ ಬೆಳಣಿಗೆಯಲ್ಲಿ ತೊಡಕು ಇದ್ದದ್ದೇ.

ಹಾಗೆ ನೋಡಿದರೆ ಲಿಪಿ, ಬರವಣಿಗೆ, ಸಾಹಿತ್ಯ, ಪಠ್ಯಪುಸ್ತಕ, ಉರ್ದುವನ್ನು ಆಧರಿಸಿದ ಅನೇಕ ಸಂಸ್ಥೆಗಳು, ಪತ್ರಿಕೆಗಳು ಇತ್ಯಾದಿ ಇರುವ ಉರ್ದು, ತೆಲುಗು, ತಮಿಳು, ಮಾರಾಠಿ ಇತ್ಯಾದಿ ಮಾತೃಭಾಷೆಗಳ ಸ್ಥಿತಿಯೇ ಹೀಗಿದೆ ಎಂದಾಗ ಇನ್ನು ಚಿಕ್ಕ ಚಿಕ್ಕ ಭಾಷೆಗಳಾದ ಕೊರಗ, ಬಡಗ, ಯರವ, ಇರುಳ, ಸೋಲಿಗ, ಗೌಳಿ, ಬಂಜಾರ ಇತ್ಯಾದಿ ಭಾಷೆಗಳ ಸನ್ನಿವೇಶ ಇನ್ನೂ ಕಠಿಣ.

---

**ಎಂ. ಅಬ್ದುಲ್ ರೆಹಮಾನ್ ಪಾಷ**

ಪ್ರಸ್ತುತ ಸುಮಾರು ೫೦ಕ್ಕೂ ಹೆಚ್ಚು ವಿಭಿನ್ನ ಮಾತೃಭಾಷೆಗಳಿವೆ. ಈಗಿನ ಸಂಶೋಧನೆಗಳ ಪ್ರಕಾರ ಅವುಗಳಲ್ಲಿ ಕೊರಗ, ಬಡಗ, ಯರವ, ಇರುಳ, ಸೋಲಿಗ, ಗೌಳಿ, ಜೇನುಕುರುಬ ಮತ್ತು ಬೆಟ್ಟಕುರುಬ ಇವು ಮೇಲೆ ಚರ್ಚಿಸಿದ ಕಾರಣಕ್ಕಾಗಿ ಬಹಳ ಬೇಗನೆ ನಶಿಸಿಹೋಗುವ ಅಪಾಯದಲ್ಲಿವೆ. ಇನ್ನು ಉತ್ತರ ಕರ್ನಾಟಕದ ಸಿದ್ದಿ ಬುಡಕಟ್ಟು ಮತ್ತು ಅಲೆಮಾರಿ ಹಕ್ಕಿಪಿಕ್ಕಿ ಜನಾಂಗದ ಭಾಷೆಗಳಂತೂ ಇಂದೋ ನಾಳೆಯೋ ಕಾಣೆಯಾಗುವ ಎಲ್ಲಾ ಅಪಾಯಗಳಿವೆ. ಇವುಗಳ ಅಳಿವಿನೊಂದಿಗೆ ಆಯಾ ಬುಡಕಟ್ಟುಗಳ ಶ್ರೀಮಂತ ಸಂಸ್ಕೃತಿ, ವಿವೇಕವೂ ಕಣ್ಮರೆಯಾಗುತ್ತವೆ. ಇಂಥ ಗಂಭೀರ ಸನ್ನಿವೇಶಕ್ಕೆ ಜವಾಬ್ದಾರಿಯುತ ಪ್ರತಿಕ್ರಿಯೆಯಾಗಿ ಬಂದಿದ್ದೇ 'ಅಂತರರಾಷ್ಟ್ರೀಯ ಮಾತೃಭಾಷಾ ದಿನಾಚರಣೆ.'



***ಯುನೆಸ್ಕೋದ ಡೈರೆಕ್ಟರ್ ಜನರಲ್ ಐರಿನಾ ಬೊಕೊವಾ***

**ಹಿನ್ನೆಲೆ :** ವಿಶ್ವಸಂಸ್ಥೆಯು ಮುಂದಿನ ಹದಿನೈದು ವರ್ಷಗಳ ಅವಧಿಯಲ್ಲಿ ಜಾಗತಿಕ ಮಟ್ಟದಲ್ಲಿ ಸುಸ್ಥಿರ ಅಭಿವೃದ್ಧಿಗಾಗಿ ಹಲವು ಕಾರ್ಯಸೂಚಿಗಳನ್ನು ಹಾಕಿಕೊಂಡಿದೆ. ಭಾರತವೂ ಸೇರಿದಂತೆ, ಇದರ ೧೯೩ ಸದಸ್ಯರಾಷ್ಟ್ರಗಳು ಈ ಗುರಿಗಳನ್ನು ಒಪ್ಪಿಕೊಂಡು ಕಾರ್ಯೋನ್ಮುಖವಾಗಿವೆ. ಈ ಸಮಗ್ರ ಕಾರ್ಯಕ್ರಮದ, ಸುಸ್ಥಿರ ಅಭಿವೃದ್ಧಿ ಗುರಿ ಸಂಖ್ಯೆ ೪ರಲ್ಲಿ, 'ಪ್ರತಿಯೊಬ್ಬ ಮಹಿಳೆ ಮತ್ತು ಪುರುಷರು ತಾವು ಬಯಸುವ ಎಲ್ಲವನ್ನೂ ಆಗಲು ಮತ್ತು ತಮ್ಮ ಸಮಾಜದ ಆಗುಹೋಗುಗಳಲ್ಲಿ ಸಂಪೂರ್ಣವಾಗಿ ಭಾಗವಹಿಸಲು ಸಮರ್ಥ ರಾಗುವುದಕ್ಕೆ ಅಗತ್ಯವಾದ ಕೌಶಲ್ಯ ಜ್ಞಾನ ಮತ್ತು ಮೌಲ್ಯಗಳನ್ನು ಪಡೆಯುವ ನಿಟ್ಟಿನಲ್ಲಿ ಗುಣಮಟ್ಟದ ಶಿಕ್ಷಣವಷ್ಟೇ ಅಲ್ಲ, ಪ್ರತಿಯೊಬ್ಬರಿಗೂ ಜೀವನ ಪರ್ಯಂತದ ಕಲಿಕೆಯ ಸಾಧ್ಯತೆಯ ಮೇಲೆ ಒತ್ತು ಕೊಡಲಾಗಿದೆ.' ಇದರಲ್ಲಿ ಬೋಧನೆ ಮತ್ತು ಕಲಿಕೆಯಲ್ಲಿ ಮಾತೃಭಾಷೆಯ ಬಳಕೆಯ ಮಹತ್ವವನ್ನು ಗಂಭೀರವಾಗಿ ಪರಿಗಣಿಸಬೇಕು; ಮತ್ತು ಈ ಮೂಲಕ ಭಾಷಿಕ ವೈವಿಧ್ಯಕ್ಕೆ ಉತ್ತೇಜನ ಹಾಗೂ ಸಂರಕ್ಷಣೆ ನೀಡಬೇಕು ಎಂಬ ಆಶಯವನ್ನು ವ್ಯಕ್ತಪಡಿಸಲಾಗಿದೆ.

'ಕಲಿಕೆಯಲ್ಲಿ ಮಾತೃಭಾಷೆಯ ಬಳಕೆ'ಯ ಕುರಿತು ಇಲ್ಲಿ ಒಂದು ಆತಂಕವಿದೆ. ಹೆಚ್ಚಿನ ಬುಡಕಟ್ಟು ಭಾಷೆಗಳು ತಮ್ಮದೇ ಆದ ವಿಶಿಷ್ಟ ಸಂಸ್ಕೃತಿಯನ್ನು ಹೊಂದಿರುತ್ತವೆ ಎನ್ನುವುದು ನಿಜವಾದರೂ, ಆಯಾ ಭಾಷೆಗಳು ಕಟ್ಟಿಕೊಡುವ ಅನುಭವವು ಆಯಾ ಬುಡಕಟ್ಟಿನ ಜನಜೀವನಕ್ಕೆ ಸೀಮಿತವಾಗಿರುತ್ತದೆ. ಉದಾಹರಣೆಗೆ, ಜೇನುಕುರುಬರು ಆಡುವ ಭಾಷೆಯ ಬಳಕೆ ಮತ್ತು ಅದರ ಸಾಮರ್ಥ್ಯ ಜೇನುಕುರುಬರು ಪಾರಂಪರಿಕವಾಗಿ ಬದುಕುತ್ತಿರುವ ಜೀವನ ಶೈಲಿಗೆ, ಅನುಭವಕ್ಕೆ ಸೀಮಿತವಾಗಿರುತ್ತದೆ. ಅದರಿಂದ ಹೊರಗಿನ ಅನುಭವದ ಮಟ್ಟಿಗೆ ಆ ಬುಡಕಟ್ಟು ಮಾತೃಭಾಷೆಯು ಅಸಮರ್ಥವಾಗಿರುತ್ತದೆ.

ಅಲ್ಲದೆ, ಭಾಷೆ ಜೀವಂತವಾಗಿರುವುದು ಅವುಗಳನ್ನು ಆಡುವ ಜನ ಅದೇ ಪರಿಸರದಲ್ಲಿ, ಜೀವನವಿಧಾನದಲ್ಲಿ ಉಳಿದರೆ ಮಾತ್ರ ಎನ್ನುವುದನ್ನು ಕಂಡಿದ್ದೇವೆ. ಇದರರ್ಥ ಯಾವುದೇ ಬುಡಕಟ್ಟಿನ ಸಂಸ್ಕೃತಿ ಅಥವಾ ಮಾತೃಭಾಷೆಯನ್ನು ಉಳಿಸಬೇಕು ಎಂದರೆ ಆ ಬುಡಕಟ್ಟು ಸಾರ್ವತ್ರಿಕವಾದ ಶಿಕ್ಷಣ, ಆರ್ಥಿಕ, ಸಾಮಾಜಿಕ, ರಾಜಕೀಯ ಅಭಿವೃದ್ಧಿಯ ಫಲವನ್ನು ಉಣ್ಣಬಾರದು ಎಂದರ್ಥವೇ ? ಮಾತೃಭಾಷೆಯನ್ನು ಸಂರಕ್ಷಿಸುವ ನೆಪದಲ್ಲಿ ಅವರು ತಮ್ಮ ಸಾಂಪ್ರದಾಯಿಕ ಚೌಕಟ್ಟಿನಲ್ಲಿಯೇ ಹಿಂದುಳಿದಿರ ಬೇಕೇ ಎಂಬ ಪ್ರಶ್ನೆಯನ್ನು ಎದುರಿಸಬೇಕಾಗುತ್ತದೆ. ಈ ವರ್ಷದ ಅಂತರರಾಷ್ಟ್ರೀಯ ಮಾತೃಭಾಷಾ ದಿನಾಚರಣೆಯ ವಿಷಯ : "ಗುಣಮಟ್ಟದ ಶಿಕ್ಷಣ, ಶಿಕ್ಷಣದ ಭಾಷೆ ಮತ್ತು ಕಲಿಕೆಯ ಸಾಧನೆಗಳು' ಎಂದಾಗಿತ್ತು. ಇದನ್ನಷ್ಟು ಗಮನಿಸೋಣ.

**ಗುಣಮಟ್ಟದ ಶಿಕ್ಷಣ :** "ಗುಣಮಟ್ಟದ ಶಿಕ್ಷಣವು ಮಹಿಳೆಯರು ಮತ್ತು ಪುರುಷರು ಮತ್ತು ಅವರ ಸಮುದಾಯಗಳ ಸಬಲೀಕರಣದ ಬುನಾದಿಯಾಗಿದೆ. ಬಹುಭಾಷಿತ್ವದ ಸನ್ನಿವೇಶದಲ್ಲಿ ಜನರ ಮಾತೃಭಾಷೆಗಳು ಇಂಥ ಗುಣಮಟ್ಟದ ಶಿಕ್ಷಣದ ಅವಿಭಾಜ್ಯ ಅಂಗಗಳಾಗಿವೆ" ಎನ್ನುತ್ತಾರೆ ಯುನೆಸ್ಕೋದ ಡೈರೆಕ್ಟರ್ ಜನರಲ್ ಐರಿನಾ ಬೊಕೊವಾ. ಇಲ್ಲಿ ಶಿಕ್ಷಣ ಎನ್ನುವುದನ್ನು ಎರಡು ರೀತಿಯಲ್ಲಿ ಅರ್ಥ ಮಾಡಿಕೊಳ್ಳಬೇಕಾಗುತ್ತದೆ. ಅನೌಪಚಾರಿಕ ಮತ್ತು ಔಪಚಾರಿಕ ಶಿಕ್ಷಣ. ವೈಯಕ್ತಿಕ ಬೆಳವಣಿಗೆ ಮತ್ತು ಸಮುದಾಯದ ಅಭಿವೃದ್ಧಿಯಲ್ಲಿ ಜನರು ತೊಡಗಲು ಅಗತ್ಯವಾದ ಕೌಶಲಗಳು ಮತ್ತು ಜೀವನ ಶಿಕ್ಷಣ. ಇವು ಸಾಮಾನ್ಯವಾಗಿ ಅನೌಪಚಾರಿಕ ರೀತಿಯಲ್ಲಿ ನಡೆಯುತ್ತವೆ. ಯಾವುದೇ ಸಂಘಟಿತ ಶಿಕ್ಷಣ ವ್ಯವಸ್ಥೆಯಲ್ಲಿ ನಡೆಯುವುದಿಲ್ಲ. ಜನರೊಂದಿಗೆ ಕೆಲಸ ಮಾಡುವ ಸಮುದಾಯ ಸಂಸ್ಥೆಗಳು ಇದನ್ನು ಅಭಿವೃದ್ಧಿ ಯೋಜನೆಗಳ ಜೊತೆಜೊತೆಯಲ್ಲಿಯೇ ಮಾಡುತ್ತಾ ಹೋಗಬೇಕು. ಜನ ಇಂಥ ಶಿಕ್ಷಣವನ್ನು ತಮ್ಮ ತಮ್ಮ ಮಾತೃಭಾಷೆಗಳಲ್ಲಿಯೇ ಪಡೆಯುವ ಹಕ್ಕನ್ನು ಹೊಂದಿರುತ್ತಾರೆ; ಇದು ವಿವೇಕಯುತವೂ ಕೂಡ. ತಾವಾಡುವ ಭಾಷೆಯಲ್ಲಷ್ಟೇ ಅವರ ವ್ಯಕ್ತಿತ್ವವು ಸಂಪೂರ್ಣವಾಗಿ ಅರಳಲು ಸಾಧ್ಯ. ಇದು ಬಹುಮಟ್ಟಿಗೆ ಆಡುಮಾತಿನಲ್ಲಿ ನಡೆಯುತ್ತದೆ. ಅಭಿವೃದ್ಧಿ ಯೋಜನೆ ಗಳಲ್ಲಿ ಜನರನ್ನು ಸಕ್ರಿಯ ಸಹಭಾಗಿ ಗಳನ್ನಾಗಿ ತೊಡಗಿಸಿಕೊಳ್ಳುವಲ್ಲಿ ಇದು ಅನಿವಾರ್ಯವೂ ಹೌದು.

ಇನ್ನೊಂದು ಬಗೆಯ ಶಿಕ್ಷಣ, ಔಪಚಾರಿಕ ಶಿಕ್ಷಣ. ಶಾಲೆ, ಕಾಲೇಜು, ವಿಶ್ವವಿದ್ಯಾಲಯ ಗಳಲ್ಲಿ ನೀಡಲಾಗುವ ಶಿಕ್ಷಣ. ಇದು ನಮ್ಮನ್ನು ಹೆಚ್ಚು ವಿಶಾಲವಾದ ಜಗತ್ತಿಗೆ ಪರಿಚಯಿಸುತ್ತದೆ. ಹೆಚ್ಚು ವ್ಯಾಪಕವಾದ ಸಾಮಾಜಿಕ, ಆರ್ಥಿಕ, ರಾಜಕೀಯ ಬೆಳವಣಿಗೆಗಳ ಸಾಧ್ಯತೆಗಳನ್ನು ತೆರೆದಿಡುತ್ತದೆ. ವ್ಯಕ್ತಿಗಳು ದೇಶದ ಒಟ್ಟಾರೆ ಉತ್ಪಾದಕತ್ವದಲ್ಲಿ ಭಾಗವಹಿಸಲು ಔಪಚಾರಿಕ ಶಿಕ್ಷಣ ಪೂರಕವಾಗುತ್ತದೆ. ಆದರೆ ಇಂಥ ಔಪಚಾರಿಕ, ಅದರಲ್ಲೂ ಮುಖ್ಯವಾಗಿ ಉನ್ನತ ಮಟ್ಟದ ಶಿಕ್ಷಣ ತರಬೇತಿಯನ್ನು ಮಾತೃಭಾಷೆ ಯಲ್ಲಿಯೇ ನೀಡಲಾದೀತೇ ಎಂಬ ಪ್ರಶ್ನೆಯನ್ನು ಉತ್ತರಿಸುವುದು ಸುಲಭವಲ್ಲ.

**ಕರ್ನಾಟಕದ ಬಹುಭಾಷಿತ್ವ :** ನಾವು ಕೆಲವೊಮ್ಮೆ ನಮ್ಮ ರಾಜ್ಯವನ್ನು ಕನ್ನಡ ನಾಡು ಎನ್ನುತ್ತೇವೆ. ನವೆಂಬರ್ ೧ರಂದು 'ಕನ್ನಡ ರಾಜ್ಯೋತ್ಸವ'ವನ್ನು ಆಚರಿಸಲಾಗುತ್ತದೆ. ಇದು ಕೇವಲ ಅಭಿಮಾನದ ಸಂಕೇತವಷ್ಟೆ. ವಾಸ್ತವದಲ್ಲಿ ನಮ್ಮದು ಕರ್ನಾಟಕ. ಅಂದು ಆಚರಿಸುವುದು 'ಕರ್ನಾಟಕ ರಾಜ್ಯೋತ್ಸವ'ವನ್ನು. ಅದು ಭಾಷೋತ್ಸವ ದಿನ ಅಲ್ಲ, ರಾಜ್ಯೋತ್ಸವ ದಿನ. ಸಂವಿಧಾನದ ಪ್ರಕಾರ, ಹಿಂದಿಯು ಭಾರತದ 'ರಾಷ್ಟ್ರಭಾಷೆ'ಯಲ್ಲ; (ಇಂಗ್ಲಿಷ್ ಜೊತೆಯಲ್ಲಿ) ಅದು ದೇಶದ 'ಆಡಳಿತದ ಭಾಷೆ'. ಅಂತೆಯೇ ಕನ್ನಡ ಕರ್ನಾಟಕದ 'ರಾಜ್ಯಭಾಷೆ'ಯಲ್ಲ; ಅದು ರಾಜ್ಯದ 'ಆಡಳಿತ ಭಾಷೆ'. ನಾಡಿನ ಬಹುಭಾಷಿತ್ವದ ಸಂದರ್ಭದಲ್ಲಿ ಇದನ್ನು ನೆನಪಿಡುವುದು ಒಳ್ಳೆಯದು.

ಕರ್ನಾಟಕದ ಬಹುತೇಕ ಜನರಿಗೆ ಕನ್ನಡ ಅರ್ಥವಾಗುತ್ತದೆ; ಮಾತಾಡಬಲ್ಲರು, ಓದು ಬರಹ ಬಲ್ಲರು. ಆದರೆ ತಮ್ಮ 'ಮಾತೃಭಾಷೆ' ಯಾವುದು ಎಂಬ ಪ್ರಶ್ನೆ ಬಂದಾಗ ಕನ್ನಡ ಎಂದು ಒಪ್ಪಿಕೊಳ್ಳುವ ಜನ ಕೇವಲ ೬೬% ಮಾತ್ರ. ಉಳಿದವರ ಮಾತೃಭಾಷೆಗಳೆಂದರೆ : ಉರ್ದು : ೧೦.೫%, ತೆಲುಗು : ೮%, ಮರಾಠಿ : ೩.೬%, ತಮಿಳು : ೩.೫%, ತುಳು : ೨.೩೮%, ಕೊಂಕಣಿ : ೧.೪% ... ಇತ್ಯಾದಿ. ಜೊತೆಗೆ ಬಂಜಾರ, ಕೊಡವ, ಮಲಯಾಳಂ ಮುಂತಾದ ಮಾತೃಭಾಷೆಯನ್ನುಳ್ಳ ಜನ ಲಕ್ಷಾಂತರ ಸಂಖ್ಯೆಯಲ್ಲಿದ್ದಾರೆ. ಪ್ರಶ್ನೆ ಮಾತೃಭಾಷೆಯದು ಎಂದಾಗ ಇವೆಲ್ಲಾ ಅಂಶಗಳನ್ನು ಗಣನೆಗೆ ತೆಗೆದುಕೊಂಡೇ ಮಾತಾಡಬೇಕಾಗುತ್ತದೆ.

**ಶಿಕ್ಷಣದ ಮಾಧ್ಯಮ :** ನಿಜ, ಯಾವುದೇ ಸಾಧಾರಣ ಮಗು ಐದನೇ ವರ್ಷ ತಲುಪುವ ಹೊತ್ತಿಗೆ

ಅದರ ಮೆದುಳು ೯೦%ರಷ್ಟು ಬೆಳವಣಿಗೆಯಾಗಿರುತ್ತದೆ; ತನ್ನ ಮಾತೃಭಾಷೆಯ ಶೇ. ೯೫ರಷ್ಟು ಸಾಮರ್ಥ್ಯವನ್ನು ಅದು ಕರಗತ ಮಾಡಿಕೊಂಡಿರುತ್ತದೆ; ಜೆಸ್ಟಾಲ್ಟ್ ಮನೋವಿಜ್ಞಾನದ ಪ್ರಕಾರ ವ್ಯಕ್ತಿ ಬೆಳೆದು ಮುಂದೆ ಏನಾಗುತ್ತಾನೆ ಎನ್ನುವುದರ ಬುನಾದಿ ಮೊದಲ ಐದು ವರ್ಷದಲ್ಲಿ ಬಿದ್ದಿರುತ್ತದೆ. ಈ ಎಲ್ಲಾ ಬೆಳವಣಿಗೆಗಳ ಮೇಲೆ ಮಗುವಿನ ಕುಟುಂಬ ಮತ್ತು ನೆರೆಹೊರೆಯ ಪರಿಸರವು ನಿರ್ದಿಷ್ಟ ಪ್ರಭಾವವನ್ನು ಬೀರುತ್ತದೆ. ಹೀಗಾಗಿ, ವಿಭಿನ್ನ ಬುಡಕಟ್ಟು, ಜಾತಿ, ಜನಾಂಗ, ಆರ್ಥಿಕ, ಸಾಮಾಜಿಕ ಹಿನ್ನೆಲೆಯ ಮಕ್ಕಳು ವಿಭಿನ್ನ ರೀತಿಯಲ್ಲಿ ಬೆಳೆಯುತ್ತವೆ. ಇಂಥ ಬೆಳವಣಿಗೆಯಲ್ಲಿ ಮಗುವಿನ ಮಾತೃಭಾಷೆ ಮಹತ್ವದ ಪಾತ್ರ ವಹಿಸುತ್ತದೆ.

ಆದರೆ ಪ್ರಶ್ನೆಯಿರುವುದು, ಮಗು ಔಪಚಾರಿಕ ಶಿಕ್ಷಣ ವ್ಯವಸ್ಥೆಯಲ್ಲಿ ಸೇರುವಾಗ, ಶಾಲಾ ಶಿಕ್ಷಣವನ್ನು ಯಾವ ಭಾಷೆಯಲ್ಲಿ ನೀಡಬೇಕು ಎನ್ನುವುದು. ನಮ್ಮ ರಾಜ್ಯದ ಮಟ್ಟಿಗೆ ಹೇಳುವುದಾದರೆ, ಪ್ರಾಥಮಿಕ ಶಿಕ್ಷಣವನ್ನು ಪರಿಗಣಿಸಿದರೂ, ೫೦ ಮಾತೃಭಾಷೆಗಳಲ್ಲಿ ಶಿಕ್ಷಣ ಮಾತ್ರ ನೀಡಲು ಸಾಧ್ಯವೇ, ನೀಡುವುದು ಸಾಧುವೇ ಎನ್ನುವುದು ಮಹತ್ವದ ಪ್ರಶ್ನೆಗಳೇ ಸರಿ. ರಾಜ್ಯದೆಲ್ಲೆಡೆ ವಿರಳವಾಗಿ ಹರಡಿರುವ ಅನೇಕ ಚಿಕ್ಕಪುಟ್ಟ ಮಾತೃಭಾಷೆಗಳಲ್ಲಿ ಪ್ರಾಥಮಿಕ ಶಿಕ್ಷಣವನ್ನು ಒದಗಿಸುವುದು ಸರಕಾರಕ್ಕೆ ಆಗದ ಕೆಲಸ. ಖಾಸಗಿಯವರಂತೂ ಇದರ ಗೊಡವೆಗೇ ಹೋಗುವುದಿಲ್ಲ. ಅಲ್ಪಸಂಖ್ಯಾತ ಭಾಷೆಗಳಲ್ಲಿಯೇ ಪ್ರಮುಖವಾದ ಉರ್ದು ಭಾಷೆಯಲ್ಲಿಯೂ ಇಂದು ನೂರಾರು ಶಾಲೆಗಳು ಇವೆ. ಆದರೆ ಕೆಲವು ಕಡೆ ಅವುಗಳಲ್ಲಿರುವ ಮಕ್ಕಳ ಸಂಖ್ಯೆ ಉಪಾಧ್ಯಾಯರ ಸಂಖ್ಯೆಗಿಂತ ಕಡಿಮೆ. ಇನ್ನು ನಗರ, ಪಟ್ಟಣಗಳ ಬಡಾವಣೆಗಳಿಗೆ ಬಂದು ನೆಲೆಸಿರುವ ಕೊಡವ, ಬಂಜಾರ ಇತ್ಯಾದಿ ಭಾಷೆಗಳ ಮಕ್ಕಳಿಗೆ ಅವರವರ ಮಾತೃಭಾಷೆಯಲ್ಲಿಯೇ ಶಿಕ್ಷಣ ಒದಗಿಸಲು ಸಾಧ್ಯವಾಗದ ಮಾತು.

ಕನ್ನಡವಲ್ಲದ ಇತರ ಮಾತೃಭಾಷೆಗಳಲ್ಲಿ ಪ್ರಾಥಮಿಕ ಶಿಕ್ಷಣವನ್ನು ನೀಡುವುದು ಸರಿಯೇ ಎಂಬುದರ ಪ್ರಶ್ನೆಯ ಬಗ್ಗೆಯೂ ನಾವು ಆಲೋಚಿಸಬೇಕು. ಉದಾಹರಣೆಗೆ, ಉರ್ದುವಿನಲ್ಲಿ ಆರನೇ ಅಥವಾ ಹತ್ತನೇ ತರಗತಿಯವರೆಗೆ ಓದಿದ ಮಕ್ಕಳು ಏನು ಮಾಡುತ್ತಾರೆ ? ಸಾಮಾನ್ಯವಾಗಿ ಇವರು ದುಬಾರಿ ಖಾಸಗಿ, ಇಂಗ್ಲಿಷ್ ಮಾಧ್ಯಮ ಶಾಲೆಗೆ ಹೋಗುವ ಸಾಮರ್ಥ್ಯವಿಲ್ಲದಿರುವ ಬಡಕುಟುಂಬದ ಮಕ್ಕಳು. ಅವರಲ್ಲಿ ಹೆಚ್ಚೆಂದರೆ ಬಹುತೇಕವಾಗಿ ಹತ್ತನೇ ತರಗತಿಗೇ ಶಿಕ್ಷಣಕ್ಕೆ ವಿದಾಯ ಹೇಳಿ ಯಾವುದಾದರೂ ನೌಕರಿಯನ್ನೋ, ವೃತ್ತಿಯನ್ನೋ ನೋಡಿಕೊಳ್ಳುತ್ತಾರೆ. ಉರ್ದು ಮಾಧ್ಯಮದಲ್ಲಿ ಹತ್ತನೇ ತರಗತಿಯವರೆಗೆ ಓದಿದ ಮಕ್ಕಳ ವಿದ್ಯಾರ್ಹತೆಗೆ ಎಂಥ ನೌಕರಿ ಸಿಗಬಹುದು ಎಂದು ನಮಗೆಲ್ಲಾ ಗೊತ್ತು. ಇವರೆಲ್ಲಾ ತುಂಬ ಕಡಿಮೆ ಆದಾಯದ ಕೆಳಸ್ತರದ ಕಸುಬು, ಸೇವೆ, ವ್ಯಾಪಾರಗಳಲ್ಲಿ ತೃಪ್ತರಾಗಬೇಕಾಗುತ್ತದೆ. ಇತರರಿಗೆ ಇರುವ ಬೆಳವಣಿಗೆಯ ಅವಕಾಶದಿಂದ ಇವರು ವಂಚಿತರಾಗುತ್ತಾರೆ. ಅಂತೆಯೇ ದೇಶದ ಉತ್ಪಾದಕತೆಯಲ್ಲಿ ಪ್ರಯೋಜನಕಾರಿಯಾಗಬಲ್ಲ ಮಾನವ ಸಂಪನ್ಮೂಲ ವ್ಯರ್ಥವಾಗುತ್ತದೆ. ಇನ್ನು ಕರ್ನಾಟಕದಲ್ಲಿ ತೆಲುಗು, ತಮಿಳು, ಮರಾಠಿ ಇತ್ಯಾದಿ ಪ್ರಮುಖ ಭಾಷೆಗಳಲ್ಲಿ ಔಪಚಾರಿಕ ಶಿಕ್ಷಣ ನೀಡಿದರೂ ಬೆಳಣಿಗೆಯಲ್ಲಿ ತೊಡಕು ಇದ್ದದ್ದೇ.

ಹಾಗೆ ನೋಡಿದರೆ ಲಿಪಿ, ಬರವಣಿಗೆ, ಸಾಹಿತ್ಯ, ಪಠ್ಯಪುಸ್ತಕ, ಉರ್ದುವನ್ನು ಆಧರಿಸಿದ ಅನೇಕ ಸಂಸ್ಥೆಗಳು, ಪತ್ರಿಕೆಗಳು ಇತ್ಯಾದಿ ಇರುವ ಉರ್ದು, ತೆಲುಗು, ತಮಿಳು, ಮಾರಾಠಿ ಇತ್ಯಾದಿ ಮಾತೃಭಾಷೆಗಳ ಸ್ಥಿತಿಯೇ ಹೀಗಿದೆ ಎಂದಾಗ ಇನ್ನು ಚಿಕ್ಕ ಚಿಕ್ಕ ಭಾಷೆಗಳಾದ ಕೊರಗ, ಬಡಗ, ಯರವ, ಇರುಳ, ಸೋಲಿಗ, ಗೌಳಿ, ಬಂಜಾರ ಇತ್ಯಾದಿ ಭಾಷೆಗಳ ಸನ್ನಿವೇಶ ಇನ್ನೂ ಕಠಿಣ.

**ಉರ್ದುವಿನ ವಿಶಿಷ್ಟ ಸಮಸ್ಯೆ :** ಕರ್ನಾಟಕದಲ್ಲಿ ಉರ್ದು ಸಾಮಾನ್ಯವಾಗಿ ಮುಸ್ಲಿಮರ ಭಾಷೆ. ಹೀಗಾಗಿ ಮಾತೃಭಾಷೆಯ ಜೊತೆಯಲ್ಲಿ ಮತೀಯ ಭಾವನೆಯೂ ಬೆರೆತುಕೊಂಡುಬಿಡುತ್ತದೆ. ಮಾತೃಭಾಷೆಯಲ್ಲಿ ಶಿಕ್ಷಣ ಎಂದು ಸರಕಾರ ಹೇಳುತ್ತಿದೆ. ಉರ್ದುವಿನಲ್ಲಿ ಶಾಲಾ ಶಿಕ್ಷಣದಿಂದ ಮುಂದೆ ಮುಖ್ಯವಾಹಿನಿಗೆ ಸೇರಿಕೊಳ್ಳಲು ಕಷ್ಟವಾಗುತ್ತದೆ ಎಂಬ ಸತ್ಯದ ಹೊರತಾಗಿಯೂ ಮುಸ್ಲಿಮ್ ಮೂಲಭೂತವಾದಿಗಳು ಸರಕಾರದ ಈ ಹೇಳಿಕೆಯನ್ನು ಬಳಸಿಕೊಂಡು ಉರ್ದು ಮಾಧ್ಯಮದ ಶಿಕ್ಷಣಕ್ಕೆ ಮೇಲೆ ಒತ್ತು ನೀಡುತ್ತಾರೆ. ಮುಸ್ಲಿಮರು ನಾಡಿನ ಮುಖ್ಯವಾಹಿನಿಯಲ್ಲಿ ಬೆರೆಯುವುದರಲ್ಲಿ ಇದು ಅಡಚಣೆಯನ್ನುಂಟುಮಾಡುತ್ತದೆ.

ಅಲ್ಲದೆ, ಉರ್ದು ಇಂಡೋ–ಆರ್ಯನ್ ಭಾಷೆ. ಕನ್ನಡ ದ್ರಾವಿಡ ಭಾಷೆ. ಉರ್ದು ಆಲ್ಫಬೆಟಿಕ್ ಲಿಪಿ, ಬರೆಯುವುದು ಬಲದಿಂದ ಎಡಕ್ಕೆ ; ಕನ್ನಡ ಧ್ವನಿಲಿಪಿ, ಬರೆಯುವುದು ಎಡದಿಂದ ಬಲಕ್ಕೆ. ಈ ಎಲ್ಲಾ ಕಾರಣಗಳಿಂದಾಗಿ, ಬಾಲ್ಯದಲ್ಲಿಯೇ ಮಕ್ಕಳು ಕನ್ನಡವನ್ನು ಕಲಿಯದಿದ್ದರೆ ಅವರು ಮುಂದೆ ಹೈಸ್ಕೂಲ್ ಮಟ್ಟದಲ್ಲಿ ಮಾಧ್ಯಮವನ್ನು ಕನ್ನಡಕ್ಕೆ ಬದಲಾಯಿಸಿಕೊಳ್ಳಲು ಹೆಚ್ಚು ಕಷ್ಟವಾಗುತ್ತದೆ. ಇದೇ ಮಾತು ಹೆಚ್ಚು ಕಡಿಮೆ ತೆಲುಗು, ತಮಿಳು, ಮರಾಠಿ ಇತ್ಯಾದಿ ಮಾತೃಭಾಷೆಗಳಿಗೂ ಅನ್ವಯಿಸುತ್ತದೆ.




ನಮ್ಮ ಮಕ್ಕಳ ಮಾತೃಭಾಷೆ ಉರ್ದು. ಆದರೂ ಅವರು ಏಳನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ಓದಿದರು. ಎಂಟರಿಂದ ಇಂಗ್ಲಿಷ್ ಮಾಧ್ಯಮಕ್ಕೆ ಬದಲಾಯಿಸಿಕೊಂಡರು. ಕನ್ನಡವನ್ನು ಮೂಲಭೂತವಾಗಿ ಚೆನ್ನಾಗಿ ಕಲಿತಿದ್ದರಿಂದ ಮುಂದೆ ಇಂಗ್ಲಿಷ್ ಭಾಷೆಯನ್ನೂ ಕರಗತಗೊಳಿಸಿಕೊಳ್ಳಲು ಸಾಧ್ಯವಾಯಿತು. ತಮ್ಮ ಉನ್ನತ ವ್ಯಾಸಂಗವನ್ನು ಪಡೆದ ನಂತರ ಮಗ ಮನುಪಾಷ ಇಸ್ರೋದಲ್ಲಿ ಹಿರಿಯ ವಿಜ್ಞಾನಿಯಾಗಿದ್ದಾನೆ. ಮಗಳು ಬೀನಾಪಾಷ ಆ್ಯನಿಮೇಷನ್ ಸಂಸ್ಥೆಯ ವ್ಯವಸ್ಥಾಪಕಿಯಾಗಿದ್ದಾಳೆ. ಇನ್ನೊಬ್ಬಳು ನೀಲಿಮಾ ಪಾಷ ಯೋಗ ಶಿಕ್ಷಣದಲ್ಲಿ ಉನ್ನತ ಮಟ್ಟದ ಶಿಕ್ಷಕಿಯಾಗಿದ್ದಾಳೆ. ಪ್ರಾಥಮಿಕ ಶಿಕ್ಷಣದ ಮಾಧ್ಯಮಕ್ಕಾಗಿ ಕನ್ನಡವನ್ನು ಆಯ್ಕೆ ಮಾಡುವಾಗ ನಾವು ಭಾಷೆಯ ಅಭಿಮಾನಕ್ಕೆ ಪಕ್ಕಾಗದೆ ತಾರ್ಕಿಕತೆಗೆ ಆದ್ಯತೆ ನೀಡಿದ್ದೇವೆ.

ಹೀಗಾಗಿ ಭಾಷಾವಿಜ್ಞಾನದ ವಿದ್ಯಾರ್ಥಿ ಹಾಗೂ ಭಾಷಾ ತರಬೇತಿದಾರನಾದ ನನ್ನ ಪ್ರಕಾರ ಕನ್ನಡವಲ್ಲದ ಇತರ ಎಲ್ಲಾ ಅಲ್ಪಸಂಖ್ಯಾತ ಮಾತೃಭಾಷೆಯ ಮಕ್ಕಳು ಪ್ರಾಥಮಿಕ ಶಾಲೆಯಿಂದಲೇ ಕನ್ನಡ ಮಾಧ್ಯಮಕ್ಕೆ ಸೇರಿಕೊಳ್ಳುವುದು ಅವರ ಭವಿಷ್ಯದ ದೃಷ್ಟಿಯಿಂದ ಒಳ್ಳೆಯದು. ಇಂಗ್ಲಿಷ್ ಮಾಧ್ಯಮಕ್ಕೆ ಏಕೆ ಬೇಡ ? ಏಕೆಂದರೆ, ಮಕ್ಕಳು ಸ್ವಲ್ಪ ದೊಡ್ಡವರಾಗುತ್ತಿದ್ದ ಹಾಗೆ ಹೊರಗಿನ ಪರಿಸರದಲ್ಲಿ ಕನ್ನಡ ಭಾಷೆಗೆ ಒಡ್ಡಿಕೊಳ್ಳುವ ಸಾಧ್ಯತೆ ಹೆಚ್ಚಾಗಿರುತ್ತದೆ. ಆದರೆ ಅದೇ ಇಂಗ್ಲಿಷ್ ಭಾಷೆಯಲ್ಲಿ ಮನೆಯವರೊಂದಿಗೆ ಮಾತಾಡುವುದಿಲ್ಲ, ಪರಿಸರದಲ್ಲಿಯೂ ಸಹಜವಾಗಿ ಒದಗುವುದಿಲ್ಲ. ಎಲ್ಲವನ್ನೂ ಕೃತ್ರಿಮವಾಗಿ ಕಲಿಯಬೇಕಾಗುತ್ತದೆ. ಇದು ಕಲಿಕೆಗೆ ವಿಶಿಷ್ಟವಾದ ಅಡ್ಡಿಯನ್ನುಂಟುಮಾಡುತ್ತದೆ. ಕನ್ನಡವಲ್ಲದ ಮಾತೃಭಾಷೆಗಳನ್ನೂ ಬೆಳೆಸಬೇಕು, ಕಾಪಾಡಬೇಕು. ಆದರೆ ಶಿಕ್ಷಣ ಮಾಧ್ಯಮದ ಭಾಷೆಯನ್ನಾಗಿ ಅಲ್ಲ; ಆಯಾ ಸಮುದಾಯಗಳ ಸಾಂಸ್ಕೃತಿಕ, ಧಾರ್ಮಿಕ ಅಸ್ಮಿತೆಗಾಗಿ ಮಾತ್ರ.

**ಮಾತೃಭಾಷೆಯೋ ಪ್ರಥಮ ಭಾಷೆಯೋ :** ಭಾಷೆ ಕೇವಲ ಭಾಷೆಯಲ್ಲ. ಅದು ಒಂದು ವ್ಯಕ್ತಿಯ, ಸಮುದಾಯದ ಅನುಭವಗಳ ಭಂಡಾರ. ಆದರೆ ಅದನ್ನು 'ಮಾತೃಭಾಷೆ' ಎಂದು ಕರೆದ ಕೂಡಲೇ ಅತಿಯಾದ ಅಭಿಮಾನದ ಒಂದು ಆಯಾಮ ಅದರೊಂದಿಗೆ ಬೆರೆತುಬಿಡುತ್ತದೆ. ಎಲ್ಲರೂ ತಮ್ಮ ತಮ್ಮ ಮಾತೃಭಾಷೆಯನ್ನೇ ಭಾವನಾತ್ಮಕವಾಗಿ ಹಚ್ಚಿಕೊಂಡು ಬಿಡುತ್ತಾರೆ. ಮುಂದೆ ಶಿಕ್ಷಣ, ತರಬೇತಿ, ಅಭಿವೃದ್ಧಿಯ ಸನ್ನಿವೇಶದಲ್ಲಿಯೂ ಜನ ತಮ್ಮ ಮಾತೃಭಾಷೆಯನ್ನು ಬಿಟ್ಟುಕೊಡದ ಕಟ್ಟುಪಾಡಿಗೆ ಒಳಗಾಗಿಬಿಡುತ್ತಾರೆ. ವ್ಯಾವಹಾರಿಕವಾಗಿ ಯೋಚನೆ ಮಾಡುವುದನ್ನು ನಿಲ್ಲಿಸಿಬಿಡುತ್ತಾರೆ. ಇದು ಅಭಿವೃದ್ಧಿಯ ದೃಷ್ಟಿಯಿಂದ ಒಳ್ಳೆಯದಲ್ಲ.

ಮಗು ಭಾಷೆಯನ್ನು ಕಲಿಯುವುದರಲ್ಲಿ ಮಾತೆಯ ಪಾತ್ರ ಮಹತ್ವದ್ದಾಗಿದ್ದರೂ, ಕುಟುಂಬದ ಎಲ್ಲರೂ ಇದರಲ್ಲಿ ತಮ್ಮದೇ ಆದ ಮಹತ್ವದ ಕೊಡುಗೆಯನ್ನು ನೀಡುತ್ತಾರೆ. ಆದ್ದರಿಂದ 'ಮಾತೃಭಾಷೆ', 'ತಾಯ್ನುಡಿ' ಎಂದರೆ ಮಾತೆಯ ಭಾಷೆಯಲ್ಲ, ತಾಯಿಯ ನುಡಿಯಲ್ಲ. ಅದು ಮನೆಯ ಭಾಷೆ. ಇನ್ನು ಅಂತರ್‌ಜಾತಿ, ಅಂತರ್‌ಭಾಷೀಯ ವಿವಾಹಗಳು ಹೆಚ್ಚಾಗುತ್ತಿರುವ ಇಂದಿನ ಸಂದರ್ಭದಲ್ಲಿ, ತಾಯಿಯ ಭಾಷೆ ಉರ್ದು ಆಗಿರುತ್ತದೆ. ತಂದೆಯ ಭಾಷೆ ತಮಿಳು ಆಗಿರುತ್ತದೆ. ಇಬ್ಬರಿಗೂ ಕನ್ನಡ ಚೆನ್ನಾಗಿ ಬರುತ್ತದೆ. ಇಬ್ಬರೂ ಕರ್ನಾಟಕದಲ್ಲಿ ನೆಲೆಸಿರುವವರೇ. ಅದಕ್ಕಾಗಿ ಅವರು ಮನೆಯಲ್ಲಿ ಮಾತಾಡಲು ಕನ್ನಡವನ್ನು ಆಯ್ಕೆ ಮಾಡಿಕೊಂಡಿರುತ್ತಾರೆ. ಹೀಗಾಗಿ ಅವರ ಮನೆಯಲ್ಲಿ ಹುಟ್ಟುವ ಮಕ್ಕಳು ಕಲಿಯುವುದು ತಾಯಿಯ ಭಾಷೆಯನ್ನೂ ಅಲ್ಲ, ತಂದೆಯ ಭಾಷೆಯನ್ನೂ ಅಲ್ಲ. ಅವು ಕಲಿಯುವುದು ಕನ್ನಡವನ್ನು. ಆದ್ದರಿಂದ ಮಗು ಮೊಟ್ಟಮೊದಲಿಗೆ ಮನೆಯಲ್ಲಿ ದಕ್ಕಿಸಿಕೊಳ್ಳುವ ಭಾಷೆಯನ್ನು ಮಾತೃಭಾಷೆ ಎಂದು ಕರೆಯದೆ, **'ಪ್ರಥಮ ಭಾಷೆ'** ಎಂದು ಕರೆಯುವುದು ಸೂಕ್ತ. ತಂದೆತಾಯಂದಿರ ಭಾಷೆ ಕನ್ನಡವೇ ಆಗಿದ್ದರೂ ಮಕ್ಕಳು ಕಲಿಯುವ ಕನ್ನಡ ಭಾಷೆ ಅವರ ಪ್ರಥಮ ಭಾಷೆಯೇ ಆಗಬೇಕು, ಮಾತೃಭಾಷೆಯಲ್ಲ. 'ಮಾತೃ' ಎಂಬ ಗುಣವಿಶೇಷಣ ಅನಗತ್ಯ ಭಾವನಾತ್ಮಕ ಅತಿರೇಕಕ್ಕೆ ಪ್ರಚೋದನೆಯನ್ನು ನೀಡುತ್ತದೆ.

**ಅಭಿಮಾನದ ಅಪಾಯ :** ಕೆಲವು ಭಾಷೆಗಳು ಅಭಿವ್ಯಕ್ತಿಯ ಸಾಧನ. ಅವು ನಮ್ಮನ್ನು ಬೆಸೆಯುತ್ತವೆ. ಭಾಷೆಯನ್ನು ಜೀವನೋಪಯೋಗಿ ಅಪ್ಪಟ ಸಾಧನವನ್ನಾಗಿ ಬಳಸಿದಾಗಲೇ ಅದು ನಿರಂಕುಶವಾಗಿ, ವ್ಯಾಪಕವಾಗಿ, ನಿತ್ಯಪ್ರಯೋಜನಕಾರಿಯಾಗಿ ಬೆಳೆಯುತ್ತದೆ. ಅದರ ಬದಲಿಗೆ ಭಾವನೆಗಳ ಆಯಾಮವನ್ನು ಬಳಸಿ ಭಾಷೆಯನ್ನು ಅಭಿಮಾನದಿಂದ ನೋಡತೊಡಗುವ ಹಲವು ಅನಗತ್ಯ ತೊಡಕುಗಳನ್ನು ತಂದುಕೊಳ್ಳುತ್ತೇವೆ. ಕನ್ನಡವನ್ನು ಕನ್ನಡವನ್ನಾಗಿ ನೋಡಿದರೆ ನಾಡಿನ ನೂರಕ್ಕೆ ತೊಂಭತ್ತಕ್ಕೂ ಹೆಚ್ಚು ಜನ ಅದರ ತೆಕ್ಕೆಯಲ್ಲಿರುತ್ತಾರೆ. ಕನ್ನಡವನ್ನು, 'ಕನ್ನಡಾಂಬೆ', 'ಕನ್ನಡ ಭುವನೇಶ್ವರಿ' ಎಂದೆಲ್ಲಾ ಮೂರ್ತೀಕರಿಸಲಾಗುತ್ತಿದೆ. ಕನ್ನಡ ಸಿನಿಮಾಗಳಲ್ಲಿ ಕಥೆಗೆ, ಪಾತ್ರಕ್ಕೆ ಸಂಬಂಧವೇ ಇಲ್ಲದಿದ್ದರೂ ನಾಯಕ ಪಾತ್ರಗಳು ಕೇವಲ ಪ್ರೇಕ್ಷಕರನ್ನು ಭಾವನಾತ್ಮಕವಾಗಿ ಶೋಷಿಸಲು ಕನ್ನಡ ಅಭಿಮಾನದ ಹಾಡುಗಳನ್ನು ದೃಶ್ಯಗಳ ತೇಪೆ ಹಚ್ಚುತ್ತಾರೆ. ಟಿ.ವಿ.ಯಲ್ಲಿಯೂ, ಕೆಲಸಕ್ಕೆ ಬಾರದ ರಿಯಾಲಿಟಿ ಶೋಗಳಲ್ಲಿಯೂ 'ಕನ್ನಡದ ಅಭಿಮಾನ'ವನ್ನು ಮೆರೆಯಲಾಗುತ್ತದೆ. ಹಾಗಂದರೇನು ಅಂತ ಗೊತ್ತಿಲ್ಲದೆಯೂ ಕೇವಲ ಮಾತಿನಲ್ಲಿ ಇದು ವಿಜೃಂಭಿಸುತ್ತಾ ಹೋಗುತ್ತದೆ.

ಭಾಷೆಯ ಕುರಿತು ಈ ರೀತಿಯ ಅಂಧಾಭಿಮಾನವನ್ನು ಮೆರೆಸಿದರೆ ಕನ್ನಡ ಮಾತನಾಡುವವರು ಕೇವಲ ಜಯಕಾರದಲ್ಲಿ ತೃಪ್ತರಾಗುತ್ತಾರೆಯೇ ವಿನಾ ಕನ್ನಡ ಬಳಕೆಯ ಮಹತ್ವವನ್ನು ಅರ್ಥ ಮಾಡಿಕೊಳ್ಳುವುದಿಲ್ಲ. ಇನ್ನು, ಇತರ ಮಾತೃಭಾಷೆಯಾಡುವ ಜನ ಇದೇ ರೀತಿಯ 'ತಾಯ್ನುಡಿ'ಯ ಅಭಿಮಾನಕ್ಕೆ ಪಕ್ಕಾಗಿ ತಮ್ಮ ತಮ್ಮ ಮಾತೃಭಾಷೆಗಳ ಪಕ್ಷ ವಹಿಸಲು ತೊಡಗುತ್ತಾರೆ. ಕರ್ನಾಟಕದಲ್ಲಿನ ತುಳು, ಕೊಡವ, ಬಂಜಾರ, ಕೊಂಕಣಿ, ಮರಾಠಿ, ತಮಿಳು ಮುಂತಾದ ಭಾಷೆಗಳನ್ನಾಡುವವರು ಈ ಮಾದರಿಯ ಕನ್ನಡಾರಾಧನೆಯಿಂದ ಹೊರಗುಳಿಯುತ್ತಾರೆ. ಅಷ್ಟೇ ಅಲ್ಲ, ತಮ್ಮ ಮಾತೃಭಾಷೆಗಳನ್ನೂ ಅಂಬೆಯರನ್ನಾಗಿಸಿ ಹೆಚ್ಚು ಪ್ರತ್ಯೇಕತೆಗೆ, ಗೊಂದಲಕ್ಕೆ, ಸಂಘರ್ಷಕ್ಕೆ ಕಾರಣರಾಗುತ್ತಾರೆ. ಇನ್ನು ಇಸ್ಲಾಂ ಮತಸ್ಥರಾದ ಉರ್ದು ಭಾಷೀಯರಿಗಂತೂ ಮೂರ್ತಿಯ ರೂಪದಲ್ಲಿ ಆರಾಧನೆಗೊಳ್ಳುವ ಕನ್ನಡವನ್ನು ಒಪ್ಪಿಕೊಳ್ಳುವುದು ಮಾನಸಿಕ ಕಿರಿಕಿರಿಗೆ ಕಾರಣವಾಗುತ್ತದೆ. ಇವೆಲ್ಲವೂ ಪ್ರಕಟವಾಗದೆ ಒಳಗೊಳಗೇ ಕೆಲಸಮಾಡುವ ಕೆಲವು ಆತಂಕಗಳು. ಇವು ಕನ್ನಡದ ಅಂಗೀಕಾರಕ್ಕೆ, ಬೆಳವಣಿಗೆಗೆ ಮಾರಕವಾಗಿವೆ.

ಸಮುದಾಯದ, ಬುಡಕಟ್ಟಿನ ಅಸ್ಮಿತೆಯನ್ನು ಉಳಿಸಿಕೊಳ್ಳುವುದು ಎಷ್ಟು ಮುಖ್ಯವೋ ಜನ ನಾಡಿನ ಸಾರ್ವತ್ರಿಕ ಅಭಿವೃದ್ಧಿಯಲ್ಲಿ ಪಾಲ್ಗೊಂಡು ಅದರ ಫಲವನ್ನು ಉಣ್ಣುವುದೂ ಅಷ್ಟೇ ಮುಖ್ಯ. ಇದಕ್ಕೆ ಪೂರಕವಾಗಿ ಭಾಷೆ ಇರಬೇಕಾದರೆ, ಹೆಚ್ಚಿನ ಪ್ರಥಮ ಭಾಷೆಗಳ ಪಾತ್ರ ಸೀಮಿತವಾದರೂ ವಿಶಿಷ್ಟವಾಗಿರುತ್ತದೆ. ಔಪಚಾರಿಕ ಶಿಕ್ಷಣ, ತರಬೇತಿ, ಉದ್ಯೋಗಾವಕಾಶ, ಅಭಿವೃದ್ಧಿ ಇವುಗಳ ಬೆಳವಣಿಗೆಯ ದೃಷ್ಟಿಯಿಂದ ಕರ್ನಾಟಕದ ಎಲ್ಲರೂ ಕನ್ನಡವನ್ನೇ ಮಾಧ್ಯಮವನ್ನಾಗಿ ಒಪ್ಪಿಕೊಳ್ಳಬೇಕು; ಕನ್ನಡವನ್ನು ಚೆನ್ನಾಗಿ ಕಲಿಯಬೇಕು; ಚೆನ್ನಾಗಿ ಕಲಿಸಬೇಕು.

**ಎಂ. ಅಬ್ದುಲ್ ರೆಹಮಾನ್ ಪಾಷ**
ನಂ. ೮೧/೩೭-೩, ೧೨ನೇ 'ಡಿ' ಮುಖ್ಯರಸ್ತೆ, ಶಿವನಗರ
ಬೆಂಗಳೂರು – ೫೬೦ ೦೧೦

# ನುಡಿ ನಮನ

ನಿನ್ನೆಯಷ್ಟೆ ಉಲ್ಲಾಸದ ಹೂಮಳೆಯಾಗಿ ಪುಳಕಗೊಳಿಸಿದವ
ಇಂದು ನಮ್ಮೊಡನೆ ಇಲ್ಲ ಎಂದರೆ ನಂಬುವದು ಹೇಗೆ ?
ಸ್ನೇಹದ ಸೇತುವೆಯಾಗಿ, ಸೌಜನ್ಯದ ಕಡಲಾಗಿ
ಅಂತಃಕರಣ ತುಂಬಿ ಹರಿವ ಹೊಳೆಯಾಗಿ
ತುಂಬಿ ನಿಂತಿರುವೆ ನೀನು ಹೊರ–ಒಳಗೆ

ಹೊಂಗನಸುಗಳ ಬದುಕ ಸಂತೆಯಲಿ ಕುಂತವ
ಛಕ್ಕನೆ ಜಗವ ತೊರೆದು ಮರೆಯಾದೆಯಲ್ಲಾ !
ಯಾವ ಸುಂಟರಗಾಳಿ ಸುಳಿಯಾಗಿ ಸುಳಿದು
ಪ್ರಕ್ಷುಬ್ಧ ಅಲೆಯೊಂದು ರಭಸದಲಿ ಧುಮ್ಮಿಕ್ಕಿ
ಬಾಹುಗಳಲಿ ಸೆಳೆದು ಒಯ್ಯಿತು ನಿನ್ನನು ಕಾಣದೂರಿಗೆ
ಎಂದೂ ಮರಳಿ ಬಾರದ ನಿಗೂಢ ಲೋಕಕೆ

ಒಳದನಿಗೆ ಮಾರ್ದನಿಸುವ ದನಿಯಾಗಿ
ಜೀವ ಪ್ರೀತಿಯ ಇನಿದನಿಯ ಕೋಗಿಲೆಯಾಗಿ
ಕಥಾಲೋಕದ ಮರೆಯದ ಮಾಂತ್ರಿಕನಾಗಿ

ಸಹೃದಯರೆದೆಯಲ್ಲಿ ಪ್ರೀತಿಯ ಹೊನಲಾಗಿ
ತುಂಬಿ ತುಳುಕಿದ ಭರಪೂರ ಮಹಾಪೂರ
ಘಮ್ಮೆಂದು ಹರಡಿದ ಪರಿಮಳ ನೀನು



ಉರಿವ ಧರೆಯ ಪರಿತಾಪಗಳನು
ಎದೆಯೊಡ್ಡಿ ನಿಂತ ಮನುಜನ ಅನುತಾಪಗಳನು
ಮಾನವೀಯ ನೆಲೆಯ ಮೂಲ ತಂತುಗಳನು
ಕಥೆಯ ಹಂದರದಿ ಅನನ್ಯತೆಯಲಿ ಹೆಣೆದು
ನೇರ ನಿಲುವಿನ ಒಲವಿನ ಬಲೆಯಲಿ ಓದುಗನ
ಎದೆಯ ಕದ ತೆರೆದು ಒಳಗಿಳಿದವ ನೀನು

ತತ್ಪರತೆಯ ನಿನ್ನ ಬದುಕು–ಬರಹ ಸುಂದರ ಕವನ
ಸಾಧನೆ ಸಂತೃಪ್ತಿಗಳ ಸಾರ್ಥಕ್ಯದ ಬಂಧುರ ಭವನ
ಇದೋ ನಿನಗೆ ನನ್ನ ಹೃದಯಾಂತರಾಳದ ನುಡಿ ನಮನ

*(ದಿನಾಂಕ : ೦೬–೦೯–೨೦೧೬ರಂದು ಹೃದಯಾಘಾತದಿಂದ ನಿಧನರಾದ ಕತೆಗಾರ ಡಾ॥ ಪ್ರಲ್ಹಾದ ಅಗಸನಕಟ್ಟೆಯವರನ್ನು ನೆನೆದು)*

**ಪ್ರೊ॥ ಶಿವಪುತ್ರಪ್ಪ ಆರ್. ಆಶಿ**
ನಂ. ೮೧, ೨ನೇ ಮುಖ್ಯರಸ್ತೆ, ೪ನೇ ಅಡ್ಡರಸ್ತೆ, ರೇಣುಕಾನಗರ
ಗೋಕುಲ ರೋಡ್, ಹುಬ್ಬಳ್ಳಿ – ೫೮೦ ೦೩೦



# ಬುಡಕಟ್ಟು ಸಮುದಾಯದ ಬಡಾ ಭಯ್ಯ

# ವೆರ್ರಿಯರ್ ಎಲ್ವಿನ್

## (೨೯ ಆಗಸ್ಟ್, ೧೯೦೨–೨೨ ಫೆಬ್ರವರಿ, ೧೯೬೪)

**'ಈ ಜಗತ್ತಿನಲ್ಲಿ ಒಬ್ಬರು ಮತ್ತೊಬ್ಬರ ಮೇಲೆ ಏನನ್ನೂ ಹೇರದಿದ್ದರೆ ಎಲ್ಲರೂ ಸುಖ ಸಮೃದ್ಧಿಯಿಂದ ಬಾಳಬಹುದು. ಜಗತ್ತಿನಲ್ಲಿ ಖಂಡಿತ ಶಾಂತಿ ನೆಲೆಸುತ್ತದೆ.'**

**– ಎಲ್ವಿನ್**

"ನಿರಾಪರಾಧಿ ಬುಡಕಟ್ಟು ಜನರನ್ನು ಜೈಲಿಗೆ ನೂಕುವಾಗ, ಅವರ ಹಕ್ಕುಗಳನ್ನು ನಿರಾಕರಿಸಿದಾಗ, ಜೀವನೋಪಾಯಕ್ಕಾಗಿ ಬೇಟೆ ಅಥವಾ ಮೀನು ಹಿಡಿಯುವ ಆದಿವಾಸಿಗಳನ್ನು ಶಿಕ್ಷಿಸಿದಾಗ, 'ನಾಗರಿಕ'ರೆಂದು ಕರೆಸಿಕೊಳ್ಳುವ ಜಗತ್ತನ್ನು ಕಂಡರೆ ನನಗೆ ಕಡುಕೋಪ ಬರುತ್ತದೆ. ಆದಿವಾಸಿಗಳ ಶತ್ರುಗಳು ನನ್ನ ಶತ್ರುಗಳೆಂದು ತಿಳಿಯುತ್ತೇನೆ. ಇಂತಹ ಸಂದರ್ಭಗಳಲ್ಲಿ ಅಸಹಾಯಕನಾಗಿ ಕುಳಿತಿರುವ ನನ್ನ ಬಗ್ಗೆಯೇ ನನಗೆ ಅಸಹ್ಯ ಭಾವನೆ ಮೂಡುತ್ತದೆ."

ಈ ಮೇಲಿನ ಆದಿವಾಸಿಗಳ ಬಗೆಗಿನ ನೈಜ ಕಳಕಳಿಯ ಮಾತುಗಳನ್ನಾಡಿರುವವರು ಶ್ರೇಷ್ಠ ಮಾನವ ಶಾಸ್ತ್ರಜ್ಞ ಹೆನ್ರಿ ವೆರ್ರಿಯರ್ ಹೋಲ್‌ಮ್ಯಾನ್ ಎಲ್ವಿನ್. ಬುಡಕಟ್ಟು ಜನರ ನೆಚ್ಚಿನ 'ಬಡಾ ಭಯ್ಯ'. ಸ್ವಾತಂತ್ರ್ಯ ಪೂರ್ವದಲ್ಲಿ ಬ್ರಿಟಿಷರಿಂದ, ಸ್ವಾತಂತ್ರ್ಯನಂತರ ನಮ್ಮವರಿಂದಲೇ ತಿರಸ್ಕಾರ, ಶೋಷಣೆಗೊಳಗಾಗಿರುವ ಆದಿವಾಸಿಗಳ ಆಶಾಕಿರಣ ಈ ಎಲ್ವಿನ್. ಧರ್ಮ ಪ್ರಚಾರಕ್ಕಾಗಿ ಭಾರತಕ್ಕೆ ಆಗಮಿಸಿದ ಎಲ್ವಿನ್, ಗಾಂಧೀಜಿಯವರ ಪ್ರಭಾವಕ್ಕೊಳಗಾಗಿ, ಮುಗ್ಧ ಬುಡಕಟ್ಟು ಸಮುದಾಯಗಳ ಸಮಸ್ಯೆ, ಸಜ್ಜನಿಕೆಯನ್ನೇ ಬಂಡವಾಳವಾಗಿಸಿಕೊಂಡು ಮತಾಂತರದಲ್ಲಿ ತೊಡಗಿದ ತನ್ನದೇ ಜನರ (ಬ್ರಿಟಿಷರ) ಧೋರಣೆಗಳನ್ನು ಪ್ರತಿಭಟಿಸಿ, 'ಮಾನವೀಯತೆಯೇ ನಿಜವಾದ ಧರ್ಮ'ವೆಂದು ನಂಬಿ, ಅದನ್ನೇ ತನ್ನ ಜೀವನದ ಧ್ಯೇಯವಾಗಿಸಿಕೊಂಡು ಬುಡಕಟ್ಟು ಜನರ ಉದ್ಧಾರಕ್ಕಾಗಿ ದುಡಿದ ಎಲ್ವಿನ್ ಇಂದಿನ ಸಮಾಜ ಕಾರ್ಯಕರ್ತರಿಗೆ ಸ್ಫೂರ್ತಿಯ ಚಿಲುಮೆಯಾಗಿದ್ದಾರೆ.

'ಎಲ್ವಿನ್' ಹುಟ್ಟಿದ್ದು ೨೯ ಆಗಸ್ಟ್, ೧೯೦೨ರಲ್ಲಿ. ಊರು, ಇಂಗ್ಲೆಂಡ್‌ನ ಪುಟ್ಟ ದ್ವೀಪ ಕೆಂಟ್‌ನ ದೋವರ್‌ನಲ್ಲಿ. ಮೂರು ಮಕ್ಕಳಲ್ಲಿ ಹಿರಿಯರಾದ ಎಲ್ವಿನ್, ಚಿಕ್ಕಂದಿನಲ್ಲೇ ಪಾದ್ರಿ ತಂದೆಯನ್ನು ಕಳೆದುಕೊಂಡು ತಾಯಿಯ ಮಡಿಲಲ್ಲಿ ಬೆಳೆದವರು. ತಾಯಿಯಾದರೋ ಮಕ್ಕಳ ಬಗ್ಗೆ ಅಷ್ಟಾಗಿ ಕಾಳಜಿ ವಹಿಸಿದವರಲ್ಲ. ಪ್ರಪಂಚ ಪರ್ಯಟನೆಯಲ್ಲಿ ತನ್ನ ಜೀವನವನ್ನು ಕಳೆದವರು. ಆದರೂ, ಕುಟುಂಬವು ಧಾರ್ಮಿಕ ಹಿನ್ನೆಲೆ ಉಳ್ಳದ್ದರಿಂದ ಸ್ವಾಭಾವಿಕವಾಗಿಯೇ ಎಲ್ವಿನ್ ಅಧ್ಯಾತ್ಮದಲ್ಲಿ ಅನುರಕ್ತರಾಗಿದ್ದರು. ಅವರಿಗೆ ಏಸು ಕ್ರಿಸ್ತನೆಂದರೆ ಅಚ್ಚುಮೆಚ್ಚು. ಯಾವ ಮಟ್ಟಕ್ಕೆಂದರೆ, ಕ್ರಿಸ್ತ ತನ್ನನ್ನು ಹುಡುಕಿಕೊಂಡು ಬಂದರೆ ಮುಜುಗರವಾಗುತ್ತದೆಂದು ಸ್ನೇಹಿತರ ಜೊತೆಗೆ ನಾಟಕ ವೀಕ್ಷಿಸಲಿಕ್ಕೂ ಹೋಗಲು ಅಂಜುತ್ತಿದ್ದರು.

ಎಲ್ವಿನ್ ಪ್ರಾಥಮಿಕ ಮತ್ತು ಪ್ರೌಢಶಿಕ್ಷಣವನ್ನು ಮುಗಿಸಿದ್ದು 'ಡೀನ್ ಕ್ಲೋಸ್' ಶಾಲೆಯಲ್ಲಿ. ಇಂಗ್ಲಿಷ್ ಪದವಿಯನ್ನು ಆಕ್ಸ್‌ಫರ್ಡ್‌ನ ಪ್ರತಿಷ್ಠಿತ 'ಮೆರ್ರೋನ್ ಕಾಲೇಜಿ'ನಲ್ಲಿ ಗಳಿಸಿದರು. ಮಾನವಶಾಸ್ತ್ರವು ಇವರ ನೆಚ್ಚಿನ ವಿಷಯವಾಗಿದ್ದು ಅದರಲ್ಲಿ ಸ್ನಾತಕೋತ್ತರ ಪದವಿ ಪಡೆದು ಪಾರಂಗತರಾದರು. ವೃತ್ತಿ ಜೀವನವನ್ನು 'ಆಕ್ಸ್‌ಫರ್ಡ್‌ನ' 'ವಿಕ್ಲಿಫ್ ಹಾಲ್'ನ ಉಪ ಪ್ರಾಂಶುಪಾಲರಾಗಿ ಪ್ರಾರಂಭಿಸಿದರು. ಹಾಗೆಯೇ ತಾನು ಓದಿದ 'ಮೆರ್ರೋನ್ ಕಾಲೇಜಿ'ನಲ್ಲಿ ಉಪನ್ಯಾಸಕರಾಗಿ ಸೇವೆ ಸಲ್ಲಿಸಿದರು.

ಆದರೆ ಆ ಕ್ಷೇತ್ರದಲ್ಲಿ ಎಲ್ವಿನ್ ಹೆಚ್ಚು ಸಮಯ ಮುಂದುವರಿಯಲಾಗಲಿಲ್ಲ. ಕಾರಣ, ಎಲ್ವಿನ್‌ರ ದೇವರೆಡೆಗಿನ ಅಗಾಧ ಭಕ್ತಿ, ಶ್ರದ್ಧೆಯನ್ನು ಗಮನಿಸಿದ ಧರ್ಮಗುರುಗಳು ಇವರನ್ನು 'ಕ್ರಿಶ್ಚಿಯನ್ ಸೇವಾ ಸಂಘ'ದ ಮೂಲಕ ಧರ್ಮ ಪ್ರಚಾರಕ್ಕಾಗಿ ಭಾರತಕ್ಕೆ ಕಳುಹಿಸಿದರು. ಈ ಇಷ್ಟ ಕಾರ್ಯವನ್ನು ವಿನಮ್ರವಾಗಿ ಸ್ವೀಕರಿಸಿದ ಎಲ್ವಿನ್ ಉತ್ಸುಕರಾಗಿ ಭಾರತಕ್ಕೆ ಪ್ರಯಾಣ ಬೆಳೆಸಿದರು. ಮೊದಲ ಕೆಲವು ತಿಂಗಳು ಪೂನಾದಲ್ಲಿನ 'ಸೇವಾ ಸಂಘ'ದ ಮೂಲಕ ಇಲ್ಲಿನ ಬುಡಕಟ್ಟು ಜನರನ್ನು ಕ್ರಿಸ್ತನ ಬೋಧನೆಗಳನ್ನು ಪ್ರಚುರಪಡಿಸುವುದರ ಮೂಲಕ ಮನಃಪರಿವರ್ತನೆ ಮಾಡಿ, ಕ್ರಿಶ್ಚಿಯನ್ ಧರ್ಮಕ್ಕೆ ಸೇರುವಂತೆ ಮಾಡಿದರು. ಈ ಮೂಲಕ ಎಲ್ಲರ ಶಹಬ್ಬಾಶ್‌ಗಿರಿಗೆ ಪಾತ್ರವಾದರು. ಆದರೆ ಎಲ್ವಿನ್‌ಗೆ ಈ ಕಾರ್ಯ ದೇವರಿಗೆ ಪ್ರಿಯವಾದ ಕೆಲಸವಲ್ಲವೆಂಬುದು ಬಹುಬೇಗ ಅರಿವಾಯಿತು. ಇದಕ್ಕೆ ಕಾರಣ, ಅವರ ಮನಸ್ಸಿನಲ್ಲಿ ಎದ್ದ ಹಲವು ಪ್ರಶ್ನೆಗಳು. ಅವುಗಳೆಂದರೆ : ಜನರನ್ನು ಮತಾಂತರಿಸುವುದು ತರವೇ ? ಜನರಲ್ಲಿನ ಕೊರತೆಗಳನ್ನು ಆಪಾದಿಸಿ, ಇಲ್ಲ ಸಲ್ಲದ ಆಸೆ ಆಮಿಷಗಳನ್ನು ತೋರಿಸಿ ಮತಾಂತರ ಮಾಡುವ ಅವಶ್ಯಕತೆಯಾದರೂ ಏನು ? ಇದನ್ನೆಲ್ಲಾ ಏಸು ಕ್ರಿಸ್ತ ಒಪ್ಪುತ್ತಾನೆಯೇ ? ಇವೇ ಮೊದಲಾದ ಪ್ರಶ್ನೆಗಳಿಂದ ಅವರು ಗೊಂದಲಕ್ಕೆ ಬಿದ್ದರು. ಹಲವರೊಂದಿಗೆ ಚರ್ಚಿಸಿದರೂ ಸೂಕ್ತ ಉತ್ತರ ದೊರಕಲಿಲ್ಲ. ಕೊನೆಗೆ ಜೀವನದಲ್ಲಿ ನೊಂದಿರುವ, ಕಷ್ಟಗಳನ್ನೇ ಹಾಸಿಹೊದ್ದಿರುವ ಜನರಿಗೆ ಧರ್ಮಕ್ಕಿಂತ ಮಿಗಿಲಾದ ಮತ್ತೇನೋ ಬೇಕಿದೆ ಎಂಬ ಜ್ಞಾನೋದಯ ಎಲ್ವಿನ್‌ರಿಗೆ ಆಯಿತು.

ಅದೇ ಸಮಯಕ್ಕೆ ಅವರು ಎ. ಓ. ಹೂಂರಿಂದ ಸ್ಥಾಪಿಸಲ್ಪಟ್ಟ 'ಭಾರತೀಯ ರಾಷ್ಟ್ರೀಯ ಕಾಂಗ್ರೆಸ್'ನ ಚಟುವಟಿಕೆಗಳಿಂದ ಆಕರ್ಷಿತರಾಗಿದ್ದರು. 'ಭಾರತೀಯರು ಸ್ವಾತಂತ್ರ್ಯಕ್ಕಾಗಿ ಹೋರಾಡುತ್ತಿರುವುದು ನ್ಯಾಯವಾಗಿದೆ' ಎಂದು ಸ್ವಾತಂತ್ರ್ಯ ಹೋರಾಟಕ್ಕೆ ಪ್ರತ್ಯಕ್ಷ ಹಾಗೂ ಪರೋಕ್ಷ ಬೆಂಬಲವನ್ನು ಸೂಚಿಸಿದರು. ಎಲ್ವಿನ್ ಅವರ ಈ ನಡೆ ಬಿಷಪ್ ಅವರಿಗೆ ನುಂಗಲಾರದ ತುತ್ತಾಯಿತು. ಪಾದ್ರಿಗಳಿಗಂತೂ ತೀವ್ರ ಇರುಸುಮುರುಸಾಗತೊಡಗಿತು. 'ಧಾರ್ಮಿಕ ವ್ಯಕ್ತಿ ಯಾವುದೇ ರಾಜಕೀಯ ಪಕ್ಷದೊಂದಿಗೆ ಗುರ್ತಿಸಿಕೊಳ್ಳಬಾರದು. ನಮ್ಮದೇ ದೇಶದ ಆಳ್ವಿಕೆಯ ವಿರುದ್ಧ ನಡೆಯುತ್ತಿರುವ ಸ್ವಾತಂತ್ರ್ಯ ಹೋರಾಟದಂತಹ ಚಟುವಟಿಕೆಗಳಲ್ಲಿ ಭಾಗವಹಿಸುವುದು ಮಹಾಪರಾಧ' ಎಂದರು. ಈ ವಾದ ಮಾನವತೆಯನ್ನು ಪ್ರತಿಪಾದಿಸುವ ಎಲ್ವಿನ್‌ರಿಗೆ ಸರಿ ಕಾಣಲಿಲ್ಲ. ಅದೊಂದು ದಿನ ಎಲ್ವಿನ್ ಚರ್ಚಿನ ಪಾದ್ರಿಯವರನ್ನು ಭೇಟಿಯಾಗಿ, "ನನ್ನಿಂದ ಮತಾಂತರದಂತಹ ಕೆಲಸಗಳು ಸಾಧ್ಯವೇ ಇಲ್ಲ" ಎಂಬ ತನ್ನ ನಿರ್ಧಾರವನ್ನು ತಿಳಿಸಿ ತನ್ನೆಲ್ಲಾ ಅಡೆತಡೆಗಳನ್ನು ತೊರೆದು ದೀಕ್ಷೆಯನ್ನು ಕಿತ್ತಿಟ್ಟು ಹೊರನಡೆದರು.

**ಆನಂದ ಎನ್. ಎಲ್.**



"ತಾಯ್ನಾಡನ್ನು ಬಿಟ್ಟು ಬಂದಿರುವುದು ಕ್ರಿಶ್ಚಿಯನ್ ಧರ್ಮ ಪ್ರಚಾರಕ್ಕೆ. ಅದನ್ನು ಬಿಟ್ಟು ಮಾಡುವುದಾದರೂ ಏನು ? ದೇಶ ಬೇರೆ, ಭಾಷೆ ಗೊತ್ತಿಲ್ಲ, ಜನರ ಪರಿಚಯವಿಲ್ಲ, ಜೊತೆಗೆ ಚರ್ಚಿನ, ಸರ್ಕಾರದ ಕೆಂಗಣ್ಣಿಗೆ ಗುರಿಯಾಗಿದ್ದೇನೆ, ಮುಂದೇನು ?" ಎಂಬ ಚಿಂತೆಯಲ್ಲಿಯೇ ದಿನ ದೂಡಿದ ಎಲ್ವಿನ್‌ರಿಗೆ ತಾನು ತೆಗೆದುಕೊಂಡ ನಿರ್ಧಾರ ಸರಿಯೇ ಎಂಬ ಕೊರಗು ಕಾಡುತ್ತಲಿತ್ತು. ಹಲವು ದಿನಗಳ ನಂತರ ಅವರಿಗೆ ಒಂದು ಯೋಚನೆ ಸುಳಿಯಿತು. ಭಾರತದಲ್ಲಿ ರವೀಂದ್ರನಾಥ ಠಾಗೂರ್‌ರವರನ್ನು ಬಿಟ್ಟರೆ, ಎಲ್ವಿನ್ ಅವರಿಗೆ ಬಹಳ ಇಷ್ಟವಾದ ವ್ಯಕ್ತಿಯೆಂದರೆ ರಾಷ್ಟ್ರಪಿತ ಮಹಾತ್ಮ ಗಾಂಧೀಜಿ. ಭಾರತದಲ್ಲಿ ಸ್ವಾತಂತ್ರ್ಯ ಹೋರಾಟಕ್ಕಾಗಿ ತನ್ನ ಜೀವನವನ್ನು ಮುಡುಪಾಗಿಟ್ಟಿರುವ, ಆ ಮೂಲಕ ಹಲವು ನಾಯಕರಿಗೆ ದಾರಿದೀಪವಾಗಿರುವ ಮಹಾತ್ಮ ಗಾಂಧೀಜಿಯವರನ್ನು ಒಮ್ಮೆ ಭೇಟಿಯಾಗಿ ಮಾರ್ಗದರ್ಶನ ಪಡೆದರೆ ಹೇಗೆ ಎಂದು ಸಬರಮತಿ ಆಶ್ರಮದ ಕಡೆ ಹೊರಟರು.

**ಗಾಂಧಿ ಪ್ರಭಾವದಲ್ಲಿ ಎಲ್ವಿನ್ :** ಗಾಂಧೀಜಿಯವರ ವಿಶಿಷ್ಟತೆ ಎದ್ದು ಕಾಣುವುದು ತನ್ನ ಪ್ರಭಾವಕ್ಕೆ ಒಳಗಾದವರನ್ನು ಸೇವೆಗಾಗಿ ಜೀವನವನ್ನು ಮುಡುಪಾಗಿಡುವಂತೆ ಮಾಡುವ ಅವರ ಮಾಂತ್ರಿಕ ಶಕ್ತಿಯಿಂದ. ಇದರಿಂದ ವಿನೋಬಾ, ಜೆ. ಪಿ., ಕುಮಾರಪ್ಪ ಮತ್ತಿತರರು ಜನಮಾನಸದಲ್ಲಿ ಅಜರಾಮರರಾಗಿದ್ದಾರೆ. ಹಾಗೆಯೇ ಜನವರಿ ೧೯೨೮ರಲ್ಲಿ ಆಶ್ರಮಕ್ಕೆ ಭೇಟಿ ನೀಡಿದ ಎಲ್ವಿನ್ ಅವರಿಗೆ ಮೊದಲ ಭೇಟಿಯಲ್ಲಿಯೇ ಗಾಂಧೀಜಿಯವರು ಇಷ್ಟವಾದರು. ಕೆಲವೇ ಭೇಟಿಗಳಲ್ಲಿ ಎಲ್ವಿನ್ ಗಾಂಧೀಜಿಯವರಿಗೆ ಪ್ರೀತಿಪಾತ್ರರಾದರು. 'ಮೀರಾ ಬೆಹನ್ ನನ್ನ ಮಗಳಾದರೆ, ಎಲ್ವಿನ್ ನನ್ನ ಮಗನಿದ್ದಂತೆ' ಎಂಬ ಮಹಾತ್ಮರ ಮಾತು ಇಬ್ಬರ ನಡುವಿನ ಗಾಢ ಸಂಬಂಧವನ್ನು ಸೂಚಿಸುತ್ತದೆ. ಎಲ್ವಿನ್ ತನ್ನ ಆತ್ಮಚರಿತ್ರೆಯಲ್ಲಿ ಹೇಳಿಕೊಂಡಿರುವಂತೆ, 'ಅಂದೇ ನಾನು ಭಾರತದ ಪೌರತ್ವವನ್ನು ಗಾಂಧೀಜಿಯವರಿಂದ ಪಡೆದೆ' ಎಂಬುದು ಅವರಿಗೆ ಗಾಂಧೀಜಿಯವರ ಬಗೆಗಿನ ಗೌರವವನ್ನು ಅನಾವರಣಗೊಳಿಸುತ್ತದೆ. ಆಶ್ರಮದಲ್ಲೇ ಹಲವು ದಿನಗಳನ್ನು ಕಳೆದ ಎಲ್ವಿನ್‌ರಿಗೆ ನಿಸ್ವಾರ್ಥ ಸೇವೆಯ ನಿಜವಾದ ಪರಿಚಯವಾಯಿತು. ಜನರ ಸಮಸ್ಯೆ-ಸವಾಲುಗಳು ಅರಿವಾಗತೊಡಗಿದವು. ಸಮಾಜಸೇವಕರ ಸಾಮೀಪ್ಯ, ಅವರಲ್ಲಿನ ಸಮಾಜದಲ್ಲಿ ನೊಂದವರ ಸಮಸ್ಯೆಗಳನ್ನು ನಿರ್ಮೂಲನಗೊಳಿಸುವ ಸಂಕಲ್ಪ, ಎಲ್ವಿನ್‌ರಲ್ಲಿ ಅಗೋಚರ ಚೇತನವನ್ನು ಮೂಡಿಸತೊಡಗಿದವು. ಅವರ ಚಿಂತನೆಗಳಲ್ಲಿ, ದೃಷ್ಟಿಕೋನಗಳಲ್ಲಿ ಬದಲಾವಣೆಗಳು ಕಾಣತೊಡಗಿದವು. ಎಲ್ಲಕ್ಕಿಂತ ಮಿಗಿಲಾಗಿ, ಸರಳ ಜೀವನದ ಮಹತ್ವ ತಿಳಿಯತೊಡಗಿತು.

ಆದರೆ ತನ್ನ ಜೀವನದ ಗುರಿ ಇನ್ನೂ ನಿರ್ಧಾರವಾಗಿರಲಿಲ್ಲ. ಕಡೆಗೆ ಆ ದಿನವೂ ಬಂದಿತು.

ಅದೊಮ್ಮೆ ಗಾಂಧೀಜಿಯವರ ಅನುಯಾಯಿಗಳಲ್ಲಿ ಒಬ್ಬರಾಗಿದ್ದ ಜಮನ್ ಲಾಲ್ ಬಜಾಜರ ಜೊತೆ ಎಲ್ವಿನ್ ಚರ್ಚೆಯಲ್ಲಿ ತೊಡಗಿದ್ದರು. ಎಲ್ವಿನ್ನರು, "ಬಜಾಜ್ ಜೀ, ಗಾಂಧೀಜಿಯವರ ಆಶ್ರಮಕ್ಕೆ ಬಂದು ತಮ್ಮೆಲ್ಲರ ಜೊತೆ ಒಡನಾಡಿದ ಮೇಲೆ ನನ್ನ ಜೀವನವನ್ನು ಇಲ್ಲಿನ ಬಡಜನರ ಉದ್ಧಾರಕ್ಕೆ ಮೀಸಲಿಡಬೇಕೆಂದು ನಿರ್ಧರಿಸಿದ್ದೇನೆ. ಭಾರತದಲ್ಲೆಲ್ಲಾ ಕಾಲ್ನಡಿಗೆಯಲ್ಲಿ ಸಂಚರಿಸಿ, ಜನರ ನಾಡಿಮಿಡಿತ ಅರಿತ ತಮ್ಮಿಂದ ಉಪಕಾರವೊಂದು ಆಗುವುದಿದೆ. ನಾನು ಯಾರಿಗಾಗಿ ಸೇವಾ ಕೈಂಕರ್ಯ ಪ್ರಾರಂಭಿಸಲಿ ಎಂದು ತಿಳಿಯುತ್ತಿಲ್ಲ. ದಯವಿಟ್ಟು ಈ ನಿಟ್ಟಿನಲ್ಲಿ ಸಹಾಯ ಮಾಡಿ" ಎಂದು ಕೇಳಿಕೊಂಡರು. ಬಜಾಜ್ ಸ್ವಲ್ಪ ಸಮಯ ಸುಮ್ಮನಿದ್ದು ನಂತರ "ಎಲ್ವಿನ್, ನನ್ನ ಅಲ್ಪ ತಿಳುವಳಿಕೆಯಂತೆ, ಮಧ್ಯಭಾರತದಲ್ಲಿ (ಈಗಿರುವ ಮಧ್ಯಪ್ರದೇಶ, ಚತ್ತೀಸ್‌ಗಡ, ಪೂರ್ವ ಮಹಾರಾಷ್ಟ್ರ) ನೆಲೆಸಿರುವ ಹಲವು ಸಮುದಾಯಗಳಲ್ಲಿ 'ಗೊಂಡ' ಬುಡಕಟ್ಟು ಸಮುದಾಯವು ಎಲ್ಲ ರೀತಿಯಲ್ಲೂ ಅತ್ಯಂತ ಹಿಂದುಳಿದಿವೆ. ಅವರಿಗೆ ತಮ್ಮಂತಹ ಸೇವಾಕರ್ತರಿಂದ ಆಗಬೇಕಾದದ್ದು ತುಂಬ ಇದೆ. ಯೋಚಿಸಿ ನಿರ್ಧಾರಕ್ಕೆ ಬನ್ನಿ" ಎಂದರು. 'ಗೊಂಡ' ಎಂಬ ಪದ ಎಲ್ವಿನ್‌ರ ಕಿವಿಗೆ ಮಂತ್ರದಂತೆ ಕೇಳಿತು. ಮರುಮಾತನಾಡದೆ ಎಲ್ವಿನ್ ಗೊಂಡರ ಸೇವೆಗೆ ಒಪ್ಪಿದರು.

ಬಜಾಜರ ಮಾತಿನಿಂದ ಪ್ರೇರೇಪಿತರಾದ ಎಲ್ವಿನ್ ಮೂರು 'ಆಡಿ'ಗಳ ಗಣವಾದ 'ಸನ್ವಾವಾಲ್ವಾಪುರ' ಎಂಬಲ್ಲಿ ನೆಲಸಿರುವ 'ಗೊಂಡ'ರ ಬಗ್ಗೆ ತಿಳಿಯಲು, ಅವರಿಗಾಗಿ ಕೆಲಸ ಮಾಡಲು ನಿರ್ಧರಿಸಿದರು. ಆದರೆ ಅದಕ್ಕಿಂತ ಮೊದಲು ಅವರಿಗೆ ಬುಡಕಟ್ಟು ಜನರ ಬಗ್ಗೆ ಮೂಲಭೂತ ಅಂಶಗಳನ್ನು ತಿಳಿಯುವುದು ಅವಶ್ಯವೆನಿಸಿತು. ಅದಕ್ಕಾಗಿ ಅವರು ಆದಿವಾಸಿಗಳ ಕಣ್ಮಣಿ 'ಠಕ್ಕರ್ ಭಾಪಾ' ಅವರನ್ನು ಭೇಟಿಯಾಗಿ ಸೂಕ್ತ ಮಾರ್ಗದರ್ಶನ ಪಡೆದರು. ಅವರಿಗೆ ಆತ್ಮವಿಶ್ವಾಸ ಹೆಚ್ಚಿತು.

'ಗೊಂಡ' ಬುಡಕಟ್ಟು ಸಮುದಾಯವು ಆದಿವಾಸಿಗಳಲ್ಲೇ ಸಾಮಾಜಿಕವಾಗಿ, ಆರ್ಥಿಕವಾಗಿ ಅತ್ಯಂತ ಹಿಂದುಳಿದ ಸಮುದಾಯ. ಇವರನ್ನು ನಾಗರಿಕರೆನಿಸಿಕೊಂಡ ಜನರು ಮೋಸ ಮಾಡುತ್ತಿದ್ದ ಪರಿ ಸ್ವತಃ ನೋಡಿದವರಿಗೆ ಅರ್ಥವಾಗುತ್ತಿತ್ತು. ಅದಕ್ಕೊಂದು ಉದಾಹರಣೆ ಇಲ್ಲಿದೆ. ಗೊಂಡರು ಕೆಲವು ಸಂದರ್ಭಗಳಲ್ಲಿ ಜಗಳ ಆಡಿಕೊಂಡು ತಮ್ಮಲ್ಲಿನ ಪಾರಂಪರಿಕ ನ್ಯಾಯವ್ಯವಸ್ಥೆಯ ಬಗ್ಗೆ ಗೌರವವಿಲ್ಲದೆ, ವಕೀಲರ ಮೊರೆ ಹೋಗುತ್ತಿದ್ದರು. ವಕೀಲರು ಇಂತಹ ಸಂದರ್ಭವನ್ನು ಸೂಕ್ತವಾಗೇ ಬಳಸಿಕೊಳ್ಳುತ್ತಿದ್ದರು. ವಕೀಲರು ಎರಡು ಬಣ್ಣದ ಪುಸ್ತಕಗಳನ್ನು ಇಟ್ಟಿರುತ್ತಿದ್ದರು. ಒಂದು ಕೆಂಪು ಮತ್ತೊಂದು ಹಳದಿ ಬಣ್ಣದ್ದು. ಜನರಿಗೆ ಕೆಂಪು ಬಣ್ಣದ ಪುಸ್ತಕ ಶ್ರೇಷ್ಠವೆಂದೂ, ಅದನ್ನು ಫೌಂಟನ್ ಪೆನ್‌ನಲ್ಲಿ ಬರೆಯುತ್ತೇವೆಂದೂ, ಅದರಲ್ಲಿ ವ್ಯಾಜ್ಯಗಳನ್ನು ನಮೂದಿಸಿದರೆ ನ್ಯಾಯ ಬೇಗ ಸಿಗುತ್ತದೆಂದು ಹೇಳಿ ಹೆಚ್ಚು ಹಣ ವಸೂಲಿ ಮಾಡುತ್ತಿದ್ದರು. ಅವೆಲ್ಲವೂ ವಕೀಲರು ಕಕ್ಷಿದಾರರಿಂದ ಹೆಚ್ಚಿನ ಹಣ ಪೀಕಲು ಮಾಡಿಕೊಂಡಿದ್ದ ಏರ್ಪಾಡೇ ಹೊರತು ಬೇರೇನೂ ಆಗಿರಲಿಲ್ಲ. ಮುಗ್ಧ ಆದಿವಾಸಿಗಳು ಅದನ್ನೇ ನಿಜವೆಂದು ನಂಬಿ ತಾವು ಕಷ್ಟಪಟ್ಟು ದುಡಿದು, ಉಳಿಸಿದ ಹಣವನ್ನು ವಕೀಲರಿಗೆ ತೆರುತ್ತಿದ್ದರು. ಕಲೆ, ಸಂಸ್ಕೃತಿ, ಸಂಸ್ಕಾರಗಳಲ್ಲಿ ಶ್ರೀಮಂತರಾಗಿದ್ದ ಗೊಂಡರು ತಮ್ಮ ಮುಗ್ಧತೆಯಿಂದಲೇ ಸರ್ಕಾರಿ ಅಧಿಕಾರಿಗಳಿಂದ, ಸರ್ಕಾರೇತರ



*ಗಾಂಧಿಯವರೊಡನೆ ವೆರ್ರಿಯರ್ ಎಲ್ವಿನ್*

ಸಂಸ್ಥೆಗಳಿಂದ, ಅರಣ್ಯಾಧಿಕಾರಿಗಳಿಂದ ದಮನ ಕ್ಕೊಳಗಾಗುತ್ತಿದರು.

ಎಲ್ವಿನ್‌ಗಿಂತ ಮೊದಲು ಹಲವರು ಗೊಂಡರ ಉದ್ಧಾರಕ್ಕಾಗಿ ಕೆಲಸ ಮಾಡಿದ್ದರು. ಆದರೆ, ಆ ಸಮುದಾಯದ ಓರೆಕೋರೆಗಳನ್ನು ಸರಿಯಾಗಿ ಅರ್ಥೈಸಿಕೊಳ್ಳಲು ವಿಫಲರಾದದ್ದರಿಂದ ಅವರ ಕೆಂಗಣ್ಣಿಗೆ ಗುರಿಯಾಗಬೇಕಾಯಿತು. ಉದಾಹರಣೆಗೆ, ಕ್ಷತ್ರಿಯ ಸುರಜ್‌ವಂಶಿ ಮಹಾಸಭಾದ ಕಾರ್ಯಕರ್ತರು ಗೊಂಡ ಸಮುದಾಯದವರು ಕುಡಿತವನ್ನು ವರ್ಜಿಸಬೇಕೆಂದೂ, ಮೀರಿದರೆ ೫೦ ರೂ. ದಂಡ ವಿಧಿಸುವುದಾಗಿಯೂ ಕಾನೂನು ಮಾಡಿದರು. ಶತಮಾನಗಳಿಂದಲೂ ಕುಡಿತವನ್ನು ತನ್ನ ಜೀವನದಲ್ಲಿ ರೂಢಿಸಿಕೊಂಡು ಬಂದಿದ್ದ ಗೊಂಡರಿಗೆ ಇದು ಸರಿ ಕಾಣಲಿಲ್ಲ. ಉಗ್ರವಾಗಿ ವಿರೋಧಿಸಿದರು. ಕೊನೆಗೊಂದು ದಿನ ಆಡಿಗಳಿಂದಲೇ ಅವರನ್ನು ಹೊಡೆದು ಓಡಿಸಿದರು. ಇಂತಹ ಘಟನೆಗಳಿಂದ ಪಾಠ ಕಲಿತ ಎಲ್ವಿನ್ ಆದಿವಾಸಿಗಳ ಮೇಲೆ ಏನನ್ನೂ 'ಹೇರುವುದು' ಒಳಿತಲ್ಲವೆಂದೂ ಅವರ ಸಾಂಸ್ಕೃತಿಕ, ಧಾರ್ಮಿಕ ಆಚರಣೆಗಳನ್ನು ಗೌರವಿಸಬೇಕೆಂಬುದನ್ನೂ ಅರಿತುಕೊಂಡರು.

ಗೊಂಡ ಸಮುದಾಯದಲ್ಲಿ ಅಭಿವೃದ್ಧಿಗೆ ಸಂಬಂಧಿಸಿದಂತೆ ಅವರ ಕಲೆ, ಸಾಹಿತ್ಯವನ್ನು ದಾಖಲಿಸುವ, ಸಂರಕ್ಷಿಸುವ, ಹೊರ ಜಗತ್ತಿಗೆ ಅದರ ಮಹತ್ವವನ್ನು ಸಾರುವ ಕೆಲಸವನ್ನು ಮಾಡಿದರು. ಆ ನಿಟ್ಟಿನಲ್ಲಿ ಹಲವು ಪ್ರಯೋಗಗಳನ್ನು ಮಾಡಿದರು. ಅದರಲ್ಲಿ ಪ್ರಮುಖವಾದುದು ಗೆಳೆಯ ಶಾಮರಾವ್‌ರೊಂದಿಗೆ ಸೇರಿ ಗಾಂಧೀಜಿಯವರ ಸಬರಮತಿ ಆಶ್ರಮದ ಮಾದರಿಯಲ್ಲಿ ಸ್ಥಾಪಿಸಿದ 'ತ್ವಾರು' ಎಂಬ ಆಶ್ರಮ. ಇದರ ವಿಶೇಷತೆಯೆಂದರೆ, ಕುಟೀರಗಳು ಪೂರ್ಣವಾಗಿ ಗೊಂಡ ಸಮುದಾಯದ ಸಂಸ್ಕೃತಿಯನ್ನು ಬಿಂಬಿಸುವಂಥದ್ದಾಗಿದ್ದು, ಅವರೇ ಅದರ ನಿರ್ಮಾತೃಗಳು. ಅಲ್ಲಿ ಎಲ್ಲಾ ಧರ್ಮ, ಜಾತಿ ಸಮುದಾಯದ ಜನರಿಗೂ ಪ್ರವೇಶವಿತ್ತು. ಗಾಂಧೀಜಿಯ ಆಶ್ರಮದ ರೀತಿ-ನೀತಿಗಳೇ ಇಲ್ಲೂ ಅನ್ವಯಿಸುತ್ತಿದ್ದವು. ಅಲ್ಲಿ ಕೆಲಸಮಾಡಲು ಆಸಕ್ತಿಯಿದ್ದವರಿಗೆ ಕೈತುಂಬ ಕೆಲಸ ಮತ್ತು ಕೂಲಿ ಕೊಡುತ್ತಿದ್ದರು. ಕಾಡಿನ ಜನರು ಹಣದ ಮುಖ ಕಂಡಿದ್ದು ಬಹುಶಃ ಆಗಲೇ.

**ಎಲ್ವಿನ್‌ರ ವೈವಾಹಿಕ ಜೀವನ :** ಎಲ್ವಿನ್‌ರ ವೈವಾಹಿಕ ಜೀವನ ವಿವಾದಿತವಾಗಿದೆ. ಅವರು ೪ ಏಪ್ರಿಲ್ ೧೯೪೦ರಲ್ಲಿ 'ಕೋಸಿ' ಎಂಬ 'ರಾಜ್‌ಕೊಂಡ್' ಬುಡಕಟ್ಟಿನ ಹುಡುಗಿಯನ್ನು ವಿವಾಹವಾದರು. ಆಗ ಎಲ್ವಿನ್‌ರ ವಯಸ್ಸು ೪೦. ಕೋಸಿಗೆ ೧೩ ! ಹೆಂಡತಿಯಾದ ಆ ಬಾಲೆಯನ್ನು ಎಲ್ವಿನ್‌ರು ಮಾನವಶಾಸ್ತ್ರದ ಸಂಶೋಧನಾ ವಸ್ತುವಾಗಿ ಬಳಸಿಕೊಂಡರು. 'ಪಾಲ್ಗೊಳ್ಳುವಿಕೆ ಪರಿವೀಕ್ಷಣೆ'ಯ ಮೂಲಕ ಬುಡಕಟ್ಟಿನ ಮಹಿಳೆಯ ಮೂಲಕ ಆಪ್ತ ಲೈಂಗಿಕತೆಗೆ ಸಂಬಂಧಿಸಿದ ವಿಷಯಗಳ ಬಗ್ಗೆ ಆಳವಾದ ಅಧ್ಯಯನ ಕೈಗೊಂಡರು. ಕೋಸಿಯು ಎಲ್ವಿನ್ ಜವಾಹರಲಾಲ್ (ಕುಮಾರ್) ಎಂಬ ಗಂಡು ಮಗುವಿಗೆ ಜನ್ಮ ನೀಡಿದಳು. ಆದರೆ ಹೊಂದಾಣಿಕೆಯ ಕೊರತೆಯಿಂದ ಈ ವಿವಾಹ ಬಹುಕಾಲ ಬಾಳಲಿಲ್ಲ. ವಿವಾಹ ವಿಚ್ಛೇದನಕ್ಕಾಗಿ ಕೊಲ್ಕತ್ತ ಹೈಕೋರ್ಟ್‌ಗೆ ಅರ್ಜಿ ಸಲ್ಲಿಸಿದ ಎಲ್ವಿನ್, ೧೯೪೯ರಲ್ಲಿ ವಿಚ್ಛೇದನ ಪಡೆಯುವಲ್ಲಿ ಯಶಸ್ವಿಯಾದರು. ಕೆಲಕಾಲದ ನಂತರ ಅವರು ಫರ್ದಾನ್ ಬುಡಕಟ್ಟಿನ 'ಲೀಲಾ' ಎಂಬ ಬುಡಕಟ್ಟಿನ ಹುಡುಗಿಯನ್ನು ವಿವಾಹವಾದರು. ಮೂರು ಮಕ್ಕಳ ತಂದೆಯೂ ಆದರು. ಲೀಲಾ, ಎಲ್ವಿನ್ ಮರಣ ಹೊಂದುವವರೆಗೂ ಜೊತೆಯಲ್ಲಿದ್ದರು.

'ಗೊಂಡ' ಬುಡಕಟ್ಟು ಜನರ ಜೊತೆ ಹಲವು ವರ್ಷಗಳು ಕೆಲಸ ಮಾಡಿದ ನಂತರ ಎಲ್ವಿನ್ 'ಕರಂಜಿಯಾ' ಮತ್ತು 'ಮುರಿಯಾ' ಬುಡಕಟ್ಟು ಸಮುದಾಯಗಳಿಗಾಗಿ ಕೆಲಸ ಮಾಡಲು ನಿರ್ಧರಿಸಿದರು. ಈ ಸಮುದಾಯದಲ್ಲಿ ಹಲವು ಅನಾಗರಿಕ ಪದ್ಧತಿಗಳಿದ್ದವು. ಅದರಲ್ಲಿ ಪ್ರಮುಖವಾದುದು, ಮೂಢನಂಬಿಕೆಗೆ ಬಲಿಯಾಗಿ ಮನುಷ್ಯರ ಪ್ರಾಣಕ್ಕೆ ಬೆಲೆ ಕೊಡದೆ ದೇವರನ್ನು ಸಂತುಷ್ಟಗೊಳಿಸುತ್ತಿದ್ದೇವೆಂಬ ಭ್ರಮೆಯಲ್ಲಿ ಆಚರಿಸುತ್ತಿದ್ದ 'ನರಬಲಿ' ಪದ್ಧತಿ. ಇದಕ್ಕೆ ಅವರು ಕೊಡುತ್ತಿದ್ದ ಸಬೂಬು 'ಭೂಮಿತಾಯಿ ನಮ್ಮನ್ನೆಲ್ಲಾ ಸಲಹುತ್ತಾಳೆ. ಆ ತಾಯಿ ಸಮೃದ್ಧವಾಗಿರಬೇಕು. ಅದಕ್ಕಾಗಿ ಮಾನವನ ರಕ್ತ ಮಣ್ಣು ಸೇರಬೇಕು' ಎಂಬುದು. ಹಲವು ಪ್ರಯತ್ನಗಳ ನಂತರ ಆ ಪದ್ಧತಿ ನಿಂತುಹೋಗಿ, 'ಪ್ರಾಣಿ ಬಲಿ' ಪದ್ಧತಿ ರೂಢಿಗೆ ಬಂತು. ಈ ಬದಲಾವಣೆಯಲ್ಲಿ ಎಲ್ವಿನ್‌ರ ಪಾತ್ರ ಗಮನಾರ್ಹ.

> **ಕೆಚ್ಚೆದೆಯ ಕನ್ನಡಿಗ ಟೀಪು ಸುಲ್ತಾನ್**
>
> ವಿವಿಧ ಲೇಖಕರು ಬರೆದಿರುವ ಲೇಖನ ಗಳಿಂದ ಹಾಗೂ ಐತಿಹಾಸಿಕ ದಾಖಲೆಗಳಿಂದ ಸಂಗ್ರಹಿಸಿ ಸಿದ್ಧಪಡಿಸಿರುವ ಅಪೂರ್ವವಾದ ಕೃತಿ 'ಕೆಚ್ಚೆದೆಯ ಕನ್ನಡಿಗ ಟೀಪು ಸುಲ್ತಾನ್'. ಇದೇ ನವೆಂಬರ್ ೧೧ರಂದು ಟೀಪು ಸುಲ್ತಾನನ ಜನ್ಮ ದಿನಾಚರಣೆಯ ಸಂದರ್ಭದಲ್ಲಿ ಈ ಕೃತಿ ಬಿಡುಗಡೆಯಾಗಲಿದೆ. ಪ್ರತಿಗಳಿಗಾಗಿ ನವಕರ್ನಾಟಕ ಪುಸ್ತಕ ಮಳಿಗೆಗಳನ್ನು ಸಂಪರ್ಕಿಸಿ.

ಒಟ್ಟಾರೆ, ೧೯೩೨ರಿಂದ ೧೯೫೨ರವರೆಗೆ ಮಧ್ಯಭಾರತದಲ್ಲಿ ನೆಲೆಸಿದ್ದ ಎಲ್ವಿನ್ ಅಲ್ಲಿನ ಬುಡಕಟ್ಟು ಜನರ ಅಭಿವೃದ್ಧಿಗಾಗಿ ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಂಡರು. ಅನಕ್ಷರಸ್ಥ ಆದಿವಾಸಿಗಳಿಗೆ ಶಿಕ್ಷಣ ನೀಡುವುದು, ಪಾರಂಪರಿಕ ವೈದ್ಯಕೀಯ ಪದ್ಧತಿಯಲ್ಲಿನ ದೋಷಗಳನ್ನು ಗುರುತಿಸಿ ಎಲ್ಲರಿಗೂ ಸೂಕ್ತ ಆರೋಗ್ಯ ಸೌಲಭ್ಯಗಳನ್ನು ತಲುಪಿಸಲು ಶ್ರಮಿಸಿದರು. ಆ ಮೂಲಕ ಆದಿವಾಸಿಗಳಿಗೆ ಬಹಳ ಆತ್ಮೀಯರಾದರು. ತನ್ನ ಬದ್ಧತೆ ಹಾಗೂ ಆದಿವಾಸಿಗಳ ಬಗೆಗಿದ್ದ ನೈಜ ಕಳಕಳಯಿಂದ ಆ ಜನರ ಸಾಮಾಜಿಕ-ಆರ್ಥಿಕ ಜೀವನದಲ್ಲಿ ಗುರುತರ ಬದಲಾವಣೆಗಳನ್ನು ತಂದರು.

ಈ ಮಧ್ಯೆ ಎಲ್ವಿನ್‌ರಿಗೆ ೧೯೪೮ರಲ್ಲಿ ಸ್ಥಾಪಿಸಲ್ಪಟ್ಟ 'ಆಂಥ್ರೋಪಾಲಿಜಿಕಲ್ ಸರ್ವೇ ಆಫ್ ಇಂಡಿಯಾ'ದ ಉಪ ನಿರ್ದೇಶಕರಾಗಲು ಡಾ॥ ಬಿ. ಎಸ್. ಗುಹಾ ಅವರಿಂದ ಆಹ್ವಾನ ಬಂತು. ಅಂದಿನ ಪ್ರಧಾನಿ ಜವಾಹರಲಾಲ್ ನೆಹರು ಅವರು ಇದಕ್ಕೆ ಪ್ರಮುಖ ಕಾರಣಕರ್ತರಾಗಿದ್ದರು. ಈ ಆಹ್ವಾನವನ್ನು ಮುಕ್ತ ಮನಸ್ಸಿನಿಂದ ಒಪ್ಪಿಕೊಂಡ ಎಲ್ವಿನ್ ಒಂದು ವರ್ಷ ಯಶಸ್ವಿಯಾಗಿ ಸೇವೆ ಸಲ್ಲಿಸಿದರು. ಆದರೆ ಶೀಘ್ರವೇ ಅದು ಬುಡಕಟ್ಟು ಸಮುದಾಯಗಳತ್ತ ಉದ್ಧಾರಕ್ಕೆ ಸೇವೆ ಸಲ್ಲಿಸಲು ಸೂಕ್ತ ಸ್ಥಳವಲ್ಲವೆಂದು ಬುಡಕಟ್ಟು ಸಮುದಾಯಗಳತ್ತ ಮತ್ತೆ ಮುಖ ಮಾಡಿದರು. ಕಾರಣ, ಬುಡಕಟ್ಟು ಅಭಿವೃದ್ಧಿಯನ್ನು ಜನರ ಜೊತೆ ಬೆರೆತು, ನಾಡಿಮಿಡಿತ ಅರಿತು ಸಾಧಿಸಬೇಕೇ ಹೊರತು, ಎಲ್ಲೋ ದೂರದಲ್ಲಿ ಹವಾನಿಯಂತ್ರಿತ ಕೊಠಡಿಗಳಲ್ಲಿ ಕುಳಿತಲ್ಲ ಎಂಬುದು ಅವರ ಅಚಲ ನಂಬಿಕೆಯಾಗಿತ್ತು.

ಮಧ್ಯ ಭಾರತದಲ್ಲಿ ಸೇವೆ ಸಲ್ಲಿಸಿದ ಎಲ್ವಿನ್ ಅವರಿಗೆ ಭಾರತ ಸರ್ಕಾರವು ಎನ್.ಇ.ಎಫ್.ಎ. (ಈಗಿನ ಅರುಣಾಚಲ) ಪ್ರದೇಶಕ್ಕೆ ಸಂಬಂಧಿಸಿದಂತೆ ಬುಡಕಟ್ಟು ಸಮುದಾಯಗಳಿಗೆ ಸೂಕ್ತ ಯೋಜನೆಯನ್ನು ರೂಪಿಸುವ ಜವಾಬ್ದಾರಿಯನ್ನು ವಹಿಸಿತು. ಇದು ನಿಜಕ್ಕೂ ಅತ್ಯಂತ ಸವಾಲಿನ ಕೆಲಸವಾಗಿತ್ತು. ಕಾರಣ, ಹೊರಗಿನವರು ತಮ್ಮ ಸಮುದಾಯಗಳಿಗೆ ಪ್ರವೇಶಿಸುವುದನ್ನು ಅಲ್ಲಿನ ಜನರು ಉಗ್ರವಾಗಿ ಪ್ರತಿಭಟಿಸುತ್ತಿದ್ದರು. ಭಾರತದ ಪ್ರಧಾನಿ ಜವಾಹರಲಾಲ್ ನೆಹರು ಅಂಥವರನ್ನೇ ಆ ಜನರು ತಮ್ಮ ನೆಲಕ್ಕೆ ಬಿಟ್ಟುಕೊಳ್ಳಲಿಲ್ಲ. ಇದಕ್ಕೆ ಕಾರಣ, ಭಾರತದ ಒಕ್ಕೂಟಕ್ಕೆ ಸೇರಲು 'ನಾಗ' ಮತ್ತಿತರ ಬುಡಕಟ್ಟುಗಳಿಗೆ ಇಷ್ಟವಿರಲಿಲ್ಲ. ಅವರು ತಮ್ಮದೇ ಆಳ್ವಿಕೆಯಲ್ಲಿ 'ಗೂರ್ಖಿ' ಪ್ರದೇಶವನ್ನು ರಚಿಸಿಕೊಳ್ಳಬೇಕೆಂಬ ಕನಸಿನಲ್ಲಿದ್ದರು. ತಮ್ಮದೇ ಪ್ರತ್ಯೇಕ ನಾಡಿಗೆ ಬೇಡಿಕೆ ಇಟ್ಟು ಹೋರಾಟಕ್ಕಿಳಿದಿದ್ದರು. ಆದರೆ ನಾಗಾಗಳ ಈ ಹೋರಾಟವನ್ನು ಭಾರತ ಸರ್ಕಾರ ಬಲಪ್ರಯೋಗದ ಮೂಲಕ ಹತ್ತಿಕ್ಕಲು ಮುಂದಾಯಿತು.

ಸರ್ಕಾರದ ಈ ನಡೆ ಬುಡಕಟ್ಟುಗಳಲ್ಲಿ ಮತ್ತಷ್ಟು ಸೇಡಿನ ಭಾವನೆ ಬೆಳೆಯಲು ಕಾರಣವಾಯಿತು. ತಮ್ಮದೇ ನಾಗರಿಕ ಸೇನೆ ಕಟ್ಟುಕೊಂಡು ಹೋರಾಟಕ್ಕಿಳಿದರು. ಸಾವಿರಾರು ಜನರ ಮಾರಣಹೋಮವಾಯಿತು. ಮಿಲಿಟರಿಯಿಂದ ಹಲವು ಮುಗ್ಧ ಜನರ ಮಾನ ಮತ್ತು ಪ್ರಾಣಹಾನಿ ಆಯಿತು. ಮಿಲಿಟರಿಯಿಂದ ಅಲ್ಲಿ ಶಾಂತಿ ಸ್ಥಾಪನೆ ಅಸಾಧ್ಯವೆಂದು ಸರ್ಕಾರಕ್ಕೆ ತಿಳಿಯಿತು. ಬುಡಕಟ್ಟು ಜನರ ಅಭಿವೃದ್ಧಿಯಿಂದ ಜನರ ಮನ ಒಲಿಸಿಕೊಂಡು ಭಾರತಕ್ಕೆ ಸೇರುವಂತೆ ಮಾಡಬಹುದೆಂದು ಪ್ರಧಾನಿ ನೆಹರೂ ಹಲವು ಪ್ರಯತ್ನಗಳನ್ನು ಮಾಡಿದರು. ಆದರೆ ಜನರ ಮನೋಪರಿವರ್ತನೆ ಅಷ್ಟು ಸುಲಭವಾಗಿರಲಿಲ್ಲ. ಸರ್ಕಾರ ಯಾರನ್ನೇ ಆ ಪ್ರದೇಶಕ್ಕೆ, ಯಾವುದೇ ಉದ್ದೇಶಕ್ಕಾದರೂ ಕಳುಹಿಸಿದರೂ ಸರಿಯೇ, ಅದು 'ನಮ್ಮನ್ನು ತನ್ನ ತೆಕ್ಕೆಗೆ ತೆಗೆದುಕೊಳ್ಳಲು ಸರ್ಕಾರ ಮಾಡಿರುವ ಮಸಲತ್ತೆಂದು' ಆದಿವಾಸಿಗಳು ತಿಳಿದು ವಿರೋಧಿಸುತ್ತಿದ್ದರು. ಇಂತಹ ಸಂದರ್ಭದಲ್ಲೇ ನೆಹರೂ ಎಲ್ವಿನ್‌ರಿಗೆ ಬುಡಕಟ್ಟು ಅಭಿವೃದ್ಧಿ ಸಚಿವಾಲಯಕ್ಕೆ ಸಲಹೆಗಾರರಾಗಿ ನೇಮಿಸಿ ಆ ಪ್ರದೇಶಕ್ಕೆ ಕಳುಹಿಸಿದರು.

## ಅಭಿನಂದನೆಗಳು

ಕರ್ನಾಟಕ ಸಾಹಿತ್ಯ ಅಕಾಡೆಮಿಯು ೨೦೧೫ನೇ ಸಾಲಿನ ಗೌರವ ಪ್ರಶಸ್ತಿಯನ್ನು ಸಾಹಿತಿಗಳಾದ ಡಾ॥ ಎಚ್. ಎಸ್. ಶಿವಪ್ರಕಾಶ್, ಡಾ॥ ಕೃಷ್ಣಮೂರ್ತಿ ಹನೂರು, ಡಾ॥ ಎಚ್. ನಾಗವೇಣಿ, ಡಾ॥ ಎಲ್. ಹನುಮಂತಯ್ಯ ಹಾಗೂ ನೇಮಿಚಂದ್ರ ಅವರಿಗೆ ನೀಡಲಾಗಿದೆ. ಇವರೆಲ್ಲರಿಗೂ 'ನವಕರ್ನಾಟಕ' ಹಾಗೂ 'ಹೊಸತು' ಬಳಗದ ಅಭಿನಂದನೆಗಳು.

ಸರ್ಕಾರದ ಮನವಿಗಿಂತ ಮೊದಲೇ ಎಲ್ವಿನ್ ಖಾಸಗಿಯಾಗಿ ಅಲ್ಲಿಗೆ ತೆರಳಲು ಪ್ರಯತ್ನಿಸಿದ್ದರು. ಆದರೆ ಅದು ಸಾಧ್ಯವಾಗಿರಲಿಲ್ಲ. ಸರ್ಕಾರವೇ ಇಂದು ಆಹ್ವಾನಿಸಿದ್ದರಿಂದ ಎಲ್ವಿನ್‌ರಿಗೆ ಖುಷಿಯಾಯಿತು. ಅಲ್ಲಿ ಎಲ್ವಿನ್ ಮುಖ್ಯವಾಗಿ ಎರಡು ವಿಚಾರಗಳಿಗೆ ಹೆಚ್ಚಿನ ಮಹತ್ವ ಕೊಟ್ಟರು. ಒಂದು, ಅತ್ಯಂತ ಹಿಂದುಳಿದ ಆದಿವಾಸಿಗಳ ಸಾಮಾಜಿಕ – ಆರ್ಥಿಕ ವಿಷಯಗಳ ಬಗ್ಗೆ ಅಧ್ಯಯನ ಕೈಗೊಂಡು ಸರ್ಕಾರಕ್ಕೆ ವಸ್ತುಸ್ಥಿತಿಯನ್ನು ತಿಳಿಸುವುದು. ಹಾಗೆಯೇ ಬುಡಕಟ್ಟು ಜನರ ವಿಶಿಷ್ಟ ಕಲೆ – ಸಂಸ್ಕೃತಿಯನ್ನು ದಾಖಲಿಸಿ ಸಂರಕ್ಷಿಸುವುದು. ಈ ಎರಡೂ ಕೆಲಸವನ್ನು ಎಲ್ವಿನ್ ಅತ್ಯಂತ ಚೊಕ್ಕವಾಗಿ ನಿಭಾಯಿಸಿದ್ದಾರೆ. ಜಟಿಲವಾಗಿದ್ದ ಈಶಾನ್ಯ ರಾಜ್ಯಗಳ ಸಮಸ್ಯೆಗೆ ಶಾಶ್ವತ ಪರಿಹಾರ ದೊರಕಿಸಿಕೊಡಲು ಇವರಿಂದ ಸಾಧ್ಯವಾಗ ಲಿಲ್ಲವಾದರೂ, ಭಾರತದ ಪ್ರಧಾನಿಯನ್ನು ಕೂಡ ಹತ್ತಿರಕ್ಕೆ ಸೇರಿಸದ ಬುಡಕಟ್ಟು ಸಮುದಾಯಗಳನ್ನು ಒಲಿಸಿಕೊಂಡು, ಅಧ್ಯಯನಗಳನ್ನು ಕೈಗೊಂಡು, ನೆಹರೂ ಸರ್ಕಾರಕ್ಕೆ ಆ ಸಮುದಾಯಗಳ ಸಮಸ್ಯೆಗಳ ಗಂಭೀರತೆ, ಸವಾಲುಗಳು, ಆಶೋತ್ತರಗಳು ಇವೇ ಮೊದಲಾದ ಅಂಶಗಳೆಡೆಗೆ ಸಮಗ್ರ ಮಾಹಿತಿಯನ್ನು ಸಲ್ಲಿಸಿ, ಅಗತ್ಯ 'ಬುಡಕಟ್ಟು ನೀತಿ'ಗಳನ್ನು ರೂಪಿಸಲು ಹಗಲಿರುಳು ಶ್ರಮಿಸಿದರು.

ಅದೊಂದು ದಿನ ಗೃಹ ಸಚಿವ ಜಿ. ಬಿ. ಪಂತ್ ಅವರಿಂದ ಎಲ್ವಿನ್‌ರಿಗೆ ಕರೆ ಬಂತು. ಭಾರತ ಸರ್ಕಾರವು ಎರಡನೆಯ ಪಂಚವಾರ್ಷಿಕ ಯೋಜನೆಯಲ್ಲಿ ಜಾರಿಗೆ ತಂದಿದ್ದ 'ವಿಶೇಷ ವಿವಿಧೋದ್ದೇಶ ಮಂಡಳಿ'ಗಳು ಬುಡಕಟ್ಟು ಜನರ ಮೇಲೆ ಉಂಟುಮಾಡಿರುವ ಪರಿಣಾಮಗಳ ಬಗ್ಗೆ ಅಧ್ಯಯನ ಕೈಗೊಂಡು ವರದಿ ಸಲ್ಲಿಸುವಂತೆ ಕೋರಲಾಗಿತ್ತು. ಎಲ್ವಿನ್ ಈ ಸಮಿತಿಗೆ ಮುಖ್ಯಸ್ಥರಾಗಿ ನೇಮಕವಾದರು. ದೇಶದ ಕೆಲವು ಹಿಂದುಳಿದ ಬುಡಕಟ್ಟು ಸಮುದಾಯಗಳ ಬಗ್ಗೆ ಅಧ್ಯಯನ ಕೈಗೊಂಡ ಸಮಿತಿಯು ೫೫೦ ಪುಟಗಳ ವರದಿಯೊಂದನ್ನು ಸರ್ಕಾರಕ್ಕೆ ಸಲ್ಲಿಸಿತು. ಅದರಲ್ಲಿ ಬುಡಕಟ್ಟು ಸಮುದಾಯಗಳ ಅಭಿವೃದ್ಧಿಗೆ ಸಂಬಂಧಿಸಿದಂತೆ ಸರ್ಕಾರದ ಅರೆಬೆಂದ ಯೋಜನೆಗಳು, ಹಣಕಾಸಿನ ಕೊರತೆ, ಸೂಕ್ತ ಸಿಬ್ಬಂದಿ ವರ್ಗದ ಅವಶ್ಯಕತೆ ಮುಂತಾದುವನ್ನು ಸೂಕ್ತವಾಗಿ ಮಂಡಿಸಿದ್ದರು. ಇದನ್ನು ಪುರಸ್ಕರಿಸಿದ ಸರ್ಕಾರ, ಮೂರನೆಯ ಪಂಚವಾರ್ಷಿಕ ಯೋಜನೆಯಲ್ಲಿ ಬುಡಕಟ್ಟು ಅಭಿವೃದ್ಧಿಗೆ ಅನುದಾನವನ್ನು ಮೂರು ಪಟ್ಟು ಅಂದರೆ, ಮೂರು ಕೋಟಿಗಳಿಗೆ ಹೆಚ್ಚಿಸಿದರು. ಅದನ್ನು ಬುಡಕಟ್ಟು ಜನರಿಗೆ ಹಂತಹಂತವಾಗಿ ತಲುಪಿಸಲು ಕ್ರಮ ಕೈಗೊಂಡರು. ಆದಿವಾಸಿಗಳ ಬಗ್ಗೆ ಸರ್ಕಾರದ ಧೋರಣೆ ಬದಲಾಗಲು ಈ ವರದಿ ಪ್ರಮುಖ ಪಾತ್ರ ವಹಿಸಿತು.

ಎಲ್ವಿನ್‌ರು ಭಾರತದ ಬುಡಕಟ್ಟುಗಳು ಮಾತ್ರವಲ್ಲದೆ ದೂರದ ಸಿಲೋನ್ (ಈಗಿನ ಶ್ರೀಲಂಕಾಗೆ)ಗೆ ಭೇಟಿ ನೀಡಿ ಅಲ್ಲಿನ 'ವೆಡ್ಡಾ' ಆದಿವಾಸಿ ಸಮುದಾಯದ ಅಭಿವೃದ್ಧಿಗೆ ಪ್ರಾಮಾಣಿಕವಾಗಿ ಶ್ರಮಿಸಿದ್ದಾರೆ.

ಎಲ್ವಿನ್ ತನ್ನ ಜೀವನ ಸಂಜೆಯ ಬಹುಪಾಲು ಕಡೆಯ ದಿನಗಳನ್ನು ಶಿಲಾಂಗ್‌ನಲ್ಲಿ ಕಳೆದರು. ಕೊನೆಗೆ, ೧೯೬೪ರ ಫೆಬ್ರವರಿ, ೨೨ರಂದು ದೆಹಲಿಯಲ್ಲಿ ಹೃದಯಾಘಾತದಿಂದ ನಿಧನರಾದರು. ಬುಡಕಟ್ಟು ಜನರ ಉದ್ಧಾರಕ್ಕಾಗಿ ದುಡಿದ ಜೀವ, ಆದಿವಾಸಿಗಳು ವಾಸಿಸುವ ನಿರ್ಮಲ ಪರಿಸರದಲ್ಲಿ ಲೀನವಾಯಿತು.

**ಪ್ರಶಸ್ತಿ–ಪುರಸ್ಕಾರಗಳು :** ಭಾರತ ಸರ್ಕಾರ, ಬುಡಕಟ್ಟು ಸಮುದಾಯಗಳಿಗೆ ಇವರ ಅನುಪಮ ಸೇವೆಯನ್ನು ಪರಿಗಣಿಸಿ ೧೯೬೧ರಲ್ಲಿ ಭಾರತದ ಮೂರನೆಯ ಅತ್ಯುನ್ನತ ಗೌರವ 'ಪದ್ಮಭೂಷಣ' ನೀಡಿ ಪುರಸ್ಕರಿಸಿದೆ. ಇವರ ಆತ್ಮಚರಿತ್ರೆ 'ದಿ ಟ್ರೈಬಲ್ ವರ್ಲ್ಡ್ ಆಫ್ ವೆರ್ರಿಯರ್ ಎಲ್ವಿನ್' ಪುಸ್ತಕಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿ ಗೌರವವನ್ನು ನೀಡಿದೆ (೧೯೬೫).

**ಎಲ್ವಿನ್‌ರ 'ಪ್ರತ್ಯೇಕತೆಯ ಸಿದ್ಧಾಂತ' :** ಭಾರತದಲ್ಲಿ ಬುಡಕಟ್ಟು ಸಮುದಾಯಗಳಿಗೆ ಸಂಬಂಧಿಸಿದಂತೆ ಹಲವು ರೀತಿಯ ದೃಷ್ಟಿಕೋನಗಳಿವೆ. ಅದರಲ್ಲಿ ಒಂದು 'ಪ್ರತ್ಯೇಕತೆಯ ಸಿದ್ಧಾಂತ.' ಎಲ್ವಿನ್ ಕೂಡ ಇದರ ಪ್ರತಿಪಾದಕರಲ್ಲಿ ಒಬ್ಬರು. ಇತರರು ಬುಡಕಟ್ಟು ಸಮುದಾಯಗಳನ್ನು ಅಶಿಕ್ಷಿತರು, ಅನಾಗರಿಕರು ಎಂದು ತಿಳಿದು ಸಮಾಜದ ಮುಖ್ಯವಾಹಿನಿಯ ಸಂಪರ್ಕವಿಲ್ಲದೆ ಅವರ ಅಭಿವೃದ್ಧಿ ಸಾಧ್ಯವೇ ಇಲ್ಲವೆಂದು 'ಹೇರುವಿಕೆಯನ್ನು' ಪ್ರತಿಪಾದಿಸಿದರೆ, ಎಲ್ವಿನ್ ತನ್ನ 'ಪ್ರತ್ಯೇಕತೆಯ ಸಿದ್ಧಾಂತ'ದಲ್ಲಿ ಆದಿವಾಸಿಗಳು ತಮ್ಮ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳುವ ಶಕ್ತಿ ಉಳ್ಳವರಾಗಿದ್ದು, ಇತರರ ಅನಗತ್ಯ ಪ್ರವೇಶದಿಂದ ಅವರ ಅನನ್ಯತೆಗೆ ಧಕ್ಕೆ ಬರುತ್ತದೆಂದೂ, ಆದಿವಾಸಿಗಳನ್ನು ಪ್ರತ್ಯೇಕವಾಗಿ ಇರಿಸಬೇಕೆಂದು, 'ಅವರನ್ನು ಅವರಂತೆ' ಇರಲು ಬಿಡಬೇಕೆಂದು ಪ್ರತಿಪಾದಿಸುತ್ತಾರೆ. 'ಎಲ್ಲವೂ ನಮಗೆ ತಿಳಿದಿದೆ', 'ಎಲ್ಲವೂ ನಮ್ಮಿಂದಲೇ' ಎಂಬ ಅಹಂಕಾರ ಹೊಂದಿರುವ ನಾಗರಿಕ ಜಗತ್ತಿಗೆ ಇದು ಸರಿ ಕಾಣುತ್ತಿಲ್ಲ. ಆದರೆ, ಆದಿವಾಸಿ ಸಮುದಾಯಗಳ ಜೊತೆಯೇ ತನ್ನ ಜೀವನದ ಬಹುಭಾಗವನ್ನು ಕಳೆದಿರುವ, ಹಲವು ವೈಜ್ಞಾನಿಕ ಸಂಶೋಧನೆಗಳನ್ನು ಕೈಗೊಂಡಿರುವ ಎಲ್ವಿನ್‌ರಿಗೆ ಆದಿವಾಸಿಗಳ ಬೇಕು–ಬೇಡಗಳ ನಿಜವಾದ ಅರಿವಿತ್ತು. ನಾಗರಿಕತೆಯ ಹುಚ್ಚಾಟಗಳು ತಿಳಿದಿತ್ತು. ಆದ್ದರಿಂದಲೇ ಅವರು ಆದಿವಾಸಿಗಳ ಪ್ರತ್ಯೇಕತೆಯನ್ನು ಪ್ರತಿಪಾದಿಸಿದರು. ಕಳೆದ ವರ್ಷ ಕನಕಪುರದ ಹತ್ತಿರ ಸೋಲಿಗ ಬುಡಕಟ್ಟು ಸಮುದಾಯವು ವಾಸಿಸುತ್ತಿರುವ 'ಸೋಲಿಗೇರಿ' ಗ್ರಾಮದ ಪಕ್ಕ ಬೆಂಗಳೂರಿನ ಯಾವನೋ ಡಾಬ ಒಂದನ್ನು ತೆರೆದು ಅವರಿಗೆ ಕಂಟಕವಾಗಿರುವುದನ್ನು ಕಂಡಾಗ ಎಲ್ವಿನ್ ಅವರ ವಾದ ಸರಿ ಎನಿಸಿತು.

ಎಲ್ವಿನ್ ಭಾರತದ ಶ್ರೇಷ್ಠ ಮಾನವಶಾಸ್ತ್ರಜ್ಞ. ಬುಡಕಟ್ಟು ಸಮುದಾಯಗಳಿಗೆ ಸಂಬಂಧಪಟ್ಟಂತೆ ಅವರ ಬದ್ಧತೆ ಪ್ರಶ್ನಾತೀತ. ಅಂದಿನ ಸ್ವತಂತ್ರ ಭಾರತದ ಪ್ರಧಾನಿ ಜವಾಹರಲಾಲ್ ನೆಹರು ಆದಿವಾಸಿಗಳ ಶ್ರೇಯೋಭಿವೃದ್ಧಿಗೆ ಸಂಬಂಧಿಸಿದಂತೆ ರೂಪಿಸಿದ 'ಪಂಚಶೀಲ ತತ್ವ'ಗಳ ರಚನೆಗೆ ಕಾರಣಕರ್ತರು ಎಲ್ವಿನ್. ಭಾರತ ಸರ್ಕಾರವು ಬುಡಕಟ್ಟು ಸಮುದಾಯಗಳ ಏಳ್ಗೆಗೆ ರೂಪಿಸಿದ ಬುಡಕಟ್ಟು ನೀತಿಗಳು ಈ ನೆಹರು ತತ್ವಗಳ ಮೇಲೆಯೇ ನಿಂತಿವೆಯೆಂಬುದು ಗಮನಾರ್ಹ. ಆದಿವಾಸಿಗಳ ವಿಶಿಷ್ಟತೆ, ಅನನ್ಯತೆಯನ್ನು ಉಳಿಸಿಕೊಂಡೇ ಅವರ ಅಭಿವೃದ್ಧಿಯಾಗಬೇಕೆಂಬ ಎಲ್ವಿನ್ ಧೋರಣೆ ಬುಡಕಟ್ಟು ಸಮುದಾಯಗಳ ಅಭಿವೃದ್ಧಿಗೆ 'ನೀಲಿನಕ್ಷೆ' ಯಾಗಿದೆ. ಭಾರತದ ಹಲವು ಕಾಡುಪ್ರದೇಶಗಳಲ್ಲಿ ಶತಶತಮಾನಗಳಿಂದ ಬದುಕನ್ನು ಕಟ್ಟಿಕೊಂಡು, ಹೊರಗಿನವರ ಗಾಳಿಯನ್ನೂ ಸಹಿಸದ, ಹೊರಜಗತ್ತಿನೊಂದಿಗೆ ಸಂಪೂರ್ಣವಾಗಿ ದೂರವೇ ಉಳಿದಿರುವ ಬುಡಕಟ್ಟು ಜನರ ಬಗ್ಗೆ, ಅವರೊಂದಿಗೇ ಇದ್ದು, ನಾಡಿಮಿಡಿತವನ್ನು ಅರಿತವರು ಬೆರಳೆಣಿಕೆಯಷ್ಟು ಮಾತ್ರ. ಅದರಲ್ಲಿ ಎಲ್ವಿನ್‌ರವರು ಪ್ರಮುಖರು. ಇವರ ಅಧ್ಯಯನ, ಬರವಣಿಗೆಗಳು ಅತ್ಯಮೂಲ್ಯವಾಗಿವೆ. ಅವರು ಕೈಗೊಂಡ ಅಧ್ಯಯನಗಳ ಅರಿವಿಲ್ಲದೆ ಬುಡಕಟ್ಟು ಸಮುದಾಯಗಳ ಅಧ್ಯಯನ, ಅಭಿವೃದ್ಧಿ ಅಪೂರ್ಣವೇ ಸರಿ.

ಹಲವು ವಿವಾದಗಳ ಹೊರತಾಗಿಯೂ, ನೆಹರೂರವರೇ ಒಮ್ಮೆ ಹೇಳಿದಂತೆ, "ಎಲ್ವಿನ್ ಭಾರತಕ್ಕೆ ಬಾರದಿದ್ದರೆ ಆದಿವಾಸಿಗಳ ಪರಿಸ್ಥಿತಿ ಮತ್ತಷ್ಟು ಅಧೋಗತಿಗಿಳಿಯುತ್ತಿತ್ತು" ಎಂಬ ಮಾತು ಸುಳ್ಳಲ್ಲ. ಆದರೆ ಇದನ್ನು ನಯವಾಗಿ ನಿರಾಕರಿಸುವ ಎಲ್ವಿನ್, "ನಾನು ಭಾರತಕ್ಕೆ ಕೊಟ್ಟದ್ದೇನೂ ಇಲ್ಲ. ಆದರೆ ಭಾರತ ನನಗೆ ಎಲ್ಲವನ್ನೂ ಕೊಟ್ಟಿದೆ. ಅದಕ್ಕೆ ಬೆಲೆ ಕಟ್ಟಲಾಗುವುದಿಲ್ಲ. ಅದು ಮೌಲ್ಯಕ್ಕಿಂತ ಮಿಗಿಲಾದುದು" ಎಂದಿದ್ದಾರೆ. ಇಂದೂ ಕೂಡ 'ಕರಂಜಿಯಾ' ಬುಡಕಟ್ಟು ಜನರು 'ಬಡಾ ಭಯ್ಯ' (ಎಲ್ವಿನ್‌ರಿಗೆ ಜನರಿಟ್ಟ ಹೆಸರು)ರ ಕೊಡುಗೆಗಳನ್ನು ವಿನಮ್ರವಾಗಿ ನೆನಪಿಸಿಕೊಳ್ಳುತ್ತಾರೆ.

**ಆನಂದ ಎನ್. ಎಲ್.**
ಸಂಶೋಧನಾ ವಿದ್ಯಾರ್ಥಿ, ಗ್ರಾಮೀಣ ಅಭಿವೃದ್ಧಿ ಮತ್ತು ಸಮಾಜ ಕಾರ್ಯ ವಿಭಾಗ, ಶ್ರೀ ಕೃಷ್ಣದೇವರಾಯ ವಿಶ್ವವಿದ್ಯಾಲಯ, ಅನಂತಪುರ, ಆಂಧ್ರಪ್ರದೇಶ

# ಭಾರತದಲ್ಲಿ ದೇಶದ್ರೋಹ ಕಾನೂನಿನ ದುರ್ಬಳಕೆ

**ಡಾ|| ಸತೀಶ್ ಕುಮಾರ್ ಅಂಡಿಂಜೆ**

"ಸರಕಾರವನ್ನು ಟೀಕಿಸಿದ್ದಾರೆ ಎಂಬ ಒಂದೇ ಕಾರಣಕ್ಕೆ ಜನರ ವಿರುದ್ಧ ದೇಶದ್ರೋಹ ಅಥವಾ ಮಾನನಷ್ಟ ಪ್ರಕರಣ ದಾಖಲಿಸುವುದಕ್ಕೆ ಅವಕಾಶವಿಲ್ಲ. ದೇಶದ್ರೋಹ ಕಾನೂನಿನಡಿ ಪ್ರಕರಣ ದಾಖಲಿಸಬೇಕಿದ್ದರೆ ಕೆಲವು ಮಾರ್ಗದರ್ಶಿ ಸೂತ್ರಗಳಿವೆ ಎಂಬುದನ್ನು ನಾವು ಸ್ಪಷ್ಟಪಡಿಸಿದ್ದೇವೆ. ಅದನ್ನು ಸುಪ್ರೀಂ ಕೋರ್ಟ್ ಹಿಂದಿನ ತೀರ್ಪುಗಳಲ್ಲಿ ವಿವರಿಸಿದೆ" ಎಂದಿರುವ ನ್ಯಾಯಮೂರ್ತಿಗಳಾದ ದೀಪಕ್ ಮಿಶ್ರಾ ಮತ್ತು ಯು. ಯು. ಲಲಿತ್ ಅವರನ್ನೊಳಗೊಂಡ ಸುಪ್ರೀಂ ಕೋರ್ಟಿನ ಪೀಠವು ದೇಶದ್ರೋಹ ಕಾನೂನನ್ನು ಮತ್ತೆ ವ್ಯಾಖ್ಯಾನಿಸಬೇಕಾದ ಅಗತ್ಯವಿಲ್ಲ, ಏಕೆಂದರೆ ೧೯೬೨ರಲ್ಲಿ ಕೇದಾರನಾಥ್ ಸಿಂಗ್ ಮತ್ತು ಬಿಹಾರ ಸರಕಾರದ ಪ್ರಕರಣದಲ್ಲಿ ಐವರು ನ್ಯಾಯಮೂರ್ತಿಗಳ ಸಂವಿಧಾನ ಪೀಠ ದೇಶದ್ರೋಹ ಕಾನೂನನ್ನು ಸಮಗ್ರವಾಗಿ ವ್ಯಾಖ್ಯಾನಿಸಿದೆ ಎಂದು ಇತ್ತೀಚೆಗೆ ಅಭಿಪ್ರಾಯಪಟ್ಟಿದೆ. ಇದು ದೇಶದ್ರೋಹ ಕಾನೂನಿನ ಪ್ರಸ್ತುತತೆ ಕುರಿತ ಚರ್ಚೆಗೆ ದಾರಿ ಮಾಡಿಕೊಟ್ಟಿದೆ.

ಇತ್ತೀಚಿನ ವರ್ಷಗಳಲ್ಲಿ ಮಾನವ ಹಕ್ಕುಗಳ ಹೋರಾಟಗಾರರು, ಪತ್ರಕರ್ತರು ಮತ್ತು ಬುದ್ಧಿಜೀವಿಗಳ ವಿರುದ್ಧ ದೇಶದ್ರೋಹ ಕಾನೂನಿನ ದುರ್ಬಳಕೆ ಮಾಡುವುದನ್ನು ನೋಡಿದಾಗ ಬ್ರಿಟಿಷರು ಜಾರಿಗೆ ತಂದ ಈ ಕಾನೂನಿನ ಪ್ರಜಾಪ್ರಭುತ್ವ ವಿರೋಧಿ ಸ್ವರೂಪದ ಬಗ್ಗೆ ಪ್ರಶ್ನೆಗಳು ಉದ್ಭವಿಸುತ್ತವೆ. ಈ ಕಾನೂನನ್ನು ಕೇಂದ್ರ ಹಾಗೂ ರಾಜ್ಯ ಸರಕಾರಗಳು ವಾಕ್ ಸ್ವಾತಂತ್ರ್ಯವನ್ನು ಹತ್ತಿಕ್ಕಲು ಬಳಸುತ್ತಿವೆ. ಅದಕ್ಕೆ ಕಾರಣ ಈ ಕಾನೂನಿನಲ್ಲಿ ಬರುವ 'ಅಸೂಯೆ' ಎಂಬ ಪದ ಮತ್ತು ಈ ಕಾನೂನಿನಡಿ ನೀಡುವ ಶಿಕ್ಷೆಯ ಕಠಿಣತೆ. ಬ್ರಿಟಿಷ್ ಆಡಳಿತದ ಅವಧಿಯಲ್ಲಿ ಬ್ರಿಟಿಷರ ವಿರುದ್ಧದ ಭಾರತೀಯರ ಧ್ವನಿ ಅಡಗಿಸಲು ಈ ಕಾನೂನಿನ ಬಳಕೆಯಾಗುತ್ತಿತ್ತು. ಆದರೆ ವಿಪರ್ಯಾಸವೆಂದರೆ ಈಗ ಬ್ರಿಟಿಷರ ಆಡಳಿತ ಕೊನೆಗೊಂಡು ಭಾರತ ಸ್ವತಂತ್ರವಾಗಿ ಏಳು ದಶಕಗಳು ತುಂಬುತ್ತಿದ್ದರೂ ಈ ಕಾನೂನನ್ನು ದೇಶದಾದ್ಯಂತ ಮಾಧ್ಯಮ ಪ್ರತಿನಿಧಿಗಳು, ಮಾನವ ಹಕ್ಕುಗಳ ಹೋರಾಟಗಾರರು, ರಾಜಕೀಯ ವಿರೋಧಿಗಳು ಮತ್ತು ಸಾರ್ವಜನಿಕರ ಧ್ವನಿ ಅಡಗಿಸಲು ನಿರಂತರವಾಗಿ ಬಳಸಿಕೊಳ್ಳಲಾಗುತ್ತಿದೆ.

ಭಾರತೀಯ ದಂಡ ಸಂಹಿತೆಯ ಸೆಕ್ಷನ್ ೧೨೪ಎಯಡಿ ಅಸೀಮ್ ತ್ರಿವೇದಿ ಎಂಬ ವ್ಯಂಗ್ಯಚಿತ್ರಕಾರನ ಬಂಧನ ಮತ್ತು ಜವಾಹರಲಾಲ್ ನೆಹರೂ ವಿಶ್ವವಿದ್ಯಾಲಯದ ವಿದ್ಯಾರ್ಥಿ ಸಂಘದ ನಾಯಕ ಕನ್ಹಯ್ಯಾ ಕುಮಾರ್‌ನ ಬಂಧನ ದೇಶದ್ರೋಹ ಕಾನೂನು ಕುರಿತ ಚರ್ಚೆಗೆ ಹೊಸ ಆಯಾಮ ನೀಡಿದೆ. ಈ ಕಾನೂನನ್ನು ದೇಶದಲ್ಲಿ ಯಾವುದೇ ರೀತಿಯ ರಾಜಕೀಯ ವಿರೋಧಿ ಧ್ವನಿ ಮತ್ತು ಆಡಳಿತ ಪಕ್ಷದ ಸಿದ್ಧಾಂತಕ್ಕೆ ವಿರುದ್ಧವಾದ ಯಾವುದಾದರೂ ಪರ್ಯಾಯ ರಾಜಕೀಯ ಸಿದ್ಧಾಂತದ ಪ್ರತಿಪಾದನೆಯನ್ನು ತಡೆಯಲು ಬಳಸಲಾಗುತ್ತಿದೆ. ಸರಕಾರದ ಕಾನೂನುಬದ್ಧ ಟೀಕೆಯನ್ನು ಹತ್ತಿಕ್ಕಲು ಕೂಡ ಬಳಸಲಾಗಿದೆ. ಪತ್ರಕರ್ತರು, ಮಾನವ ಹಕ್ಕುಗಳ ಹೋರಾಟಗಾರರು, ರಾಜಕೀಯ ವಿರೋಧಿಗಳು, ಸಾರ್ವಜನಿಕ ಚಿಂತಕರೇ ಅಲ್ಲದೆ, ರೈತರು ಮತ್ತು ಬುಡಕಟ್ಟು ಜನರು ಕೂಡ ಈ ಕಾನೂನಿನ ಗುರಿಯಾಗಿದ್ದಾರೆ. ಈ ಕಾನೂನು ನಮ್ಮ ಸಂವಿಧಾನ ನೀಡಿದ ಮೂಲಭೂತ ಹಕ್ಕಾದ ಅಭಿವ್ಯಕ್ತಿ ಸ್ವಾತಂತ್ರ್ಯಕ್ಕೆ ವಿರುದ್ಧವಾದುದು. ಅಲ್ಲದೆ, ಪ್ರಜಾಪ್ರಭುತ್ವ ಪ್ರಕ್ರಿಯೆಗೆ ವಿರುದ್ಧವಾದುದು. ಯಾಕೆಂದರೆ, ಪ್ರಜಾಪ್ರಭುತ್ವ ನಿಂತಿರುವುದು ಸಾರ್ವಜನಿಕ ಅಭಿಪ್ರಾಯದ ಮೇಲೆ. ಅದಕ್ಕೆ ಇದು ಅವಕಾಶ ನೀಡುವುದಿಲ್ಲ. ಅಲ್ಲದೆ, ವಾಕ್ ಮತ್ತು ಅಭಿವ್ಯಕ್ತಿ ಸ್ವಾತಂತ್ರ್ಯ ನೀಡಿದ ಮಾನವ ಹಕ್ಕುಗಳ ವಿಶ್ವ ಘೋಷಣೆಗೂ ಇದು ವಿರುದ್ಧವಾಗಿದೆ. ಎಲ್ಲಾ ಪ್ರಮುಖ ಪ್ರಜಾಪ್ರಭುತ್ವ ರಾಷ್ಟ್ರಗಳು ಈ ಕಾನೂನಿಗೆ ತಿದ್ದುಪಡಿ ತಂದಿವೆ ಅಥವಾ ರದ್ದುಮಾಡಿವೆ. ಆದರೆ ಭಾರತದಲ್ಲಿ ಅದಿನ್ನೂ ಜೀವಂತವಾಗಿದೆ.

**ದೇಶದ್ರೋಹದ ಅರ್ಥ**

ಭಾರತೀಯ ದಂಡಸಂಹಿತೆಯ ಸೆಕ್ಷನ್ ೧೨೪ಎಯ ಪ್ರಕಾರ ಯಾರಾದರೂ ಮೌಖಿಕ ಅಥವಾ ಲಿಖಿತ ಪದಗಳ ಮೂಲಕ ಅಥವಾ ಸಂಕೇತಗಳ ಮೂಲಕ ಅಥವಾ ದೃಶ್ಯಗಳ ಮೂಲಕ ಅಥವಾ ಇನ್ನಾವುದೇ ವಿಧಾನದ ಮೂಲಕ ಭಾರತದಲ್ಲಿ ಕಾನೂನುಬದ್ಧವಾಗಿ ರಚನೆಯಾದ ಸರಕಾರದ ವಿರುದ್ಧ ದ್ವೇಷ ಅಥವಾ ನಿಂದನೆ ಮಾಡಿದರೆ ಅಥವಾ ನಿಂದನೆ ಮಾಡುವ ಪ್ರಯತ್ನ ಮಾಡಿದರೆ ಅಥವಾ ಅಸೂಯೆ ಮೂಡಿಸಿದರೆ ಅಥವಾ ಮೂಡಿಸುವ ಪ್ರಯತ್ನ ಮಾಡಿದರೆ ಅದು ಶಿಕ್ಷಾರ್ಹ ಅಪರಾಧವಾಗುತ್ತದೆ. ಅಂಥವರಿಗೆ ಜೀವಾವಧಿ ಶಿಕ್ಷೆಯ ಮತ್ತು ದಂಡ ಅಥವಾ ಮೂರು ವರ್ಷಗಳ ತನಕ ಜೈಲು ಶಿಕ್ಷೆ, ಜೊತೆಗೆ ದಂಡ ವಿಧಿಸಬಹುದು. 'ಅಸೂಯೆ' ಪದದ ಅರ್ಥ ಅವಿಧೇಯತೆ ಮತ್ತು ಎಲ್ಲಾ ರೀತಿಯ ವೈರತ್ವದ ಭಾವನೆಗಳು. ದ್ವೇಷ ಅಥವಾ ನಿಂದನೆ ಮಾಡದೆ ಅಥವಾ ಆ ಪ್ರಯತ್ನ ಮಾಡದೆ ಅಥವಾ ಅಸೂಯೆ ಮೂಡಿಸದೆ ಅಥವಾ ಮೂಡಿಸುವ ಪ್ರಯತ್ನ ಮಾಡದೆ ಕಾನೂನುಬದ್ಧವಾಗಿ ಪರ್ಯಾಯ ಸರಕಾರ ತರುವ ಉದ್ದೇಶದಿಂದ ಸರಕಾರಿ ಅಥವಾ ಆಡಳಿತಾತ್ಮಕ ಕ್ರಮಗಳನ್ನು ಟೀಕಿಸಿದರೆ ಅದು ದೇಶದ್ರೋಹವಾಗುವುದಿಲ್ಲ.

ಭಾರತದಲ್ಲಿ ಕಾನೂನುಬದ್ಧವಾಗಿ ಸ್ಥಾಪಿತವಾದ ಸರಕಾರವನ್ನು ಕಿತ್ತೊಗೆಯುವ ಉದ್ದೇಶದಿಂದ ಹಿಂಸೆಯನ್ನು ಪ್ರಚೋದಿಸುವ ಅಥವಾ ಸಾರ್ವಜನಿಕ ಸ್ವಾಸ್ಥ್ಯವನ್ನು ಕೆಡಿಸುವ ಯಾವುದೇ ಪ್ರಕಟಣೆ ಶಿಕ್ಷಾರ್ಹ ಅಪರಾಧವಾಗುತ್ತದೆ. ಅಂತಹ ಪ್ರಕಟಣೆಯ ಲೇಖಕ ಮತ್ತು ಪ್ರಕಾಶಕ ಶಿಕ್ಷೆಗೆ ಅರ್ಹರಾಗುತ್ತಾರೆ. ಸಾರ್ವಜನಿಕ ಕ್ರಮಗಳು ಅಥವಾ ಸರಕಾರದ ನೀತಿಯ ಟೀಕೆ ಮತ್ತು ಪೊಲೀಸ್, ಆಡಳಿತಾತ್ಮಕ ಅಥವಾ ನ್ಯಾಯಾಂಗೀಯ ಅಧಿಕಾರಿಗಳ ವಿರುದ್ಧ ಭ್ರಷ್ಟಾಚಾರದ ಆರೋಪ ಹೊರಿಸುವುದು ಅಪರಾಧವಾಗುವುದಿಲ್ಲ. ಜನಪ್ರತಿನಿಧಿಗಳು ಅಥವಾ ಅಧಿಕಾರಿ ವರ್ಗದವರ ಬಗೆಗಿನ ವೈಯಕ್ತಿಕ ಟೀಕೆ ಅಪರಾಧವಾಗುವುದಿಲ್ಲ. ಸಾರ್ವಜನಿಕ ಸ್ವಾಸ್ಥ್ಯವನ್ನು ಕೆಡಿಸುವ ಅಥವಾ ಹಿಂಸೆಯನ್ನು ಪ್ರಚೋದಿಸುವ ದೇಶದ್ರೋಹ ಪ್ರಕರಣಗಳು ಮಾತ್ರ ಶಿಕ್ಷೆಗೆ ಅರ್ಹವಾಗುತ್ತವೆ ಎಂದು ೧೯೬೨ರ ಸುಪ್ರೀಂ ಕೋರ್ಟ್ ತೀರ್ಪು ತಿಳಿಸುತ್ತದೆ. ಆದರೆ ಇಂತಹ ಪ್ರಕರಣಗಳಲ್ಲಿ ಆರೋಪಿಗಳನ್ನು ಬಂಧಿಸುವಾಗ ಮತ್ತು ಆರೋಪಗಳನ್ನು ಹೊರಿಸುವಾಗ ಪೊಲೀಸರು ಮತ್ತು ರಾಜಕೀಯ ನೇತಾರರು ಈ ನಿರ್ಬಂಧವನ್ನು ನೆನಪು ಮಾಡಿಕೊಳ್ಳುವುದು ತುಂಬ ವಿರಳ. ಈ ಕಾನೂನಿನ ಪ್ರಕಾರ ಯಾವುದೇ ಸಾರ್ವಜನಿಕ ಸಭೆಯನ್ನು ಆಯೋಜಿಸುವಾಗ ಜಿಲ್ಲಾಧಿಕಾರಿ, ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿ ಅಥವಾ ಪೊಲೀಸ್

ಆಯುಕ್ತರ ಅನುಮತಿ ಪಡೆಯಬೇಕು. ಜಿಲ್ಲಾಧಿಕಾರಿ ಅಥವಾ ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿ ಸಭೆಯನ್ನು ರದ್ದುಗೊಳಿಸಬಹುದು. ಈ ಕಾನೂನಿನ ಉಲ್ಲಂಘನೆಗೆ ಆರು ತಿಂಗಳ ಕಾಲ ಜೈಲು ಶಿಕ್ಷೆಯೇ ಅಲ್ಲದೆ ದಂಡವನ್ನೂ ವಿಧಿಸಬಹುದು. ಪ್ರಚೋದನಕಾರಿ ಭಾಷಣಕ್ಕೂ ಇದೇ ಶಿಕ್ಷೆ ನೀಡಲಾಗುತ್ತದೆ.



**ದೇಶದ್ರೋಹ ಕಾನೂನಿನ ಇತಿಹಾಸ**

೧೮೫೭ರ ಸಿಪಾಯಿ ದಂಗೆಯ ನಂತರ ಬ್ರಿಟಿಷ್ ಸರಕಾರದ ವಿರುದ್ಧ ದ್ವೇಷದ ಮನೋಭಾವ ಬಿತ್ತುವ ಯಾವುದೇ ವ್ಯಕ್ತಿಯನ್ನು ಬಂಧಿಸುವ ಉದ್ದೇಶದಿಂದ ಬ್ರಿಟಿಷರು ಜಾರಿಗೆ ತಂದ ಕಠೋರ ಕಾನೂನು ಇದಾಗಿದೆ. ಇದು ಮೂಲತಃ ೧೮೩೭-೩೯ರ ಮೆಕಾಲೆ ರಚಿತ ದಂಡಸಂಹಿತೆ ಕರಡಿನ ಸೆಕ್ಷನ್ ೧೧೩ ಆಗಿದೆ. ಅದು ೧೮೬೦ರಲ್ಲಿ ಕಾಯಿದೆಯಾಗಿ ಜಾರಿಗೆ ಬಂದಾಗ ಆ ಸೆಕ್ಷನ್‌ಅನ್ನು ತೆಗೆದುಹಾಕಲಾಯಿತು. ಆದರೆ ಬ್ರಿಟಿಷ್ ಸರಕಾರ ೧೮೭೦ರಲ್ಲಿ ದೇಶದ್ರೋಹ ಕಾನೂನಿನ ಅಗತ್ಯವನ್ನು ಮನಗಂಡು ಸೆಕ್ಷನ್ ೧೨೪ಎಯನ್ನು ಪುನಃ ಜಾರಿಗೆ ತಂದಿತು. ಭಾರತೀಯರ ಧ್ವನಿ ಅಡಗಿಸಲು ಬ್ರಿಟಿಷರು ಜಾರಿಗೆ ತಂದ ಅನೇಕ ಕಠೋರ ಕಾನೂನುಗಳಲ್ಲಿ ಇದೂ ಒಂದು.

ಬಾಲ ಗಂಗಾಧರ ತಿಲಕ್ ವಿರುದ್ಧ ದೇಶದ್ರೋಹ ಆರೋಪ ಹೊರಿಸಿದಾಗ ನ್ಯಾಯಮೂರ್ತಿ ಜೇಮ್ಸ್ ಸ್ಟ್ರೆಚೆ ಈ ಕಾನೂನಿನ ವ್ಯಾಖ್ಯಾನದ ವ್ಯಾಪ್ತಿಯನ್ನು ವಿಸ್ತರಿಸುತ್ತಾರೆ. ಅದು ಈ ಕಾನೂನಿನ ಸಮಕಾಲೀನ ಅರ್ಥಕ್ಕೆ ಅಡಿಪಾಯವಾಯಿತು. ೧೮೯೮ರಲ್ಲಿ ಸ್ಟ್ರೆಚೆ ವ್ಯಾಖ್ಯಾನವನ್ನು ಬಿಂಬಿಸಲು ಸೆಕ್ಷನ್ ೧೨೪ಎಗೆ ತಿದ್ದುಪಡಿ ತರಲಾಯಿತು. ಬ್ರಿಟಿಷರು 'ಅಸೂಯೆ' ಪದದ ಜೊತೆಗೆ 'ದ್ವೇಷ' ಮತ್ತು 'ನಿಂದನೆ' ಪದಗಳನ್ನು ಸೇರಿಸಿದರು. 'ಅಸೂಯೆ' ಎಂಬ ಪದ ಅವಿಧೇಯತೆ ಮತ್ತು ಎಲ್ಲಾ ರೀತಿಯ ವೈರತ್ವ ಭಾವನೆಗಳನ್ನು ಹೊಂದಿದೆ ಎಂದು ಕೂಡ ಸೇರಿಸಲಾಯಿತು. ಈ ತಿದ್ದುಪಡಿಗಳು ಭಾರತೀಯ ದಂಡಸಂಹಿತೆಯ ಸೆಕ್ಷನ್ ೧೫೩ಎ ಮತ್ತು ೫೦೫ಅನ್ನು ಪರಿಚಯಿಸಿದವು. ಬ್ರಿಟಿಷ್ ಸರಕಾರ ಮುಖ್ಯವಾಗಿ ಬಾಂಬೆ ಸರಕಾರ ದೇಶೀಯ ಪತ್ರಿಕೆಗಳನ್ನು ಶಿಕ್ಷಿಸಲು ಈ ಬದಲಾವಣೆಗಳನ್ನು ಅನುಸರಿಸಿತು. ಬಂಗಾಳದ ವಿಭಜನೆಯ ನಂತರ ಬ್ರಿಟಿಷ್ ಸರಕಾರ ದೇಶದ್ರೋಹದ ವಿಷಯಗಳನ್ನು ಪ್ರಕಟಿಸುವ ಮುದ್ರಣ ಸಂಸ್ಥೆಗಳನ್ನು ಮುಟ್ಟುಗೋಲು ಹಾಕಿಕೊಳ್ಳಲು ಜಿಲ್ಲಾ ಮ್ಯಾಜಿಸ್ಟ್ರೇಟ್‌ಗೆ ಅಧಿಕಾರ ನೀಡುವ ಪತ್ರಿಕೆಗಳ (ಅಪರಾಧ ಪ್ರಚೋದನೆ) ಕಾಯಿದೆಯನ್ನು ೧೯೦೮ರಲ್ಲಿ ಜಾರಿಗೆ ತಂದಿತು. ಅಲ್ಲದೆ, ೨೦ಕ್ಕಿಂತ ಹೆಚ್ಚು ಜನರು ಒಂದೆಡೆ ಸೇರುವುದನ್ನು ತಡೆಯಲು ಬ್ರಿಟಿಷ್ ಸರಕಾರ ದೇಶದ್ರೋಹ ಸಭೆಗಳ ಕಾಯಿದೆಯನ್ನೂ ಜಾರಿಗೆ ತಂದಿತು.

ಭಾರತದ ಸಂವಿಧಾನ ರಚನೆಕಾರರು ವಾಕ್ ಸ್ವಾತಂತ್ರ್ಯವನ್ನು ನಿರ್ಬಂಧಿಸಲು ರಚಿಸಬಹುದಾದ ಕಾನೂನುಗಳಿಗೆ ಆಧಾರವಾಗಿ ದೇಶದ್ರೋಹವನ್ನು ಕರಡು ಸಂವಿಧಾನದಲ್ಲಿ ಸೇರಿಸಿದ್ದರು. ಆದರೆ ಅಂತಿಮ ಸಂವಿಧಾನದಲ್ಲಿ ವಾಕ್ ಮತ್ತು ಅಭಿವ್ಯಕ್ತಿ ಸ್ವಾತಂತ್ರ್ಯದ ಹಕ್ಕಿನ ನಿರ್ಬಂಧಗಳಲ್ಲಿ 'ದೇಶದ್ರೋಹ' ಎಂಬ ಪದವನ್ನು ತೆಗೆದುಹಾಕಲಾಗಿತ್ತು. ಇದು ಸ್ವಾತಂತ್ರ್ಯ ಹೋರಾಟಗಾರ ಮತ್ತು ವಕೀಲ ಕೆ. ಎಂ. ಮುನ್ಶಿ ಅವರ ಪ್ರಯತ್ನದ ಫಲ. ನಮಗೆ ಪ್ರಜಾಪ್ರಭುತ್ವ ಸರಕಾರವಿದ್ದು, ಇಲ್ಲಿ ನಾವು ಸ್ವಾಗತಿಸಲೇಬೇಕಾದ ಸರಕಾರದ ವಿರುದ್ಧದ ಟೀಕೆ ಮತ್ತು ದೇಶದ ಭದ್ರತೆಗೆ ಧಕ್ಕೆ ತರುವ ಹಿಂಸೆ ಅಥವಾ ಸರಕಾರವನ್ನು ಕಿತ್ತೊಗೆಯುವ ಲೆಕ್ಕಾಚಾರದ ಹಿಂಸೆಯ ನಡುವೆ ಗೆರೆ ಎಳೆಯಬೇಕಾದ ಅಗತ್ಯವಿದೆ. ಅದಕ್ಕಾಗಿ ದೇಶದ್ರೋಹ ಪದವನ್ನು ತೆಗೆದು ಹಾಕಲಾಗಿದೆ ಎಂದು ಹೇಳಿದ್ದರು. ಸ್ವಾತಂತ್ರ್ಯ ಹೋರಾಟಗಾರ ಮತ್ತು ಶ್ರೇಷ್ಠ ಸಂಸದ ಸೇಠ್ ಗೋವಿಂದ ದಾಸ್ ಈ ಪದ ತೆಗೆದುಹಾಕಲು ಬೆಂಬಲಿಸಿದ ಮತ್ತೊಬ್ಬರು. ಅವರಿಗೆ ಸೆಕ್ಷನ್ ೧೨೪ಎಯಡಿ ಬಂಧಿಸಿ ಎರಡು ವರ್ಷಗಳ ಕಠಿಣ ಜೈಲು ಶಿಕ್ಷೆ ವಿಧಿಸಲಾಗಿತ್ತು.

ಭಾರತದ ಸಂವಿಧಾನ ರಚನೆಕಾರರಿಗೆ ದೇಶದ್ರೋಹ ಕಾನೂನಿನ ಕ್ರೂರ ಇತಿಹಾಸದ ಸ್ಪಷ್ಟ ಅರಿವಿತ್ತು. ಅದಕ್ಕಾಗಿ ಅವರು ವಾಕ್ ಮತ್ತು ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಈ ಕ್ರೂರ ಕಾನೂನುಗಳಡಿ ನಿರ್ಬಂಧಿಸಲು ಬಯಸಲಿಲ್ಲ. ಸಂವಿಧಾನದ ವಿಧಿ ೧೯ (೨)ರಿಂದ ದೇಶದ್ರೋಹ ಎಂಬ ಪದವನ್ನು ತೆಗೆಯುವ ಮೂಲಕ ಕಾನೂನುಬದ್ಧ ವಿರೋಧಾಭಿಪ್ರಾಯಕ್ಕೆ ಅವಕಾಶ ಕಲ್ಪಿಸಿದರು. ಆದರೆ ವಿಪರ್ಯಾಸದ ಸಂಗತಿ ಎಂದರೆ ಅವರು 'ದೇಶದ್ರೋಹ' ಎಂಬ ಪದವನ್ನು ತೆಗೆದು ಹಾಕಿದರೂ ದೇಶದ್ರೋಹ ಒಳಗೊಳ್ಳುವ ಮತ್ತು ಸಾರ್ವಜನಿಕ ಸ್ವಾಸ್ಥ್ಯಕ್ಕೆ ಸಂಬಂಧ ಕಲ್ಪಿಸಿ ದೇಶದ್ರೋಹ ಗಂಭೀರ ಅಪರಾಧವಾಗಿ ಪರಿಗಣಿಸುವ ತೀರಾ ಸಾಮಾನ್ಯ ಪದವನ್ನು ಬಳಸಿದರು.

ಜವಾಹರಲಾಲ್ ನೆಹರೂ ಅವರಿಗೂ ಈ ಕಾನೂನಿನ ಸಮಸ್ಯೆಗಳ ಅರಿವಿತ್ತು. ೧೯೫೧ರಲ್ಲಿ ವಾಕ್ ಮತ್ತು ಅಭಿವ್ಯಕ್ತಿ ಸ್ವಾತಂತ್ರ್ಯಕ್ಕೆ ಸಂಬಂಧಿಸಿದಂತೆ ಸಂಸತ್ತಿನಲ್ಲಿ ನಡೆದ ಚರ್ಚೆಯಲ್ಲಿ ಅವರು "ಭಾರತೀಯ ದಂಡಸಂಹಿತೆಯ ಸೆಕ್ಷನ್ ೧೨೪ಎ ತುಂಬ ಆಕ್ಷೇಪಾರ್ಹವಾದುದು, ನಾವು ಜಾರಿಗೆ ತರುವ ಯಾವುದೇ ಕಾನೂನಿನಲ್ಲಿ ಅದಕ್ಕೆ ಸ್ಥಾನವಿರಬಾರದು, ಆದಷ್ಟು ಬೇಗ ಅದನ್ನು ಕಿತ್ತೊಗೆದರೆ ಉತ್ತಮ" ಎಂದು ಅಭಿಪ್ರಾಯಪಟ್ಟಿದ್ದರು. ವಿಪರ್ಯಾಸವೆಂದರೆ ದೇಶದ್ರೋಹದ ವಿವರ ಸಂವಿಧಾನದಲ್ಲಿ ಉಳಿದು ಕೊಂಡಿರುವುದಲ್ಲದೆ ಆಗಾಗ ಮಾನವ ಹಕ್ಕುಗಳ ಹೋರಾಟಗಾರರು, ಪತ್ರಕರ್ತರು ಮತ್ತು ಬುದ್ಧಿಜೀವಿಗಳ ವಿರುದ್ಧ ಬಳಕೆಯಾಗುತ್ತಲೇ ಇದೆ. ಇಂಗ್ಲೆಂಡಿನಲ್ಲಿ ದೇಶದ್ರೋಹ ಕಾನೂನನ್ನು ೨೦೧೦ರಲ್ಲಿ ನಿಷೇಧ ಮಾಡಿದ್ದರೆ, ಭಾರತದಲ್ಲಿ ಅದೇ ವರ್ಷ ಲೇಖಕಿ ಅರುಂಧತಿ ರಾಯ್ ಮತ್ತು ಇತರರು ಕಾಶ್ಮೀರ ಪ್ರದೇಶಕ್ಕೆ ಸ್ವಾತಂತ್ರ್ಯ ನೀಡಬೇಕೆಂದು ಪ್ರತಿಪಾದಿಸಿ ದೇಶದ್ರೋಹದ ಆರೋಪಕ್ಕೆ ಒಳಗಾಗಿ ಈ ಕಾನೂನು ಮತ್ತೆ ಚರ್ಚೆಗೆ ಒಳಗಾಯಿತು.

**ಬ್ರಿಟಿಷ್ ಆಡಳಿತದಲ್ಲಿ ದೇಶದ್ರೋಹದ ಪ್ರಕರಣಗಳು**

ದೇಶದ್ರೋಹ ಕಾನೂನಿಗೆ ಸಂಬಂಧಿಸಿದ ಆರಂಭಿಕ ಪ್ರಕರಣಗಳಲ್ಲಿ ಅನೇಕ ರಾಷ್ಟ್ರೀಯವಾದಿ ಪತ್ರಿಕೆಗಳ ಸಂಪಾದಕರನ್ನು ಶಿಕ್ಷಿಸಿರುವುದನ್ನು ಕಾಣಬಹುದು. ಅವುಗಳಲ್ಲಿ ಮೊದಲನೆಯದು ೧೮೯೧ರಲ್ಲಿ ನಡೆದ ಜೋಗೇಂದ್ರ ಚಂದ್ರ ಬೋಸ್ ಅವರ ವಿಚಾರಣೆ. ಬಂಗೋಬಾಸಿ ಪತ್ರಿಕೆಯ ಸಂಪಾದಕರಾಗಿದ್ದ ಬೋಸ್ ಅವರು ಒಪ್ಪಿಗೆಯ ವಯಸ್ಸು ಮಸೂದೆಯು ಧರ್ಮ ಮತ್ತು ಅದರ ಜೊತೆಗಿನ ಭಾರತೀಯರ ಸಂಬಂಧದ ಮೇಲೆ ಪ್ರತಿಕೂಲ ಪರಿಣಾಮ ಬೀರುತ್ತದೆ ಎಂಬ ಕಾರಣಕ್ಕಾಗಿ ಅದನ್ನು ಟೀಕಿಸಿ ಲೇಖನ ಬರೆದಿದ್ದರು. ಅವರ ಲೇಖನವು ಬ್ರಿಟಿಷ್ ವಸಾಹತುಶಾಹಿಯ ಋಣಾತ್ಮಕ ಆರ್ಥಿಕ ಪರಿಣಾಮದ ಬಗೆಗೂ ಟೀಕೆ ಮಾಡಿತ್ತು. ಅದಕ್ಕಾಗಿ ಬೋಸ್ ಅವರನ್ನು ವಿಚಾರಣೆಗೆ ಒಳಪಡಿಸಿ, ಕಾನೂನುಬದ್ಧ ಟೀಕೆಯ ಮಿತಿಯನ್ನು ಮೀರಿದ್ದಾರೆ ಮತ್ತು ಧಾರ್ಮಿಕ ಭಾವನೆಗಳನ್ನು ಕೆರಳಿಸಿದ್ದಾರೆ ಎಂಬ ಆರೋಪ ಹೊರಿಸಲಾಯಿತು. ಆದರೆ ಅವರು ಕ್ಷಮೆ ಕೇಳಿದ ಕಾರಣ ಅವರ ವಿರುದ್ಧದ ವಿಚಾರಣೆಯನ್ನು ಕೈಬಿಡಲಾಯಿತು.

ತುಂಬ ಹೆಸರು ಮಾಡಿದ ದೇಶದ್ರೋಹ ಪ್ರಕರಣ ಬಾಲ ಗಂಗಾಧರ ತಿಲಕ್‌ಗೆ ಸಂಬಂಧಿಸಿದ್ದು. ಆಗ ತಿಲಕ್ ಅವರು ಕೇಳಿದ ಮೂಲಭೂತ ಪ್ರಶ್ನೆ ಎಂದರೆ ಅವರ ವಿರುದ್ಧದ ವಿಚಾರಣೆಗಳು ಬ್ರಿಟಿಷ್ ಭಾರತ ಸರಕಾರದ ವಿರುದ್ಧದ ಜನರ ದೇಶದ್ರೋಹವೋ (ರಾಜದ್ರೋಹ) ಅಥವಾ ಭಾರತೀಯರ ವಿರುದ್ಧದ ಸರಕಾರದ ದೇಶದ್ರೋಹವೋ (ದೇಶದ್ರೋಹ) ಎಂಬುದು. ದೇಶದ್ರೋಹದ ಆರೋಪಕ್ಕೊಳಗಾದ ತಿಲಕರನ್ನು ಅಂತರರಾಷ್ಟ್ರೀಯ ಗಣ್ಯವ್ಯಕ್ತಿ ಮ್ಯಾಕ್ಸ್ ವೆಬರ್ ಅವರ ಮಧ್ಯಪ್ರವೇಶದಿಂದಾಗಿ ೧೮೯೮ರಲ್ಲಿ ಬಿಡುಗಡೆ ಮಾಡಲಾಯಿತು. ಸರಕಾರದ ವಿರುದ್ಧ ಅಸೂಯೆ ಹುಟ್ಟಿಸುವ ಯಾವುದೇ ಕೆಲಸವನ್ನು ಅವರು ಮಾತಿನ ಮೂಲಕ ಅಥವಾ ಬರಹದ ಮೂಲಕ ಮಾಡುವುದಿಲ್ಲ ಎಂದು ಷರತ್ತು ವಿಧಿಸಲಾಗಿತ್ತು. ಇನ್ನೊಂದು ಪ್ರಕರಣದಲ್ಲಿ ತಿಲಕ್ ಅವರ 'ಕೇಸರಿ' ಪತ್ರಿಕೆ ಸರಕಾರಿ ದಬ್ಬಾಳಿಕೆಯ ಪರಿಣಾಮಗಳನ್ನು ಗುರಿಮಾಡಿ ಸಂಪಾದಕೀಯ ಪ್ರಕಟಿಸಿತ್ತು. ಅದಕ್ಕಾಗಿ ಮಹಮ್ಮದಲಿ ಜಿನ್ನಾ ಅವರ ಪ್ರತಿವಾದದ ಹೊರತಾಗಿಯೂ ತಿಲಕ್ ಅವರಿಗೆ ಗಡೀಪಾರಿನೊಂದಿಗೆ ಆರು ವರ್ಷಗಳ ಕಠಿಣ ಜೈಲುಶಿಕ್ಷೆ ವಿಧಿಸಲಾಯಿತು.

ತಿಲಕ್ ಅವರ ನಂತರ ಖ್ಯಾತಿ ಪಡೆದ ದೇಶದ್ರೋಹ ಪ್ರಕರಣ

ಮಹಾತ್ಮಾ ಗಾಂಧೀಜಿಗೆ ಸಂಬಂಧಿಸಿದ್ದು. ೧೯೨೨ರಲ್ಲಿ 'ಯಂಗ್ ಇಂಡಿಯಾ' ಪತ್ರಿಕೆಯಲ್ಲಿ ಪ್ರಕಟವಾದ ಮೂರು ಲೇಖನಗಳಿಗಾಗಿ ಪತ್ರಿಕೆಯ ಮಾಲಕರಾದ ಶಂಕರ್‌ಲಾಲ್ ಬ್ಯಾಂಕರ್ ಜೊತೆಗೆ ಮಹಾತ್ಮಾ ಗಾಂಧೀಜಿ ವಿರುದ್ಧವೂ ದೇಶದ್ರೋಹದ ಆರೋಪ ಹೊರಿಸಲಾಯಿತು. ದೇಶದ ಪ್ರಮುಖ ರಾಜಕೀಯ ವ್ಯಕ್ತಿಗಳು ಭಾಗವಹಿಸಿದ ವಿಚಾರಣೆಯನ್ನು ಇಡೀ ದೇಶವೇ ಗಮನಿಸಿತ್ತು. ವಿಚಾರಣೆಯ ನೇತೃತ್ವ ವಹಿಸಿದವರು ನ್ಯಾಯಾಧೀಶ ಸ್ಟ್ರಾಂಗ್‌ಮನ್. ತನ್ನ ಪ್ರಕರಣದ ಪರವಾಗಿ ತಾನೇ ವಾದ ಮಾಡಿದ ಗಾಂಧೀಜಿ ತನಗೆ ಬ್ರಿಟಿಷ್ ಸರಕಾರದ ಬಗೆಗೆ ಯಾವುದೇ ಮಮತೆ ಇಲ್ಲ; ಅಲ್ಲದೆ, ತನಗೆ ಯಾಕೆ ಮಮತೆ ಇಲ್ಲ ಎಂದು ನನ್ನ ಅನುಯಾಯಿ ಪ್ರಜೆಗಳಿಗೆ ತಿಳಿಸುವುದು ತನ್ನ ಕರ್ತವ್ಯ; ಮಮತೆಯನ್ನು ಉತ್ಪಾದಿಸಲು ಸಾಧ್ಯವಿಲ್ಲ ಅಥವಾ ಕಾನೂನಿನಿಂದ ನಿಯಂತ್ರಿಸಲು ಸಾಧ್ಯವಿಲ್ಲ ಎಂದು ನ್ಯಾಯಾಧೀಶರಿಗೆ ತಿಳಿಸಿದ ಅವರು ತನಗೆ ಸಾಧ್ಯವಾದಷ್ಟೂ ಗರಿಷ್ಠ ಶಿಕ್ಷೆ ನೀಡಿ ಎಂದು ಒತ್ತಾಯಿಸಿದರು.

ನ್ಯಾಯಾಧೀಶ ಸ್ಟ್ರಾಂಗ್‌ಮನ್ ಗೌರವಾನ್ವಿತ ಪ್ರತಿಕ್ರಿಯೆ ನೀಡಿ ತಾನು ಗಾಂಧೀಜಿಯ ವ್ಯಕ್ತಿತ್ವ ಮತ್ತು ಅಹಿಂಸೆ ಬಗೆಗಿನ ನಿಷ್ಠೆಯನ್ನು ಮೆಚ್ಚುತ್ತೇನೆ. ಆದರೆ ಕಾನೂನಿನಡಿ ಅವರನ್ನು ದೇಶದ್ರೋಹ ಅಪರಾಧಿಯನ್ನಾಗಿ ಮಾಡದಿರಲು ಅಸಮರ್ಥನಾಗಿದ್ದೇನೆ ಎಂದು ಹೇಳಿ ಆರು ವರ್ಷಗಳ ಜೈಲು ಶಿಕ್ಷೆ ವಿಧಿಸಿದರು. 'ಅಮೃತ ಬಜಾರ್' ಪತ್ರಿಕೆಯ ಏಪ್ರಿಲ್ ೧೦ ಮತ್ತು ೧೨, ೧೯೨೦ರ ಸಂಚಿಕೆಗಳಲ್ಲಿ ಪ್ರಕಟವಾದ 'ಟು ಹೂಮ್ ಡಸ್ ಇಂಡಿಯಾ ಬಿಲಾಂಗ್ ?' ಮತ್ತು 'ಅರೆಸ್ಟ್ ಆಫ್ ಮಿಸ್ಟರ್ ಗಾಂಧಿ ಮೋರ್ ಔಟ್‌ರೇಜ್ಡ್' ಎಂಬ ಲೇಖನಗಳಿಗಾಗಿ ದೇಶದ್ರೋಹದ ಆರೋಪ ಹೊರಿಸಿ ಪತ್ರಿಕೆಯ ಪ್ರತಿಗಳು ಮತ್ತು ಭದ್ರತಾ ಠೇವಣಿಯನ್ನು ಮುಟ್ಟುಗೋಲು ಹಾಕಿಕೊಳ್ಳಲಾಯಿತು. ಅಂದಿನ ಗವರ್ನರ್ ಈ ಲೇಖನಗಳು ಭಾರತದಲ್ಲಿ ಬ್ರಿಟಿಷರಿಂದ ಕಾನೂನುಬದ್ಧವಾಗಿ ಸ್ಥಾಪಿತವಾದ ಸರಕಾರದ ವಿರುದ್ಧ ದ್ವೇಷ ಮತ್ತು ನಿಂದನೆಗೆ ಕಾರಣವಾಗುತ್ತವೆ ಮತ್ತು ಸರಕಾರದ ವಿರುದ್ಧ ಅಸೂಯೆಯನ್ನು ಕೆರಳಿಸುತ್ತವೆ ಎಂದು ಅಭಿಪ್ರಾಯಪಟ್ಟಿದ್ದನು.

**ಸ್ವಾತಂತ್ರ್ಯಾನಂತರದ ದೇಶದ್ರೋಹ ಪ್ರಕರಣಗಳು**

ದೇಶದ್ರೋಹ ಕಾನೂನಿಗೆ ಮೊದಲ ಪ್ರಮುಖ ಸಾಂವಿಧಾನಿಕ ಸವಾಲು ಎದುರಾದುದು ೧೯೫೦ರ ದಶಕದಲ್ಲಿ. ತಾರಾ ಸಿಂಗ್ ಗೋಪಿ, ಸಬೀರ್ ರಾಜ ಮತ್ತು ರಾಮನಂದನ್ ಎಂಬ ತ್ರಿವಳಿ ಪ್ರಕರಣಗಳಲ್ಲಿ ನ್ಯಾಯಾಲಯ ದೇಶದ್ರೋಹ ಕಾನೂನು ವಾಕ್ ಮತ್ತು ಅಭಿವ್ಯಕ್ತಿ ಸ್ವಾತಂತ್ರ್ಯಕ್ಕೆ ವಿರುದ್ಧವಾದುದು ಎಂದು ಅಭಿಪ್ರಾಯಪಟ್ಟಿತು. ರಾಮನಂದನ್ ಅವರು ೧೯೫೪ರಲ್ಲಿ ನೀಡಿದ ಪ್ರಚೋದನಕಾರಿ ಭಾಷಣಕ್ಕಾಗಿ ಮೂರು ವರ್ಷಗಳ ಜೈಲು ಶಿಕ್ಷೆ ವಿಧಿಸಲಾಯಿತು. ಅವರು ಅಲಹಾಬಾದ್ ಉಚ್ಚ ನ್ಯಾಯಾಲಯದಲ್ಲಿ ಭಾರತೀಯ ದಂಡಸಂಹಿತೆಯ ಸೆಕ್ಷನ್ ೧೨೪ಎಯ ಸಾಂವಿಧಾನಿಕ ಸಿಂಧುತ್ವವನ್ನು ಪ್ರಶ್ನಿಸಿದರು. ನ್ಯಾಯಾಲಯ ಅವರಿಗೆ ನೀಡಿದ ಶಿಕ್ಷೆಯನ್ನು ರದ್ದುಪಡಿಸಿ, ಸೆಕ್ಷನ್ ೧೨೪ಎ ಸಂವಿಧಾನಬಾಹಿರ ಎಂದು ತೀರ್ಪು ನೀಡಿತು. ಆದರೆ ೧೯೬೨ರಲ್ಲಿ ಕೇದಾರನಾಥ ಸಿಂಗ್ ಮತ್ತು ಬಿಹಾರ ಸರಕಾರದ ಪ್ರಕರಣದಲ್ಲಿ ಸುಪ್ರೀಂ ಕೋರ್ಟ್ ಈ ನಿರ್ಧಾರವನ್ನು ರದ್ದುಮಾಡಿ ದೇಶದ್ರೋಹ ಕಾನೂನಿನ ಸಾಂವಿಧಾನಿಕತೆಯನ್ನು ಎತ್ತಿಹಿಡಿಯಿತು.

ಅದೇ ಸಮಯದಲ್ಲಿ ದೇಶದ್ರೋಹದ ಅರ್ಥವನ್ನು ಕಿರಿದುಗೊಳಿಸಿ, ಅದರ ಅನ್ವಯಿಕತೆಯನ್ನು ಮಿತಿಗೊಳಿಸಿತು. ಸಾರ್ವಜನಿಕ ಸ್ವಾಸ್ಥ್ಯವನ್ನು ಕೆಡಿಸುವ ಉದ್ದೇಶ ಅಥವಾ ನಿಲುವು ಅಥವಾ ಕಾನೂನು ಪಾಲನೆಗೆ ಭಂಗ ತರುವುದು ಅಥವಾ ಹಿಂಸೆಯನ್ನು ಪ್ರಚೋದಿಸುವ ಕೃತ್ಯಗಳು ಮಾತ್ರ ದೇಶದ್ರೋಹವಾಗುತ್ತವೆ ಎಂಬ ತೀರ್ಪು ನೀಡಿತು. ದೇಶದ್ರೋಹಕ್ಕೆ ವಿಶಾಲ ಅರ್ಥ ನೀಡಿದರೆ ಅದು ಸಾಂವಿಧಾನಿಕತೆಯನ್ನು ಉಳಿಸಿಕೊಳ್ಳಲು ಸಾಧ್ಯವಿಲ್ಲವೆಂದು ನ್ಯಾಯಾಧೀಶರು ಅಭಿಪ್ರಾಯಪಟ್ಟರು. ಕೇದಾರನಾಥ ಸಿಂಗ್ ಬಿಹಾರದ ಒಬ್ಬ ಕಮ್ಯುನಿಸ್ಟ್ ನಾಯಕ. ಆಗ ಬಿಹಾರದಲ್ಲಿ ಕಾಂಗ್ರೆಸ್ ಸರಕಾರದ ನೀತಿ ಬಡವರಿಗಿಂತ ಶ್ರೀಮಂತರಿಗೆ ಹೆಚ್ಚು ಅನುಕೂಲಕರವಾಗಿತ್ತು. ಅದಕ್ಕಾಗಿ ಅವರು ಸರಕಾರದ ವಿರುದ್ಧ ಪ್ರಚೋದನಕಾರಿ ಭಾಷಣ ಮಾಡಿ ಪೊಲೀಸರ ಮೇಲೆ ಆರೋಪ ಹೊರಿಸಿದರು ಮತ್ತು ಎಲ್ಲಾ ಪ್ರಮುಖ ಕಾಂಗ್ರೆಸ್ ನಾಯಕರನ್ನು ಟೀಕಿಸಿದರು. ಅವರು ರಾತ್ರಿ ಸುಮಾರು ಮೂರು ಗಂಟೆಗಳ ಕಾಲ ಭಾಷಣ ಮಾಡಿದರು. ಇದು ಜನರು ಹೊರಬಂದು ಸಿಕ್ಕಸಿಕ್ಕವರನ್ನೆಲ್ಲ ಕೊಲ್ಲುವಂತೆ ಪ್ರಚೋದಿಸಿತು. ಅದರಿಂದಾಗಿ ಅವರನ್ನು ತಕ್ಷಣ ಬಂಧಿಸಿ, ಹಿಂಸೆಯನ್ನು ಪ್ರಚೋದಿಸಿದ್ದಕ್ಕಾಗಿ ದೇಶದ್ರೋಹದ ಆರೋಪ ಹೊರಿಸಲಾಯಿತು.



ಬ್ರಹ್ಮ ಚೆಲನಿ ಅವರು ಅಸೋಸಿಯೇಟೆಡ್ ಪ್ರೆಸ್ ಸುದ್ದಿ ಸಂಸ್ಥೆಯಲ್ಲಿದ್ದಾಗ 'ಆಪರೇಷನ್ ಬ್ಲೂ ಸ್ಟಾರ್' ಕುರಿತು ಒಂದು ಲೇಖನ ಬರೆದರು. ಅದು ಭಾರತದಲ್ಲಿ ಪ್ರಕಟವಾಗಲಿಲ್ಲ. ಆದರೆ 'ಟೈಮ್ಸ್ ಆಫ್ ಲಂಡನ್' ಪತ್ರಿಕೆಯಲ್ಲಿ ಅಗ್ರಲೇಖನವಾಗಿ ಪ್ರಕಟವಾಯಿತು. 'ಸಂಡೇ ಅಬ್ಸರ್ವರ್' ಪತ್ರಿಕೆ ಜುಲೈ ೨೪, ೧೯೮೪ರ ಸಂಚಿಕೆಯಲ್ಲಿ ಈ ಲೇಖನವನ್ನು ಉಲ್ಲೇಖಿಸಿತು. ಅದು ಅಮೃತಸರದ ಪೊಲೀಸ್ ವರಿಷ್ಠಾಧಿಕಾರಿಯ ಕಣ್ಣಿಗೆ ಬಿತ್ತು. ಅವರು ದೇಶದ್ರೋಹದ ಆರೋಪ ಹೊರಿಸಿ ಚೆಲನಿ ಅವರನ್ನು ಬಂಧಿಸಿದರು. ಅವರನ್ನು ಬಿಡುಗಡೆ ಮಾಡದಂತೆ ಸರಕಾರ ಆದೇಶಿಸಿತು. ಪತ್ರಿಕೆಗಳ ಸುದೀರ್ಘ ಕಾಲದ ಬೇಡಿಕೆಯ ನಂತರ ರಾಜೀವ್ ಗಾಂಧಿ ಸರಕಾರದ ಅವಧಿಯಲ್ಲಿ ಅವರಿಗೆ ಜಾಮೀನು ನೀಡಲಾಯಿತು.

ಅರುಂಧತಿ ರಾಯ್, ವರವರ ರಾವ್ ಮತ್ತು ಎಸ್. ಎ. ಆರ್. ಗಿಲಾನಿ ಅವರು ದೆಹಲಿಯಲ್ಲಿ ನಡೆದ 'ಅಜಾದಿ ದಿ ಓನ್ಲಿ ವೇ' ಎಂಬ ವಿಚಾರಸಂಕಿರಣದಲ್ಲಿ ಕಾಶ್ಮೀರ ಸ್ವಾತಂತ್ರ್ಯದ ಪರವಾಗಿ ಮಾತನಾಡಿದ ಕಾರಣಕ್ಕೆ ದೇಶದ್ರೋಹದ ಆರೋಪ ಹೊರಿಸಲಾಗಿತ್ತು. ಭಾರತದ ವೈದ್ಯ ಮತ್ತು ಹೋರಾಟಗಾರ ಬಿನಾಯಕ್ ಸೇನ್ ವಿರುದ್ಧವೂ ದೇಶದ್ರೋಹ ಆರೋಪ ಹೊರಿಸಲಾಗಿತ್ತು. ಸರಕಾರದ ವಿರುದ್ಧದ ಹೋರಾಟದಲ್ಲಿ ಮಾವೋವಾದಿಗಳಿಗೆ ಸಹಾಯ ಮಾಡಿದ್ದಾರೆ ಎಂಬ ಕಾರಣಕ್ಕೆ ಡಿಸೆಂಬರ್ ೨೪, ೨೦೧೦ರಂದು ರಾಯಪುರದ ಜಿಲ್ಲಾ ನ್ಯಾಯಾಧೀಶ ಬಿ. ಪಿ. ವರ್ಮ ಬಿನಾಯಕ್ ಸೇನ್, ನಕ್ಸಲ್ ಪ್ರತಿಪಾದಕ ನಾರಾಯಣ್ ಸನ್ಯಾಲ್ ಮತ್ತು ಕೋಲ್ಕೊತ್ತಾದ ವ್ಯಾಪಾರಸ್ಥ ಪಿಯೂಶ್ ಗುಹಾ ಅವರ ವಿರುದ್ಧ ದೇಶದ್ರೋಹದ ಆಪಾದನೆ ಹೊರಿಸಿದ್ದರು. ಅವರಿಗೆ ಜೀವಾವಧಿ ಶಿಕ್ಷೆ ನೀಡಲಾಗಿತ್ತು. ಆದರೆ ಏಪ್ರಿಲ್ ೧೬, ೨೦೧೧ರಲ್ಲಿ ಸುಪ್ರೀಂ ಕೋರ್ಟ್ ಸೇನ್‌ಗೆ ಜಾಮೀನು ನೀಡಿತು.

ನ್ಯಾಯಯುತವಾಗಿ ಆಯ್ಕೆಯಾದ ಸರಕಾರದ ವಿರುದ್ಧ ಜನರನ್ನು ಎತ್ತಿಕಟ್ಟುತ್ತಿದ್ದಾರೆಂದು ಸೂರತ್‌ನ ಸಂಜೆ ಪತ್ರಿಕೆಯೊಂದರ ಸಂಪಾದಕ ಮನೋಜ್ ಶಿಂಧೆ ವಿರುದ್ಧ ೨೦೦೬ರ ಆಗಸ್ಟ್‌ನಲ್ಲಿ ದೇಶದ್ರೋಹದ ಆರೋಪ ಹೊರಿಸಲಾಗಿತ್ತು. ಅವರು ನಗರದಲ್ಲಿ ಕಾಣಿಸಿಕೊಂಡ ಅನಾಹುತಕಾರಿ ಪ್ರವಾಹಕ್ಕಾಗಿ ಆಗಿನ ಗುಜರಾತ್ ಮುಖ್ಯಮಂತ್ರಿ ನರೇಂದ್ರ ಮೋದಿಯನ್ನು ಟೀಕಿಸಿದ್ದರು. ಕಂದಮಾಲ್ ದಂಗೆಯ ಕುರಿತು ಪ್ರಕಟಿಸಿದ 'ಧರ್ಮನಾರೆ ಕಂಧಮಲ್ ರೆ ರಕ್ತೊನಧಿ' (ಕಂಧಮಾಲ್‌ನ ರಕ್ತದ ನದಿಗಳು) ಎಂಬ ಲೇಖನಕ್ಕಾಗಿ ಡಿಸೆಂಬರ್ ೨೦೦೮ರಲ್ಲಿ ಭುವನೇಶ್ವರದ 'ನಿಶಾನ್' ಪತ್ರಿಕೆ ಸಂಪಾದಕ ಲೆನಿನ್ ಕುಮಾರ್ ವಿರುದ್ಧ ದೇಶದ್ರೋಹದ ಆರೋಪ ಹೊರಿಸಲಾಗಿತ್ತು. ಕರ್ನಾಟಕದ ಎನ್‌ಕೌಂಟರ್ ಸಾವುಗಳನ್ನು ಟೀಕಿಸಿ ಬರೆದ ಲೇಖನಕ್ಕಾಗಿ ಫೆಬ್ರವರಿ ೨೦೧೦ರಲ್ಲಿ ಮೈಸೂರಿನ ವಾರ್ತಾಪತ್ರ ಪತ್ರಿಕೆಯ ಸ್ಥಾನಿಕ ಸಂಪಾದಕಿ ಈ. ರತಿ ರಾವ್ ವಿರುದ್ಧ ದೇಶದ್ರೋಹದ ಆರೋಪ ಹೊರಿಸಲಾಗಿತ್ತು.

ಮಾವೋವಾದಿ ಸಾಹಿತ್ಯ ಹೊಂದಿದ್ದಾರೆ ಎಂಬ ಕಾರಣಕ್ಕೆ ಸೆಪ್ಟೆಂಬರ್ ೨೦೦೯ರಲ್ಲಿ ಒರಿಸ್ಸಾದ ಪತ್ರಕರ್ತ ಲಕ್ಷ್ಮಣ ಚೌಧುರಿ ವಿರುದ್ಧ ದೇಶದ್ರೋಹ ಆರೋಪ ಹೊರಿಸಲಾಗಿತ್ತು. ಕಾನೂನುಬಾಹಿರವಾಗಿ ಮಾದಕ ವಸ್ತುಗಳ ಸಾಗಾಟದಲ್ಲಿ ಸ್ಥಳೀಯ ಪೊಲೀಸರು ಭಾಗಿಯಾಗಿದ್ದಾರೆಂದು ಚೌಧುರಿಯವರು ಬರೆಯುತ್ತಿದ್ದರು. ದೇಶದ್ರೋಹ ಕಾನೂನಿನ ದುರ್ಬಳಕೆಗೆ ಖ್ಯಾತ ದಲಿತ ಹೋರಾಟಗಾರ ಮತ್ತು 'ವಿದ್ರೋಹಿ' ಪತ್ರಿಕೆಯ ಸಂಪಾದಕ ಸುಧೀರ್ ಧವಾಲೆಯವರದು ಮತ್ತೊಂದು ಉದಾಹರಣೆ. ಮಹಾರಾಷ್ಟ್ರದಲ್ಲಿ ಜಾತಿ ದೌರ್ಜನ್ಯ ಪ್ರಕರಣಗಳಲ್ಲಿ ನೊಂದವರಿಗೆ ನ್ಯಾಯ ಒದಗಿಸುವಲ್ಲಿ ಧವಾಲೆ ಮುಂಚೂಣಿಯಲ್ಲಿದ್ದರು. ಪೊಲೀಸರ ಪ್ರಕಾರ ನಿಷೇಧಿತ ಮಾವೋವಾದಿ




ಕಮ್ಯುನಿಸ್ಟ್ ಪಕ್ಷದ ಸದಸ್ಯನೊಬ್ಬ ಧವಾಲೆಗೆ ತನ್ನ ಕಂಪ್ಯೂಟರ್ ನೀಡಿದ್ದ ಎಂದು ವಿಚಾರಣೆಯೊಂದರಲ್ಲಿ ಹೇಳಿಕೊಂಡಿದ್ದ. ಅವರ ಬಂಧನದ ವಿರುದ್ಧ ದಲಿತರ ಮತ್ತು ಪ್ರಗತಿಪರ ಮಹಾರಾಷ್ಟ್ರಿಗರು ರಾಜ್ಯದಾದ್ಯಂತ ಪ್ರತಿಭಟಿಸಿದರು.

ರಾಜಸ್ಥಾನದ ಗುಜ್ಜಾರ್ ಸಮುದಾಯದ ಮುಖಂಡ ಕಿರೋರಿ ಸಿಂಗ್ ಬೈನ್‌ಸ್ಲ ಅವರು ಗುಜ್ಜಾರ್ ಸಮುದಾಯಕ್ಕೆ ಪರಿಶಿಷ್ಟ ಪಂಗಡದ ಸ್ಥಾನಮಾನ ನೀಡಬೇಕೆಂಬ ಹೋರಾಟದ ಮುಂಚೂಣಿಯಲ್ಲಿದ್ದರು ಎಂಬ ಕಾರಣಕ್ಕೆ ಜೂನ್ ೨೦೦೮ರಲ್ಲಿ ದೇಶದ್ರೋಹದ ಆರೋಪ ಹೊರಿಸಲಾಗಿತ್ತು. ಕೂಡಂಕುಳಂ ಅಣುಸ್ಥಾವರದ ವಿರುದ್ಧದ ಪ್ರತಿಭಟನೆಕಾರರ ವಿರುದ್ಧವೂ ದೇಶದ್ರೋಹದ ಆರೋಪ ಹೊರಿಸಲಾಗಿತ್ತು. ಪುಸ್ತಕ ಬಿಡುಗಡೆ ಸಮಾರಂಭವೊಂದರಲ್ಲಿ ದೇಶದ ಸಾರ್ವಭೌಮತೆಗೆ ವಿರುದ್ಧವಾದ ಹೇಳಿಕೆ ನೀಡಿದ್ದಾರೆಂಬ ಕಾರಣಕ್ಕೆ ಎಂಡಿಎಂಕೆ ನಾಯಕ ವಿ. ಗೋಪಾಲಸ್ವಾಮಿ (ವೈಕೋ) ವಿರುದ್ಧ ದೇಶದ್ರೋಹ ಆರೋಪ ಹೊರಿಸಲಾಗಿತ್ತು. ಇತ್ತೀಚೆಗೆ ಗುಜರಾತಿನಲ್ಲಿ ಪಟೇಲ್ ಸಮುದಾಯಕ್ಕೆ ಮೀಸಲಾತಿ ನೀಡಬೇಕೆಂದು ಆಗ್ರಹಿಸಿ ಹೋರಾಟ ನಡೆಸಿದ ಹಾರ್ದಿಕ್ ಪಟೇಲ್ ವಿರುದ್ಧವೂ ದೇಶದ್ರೋಹದ ಆರೋಪ ಹೊರಿಸಲಾಗಿತ್ತು.

ಪೊಲೀಸ್ ಅಧಿಕಾರಿಗಳ ಸಾಮರ್ಥ್ಯವನ್ನು ಪ್ರಶ್ನಿಸಿದ್ದಕ್ಕಾಗಿ ಮತ್ತು ಮಾಫಿಯಾ ಜೊತೆಗೆ ಅವರಿಗೆ ಸಂಬಂಧವಿದೆ ಎಂದು ಆರೋಪಿಸಿದ್ದಕ್ಕಾಗಿ ಟೈಂಸ್ ಆಫ್ ಇಂಡಿಯಾದ ಅಹಮದಾಬಾದ್ ಸ್ಥಾನಿಕ ಸಂಪಾದಕ ಭರತ್ ದೇಸಾಯಿ ಮತ್ತು ಹಿರಿಯ ವರದಿಗಾರ ಮತ್ತು ಛಾಯಾಗ್ರಾಹಕರ ಮೇಲೆ ದೇಶದ್ರೋಹದ ಆರೋಪ ಹೊರಿಸಲಾಗಿತ್ತು. ಸೆಪ್ಟೆಂಬರ್ ೧೦, ೨೦೧೨ರಲ್ಲಿ ರಾಜಕೀಯ ವ್ಯಂಗ್ಯಚಿತ್ರಕಾರ ಅಸೀಮ್ ತ್ರಿವೇದಿ ಅವರನ್ನು ಭ್ರಷ್ಟಾಚಾರದ ವಿರುದ್ಧ ಬರೆದ ಸರಣಿ ವ್ಯಂಗ್ಯಚಿತ್ರಗಳಿಗಾಗಿ ದೇಶದ್ರೋಹದ ಆರೋಪದ ಮೇಲೆ ೧೪ ದಿನಗಳ ನ್ಯಾಯಾಂಗ ಬಂಧನಕ್ಕೆ ಒಳಪಡಿಸಲಾಗಿತ್ತು. ಆನಂತರ ಅವರನ್ನು ಜಾಮೀನಿನ ಮೇಲೆ ಬಿಡುಗಡೆ ಮಾಡಲಾಯಿತು. ಅವರು ಬರೆದ ಒಂದು ವ್ಯಂಗ್ಯಚಿತ್ರದಲ್ಲಿ ರಾಷ್ಟ್ರ ಲಾಂಛನದ ಸಿಂಹಗಳ ಸ್ಥಾನದಲ್ಲಿ ನರಿಗಳನ್ನು ಚಿತ್ರಿಸಲಾಗಿತ್ತು. 'ಸತ್ಯಮೇವ ಜಯತೆ' ವಾಕ್ಯದ ಬದಲಾಗಿ 'ಭ್ರಷ್ಟಮೇವ ಜಯತೆ' ಎಂದು ಬರೆಯಲಾಗಿತ್ತು. ಇನ್ನೊಂದು ವ್ಯಂಗ್ಯಚಿತ್ರದಲ್ಲಿ ಭಾರತದ ಸಂಸತ್ತನ್ನು ರಾಷ್ಟ್ರೀಯ ಶೌಚಾಲಯ ಎಂದು ಚಿತ್ರಿಸಲಾಗಿತ್ತು. ಆ ವ್ಯಂಗ್ಯಚಿತ್ರಗಳು ರಾಷ್ಟ್ರ ಲಾಂಛನ ಮತ್ತು ಭಾರತದ ಸಂವಿಧಾನವನ್ನು ಹೀಯಾಳಿಸುವಂತಿದ್ದರೂ ಅವರ ಬಂಧನವನ್ನು ದೇಶದಾದ್ಯಂತ ಬುದ್ಧಿಜೀವಿಗಳು ಪ್ರಶ್ನಿಸಿದ್ದರು.

ಕಾಶ್ಮೀರ ಕಣಿವೆಯ ಅಶಾಂತಿ ಬಗೆಗೆ ಪ್ರಶ್ನೆ ಕೇಳಿದ ಶ್ರೀನಗರದ ಉಪನ್ಯಾಸಕರೊಬ್ಬರನ್ನು ೨೦೧೦ರಲ್ಲಿ ಐಪಿಸಿ ಸೆಕ್ಷನ್ ೧೨೪ಎಯಡಿ ಬಂಧಿಸಲಾಗಿತ್ತು. ಇಂಗ್ಲಿಷ್ ಸಾಹಿತ್ಯ ವಿದ್ಯಾರ್ಥಿಗಳಿಗೆ "ಕಲ್ಲು ಹೊಡೆಯುವವರು ನಿಜವಾದ ಹೀರೋಗಳೇ" ಎಂಬ ಪ್ರಶ್ನೆ ಕೇಳಲಾಗಿತ್ತು. ಶಂಕರ್ ಪಿಳ್ಳೈ ಅವರ ೬೪ ವರ್ಷಗಳ ಹಿಂದಿನ ಸಂವಿಧಾನವನ್ನು ಬಸವನಹುಳದಂತೆ ತೋರಿಸಿ ಅಂಬೇಡ್ಕರ್ ಮತ್ತು ನೆಹರೂ ಅವರನ್ನು ಟೀಕಿಸುವ ವ್ಯಂಗ್ಯಚಿತ್ರವನ್ನು ದೇಶದ್ರೋಹದ ಆರೋಪದ ಮೇಲೆ ಪಠ್ಯಪುಸ್ತಕಗಳಿಂದ ಇತ್ತೀಚೆಗೆ ತೆಗೆದುಹಾಕಲಾಯಿತು. ತಮಾಷೆಯೆಂದರೆ ನೆಹರೂ ಸಹ ಶಂಕರ್ ಅವರ ಅಭಿಮಾನಿಯಾಗಿದ್ದರು. ದೆಹಲಿಯ ಜವಾಹರಲಾಲ್ ನೆಹರೂ ವಿಶ್ವವಿದ್ಯಾಲಯದ ವಿದ್ಯಾರ್ಥಿ ಸಂಘದ ನಾಯಕ ಕನ್ಹಯ್ಯಾ ಕುಮಾರ್ ಅಫ್ಜಲ್ ಗುರು ಪರ ಘೋಷಣೆ ಕೂಗಿದ್ದಾರೆಂದು ದೇಶದ್ರೋಹದ ಆರೋಪ ಹೊರಿಸಿ ಬಂಧಿಸಲಾಗಿತ್ತು. ಇತ್ತೀಚೆಗೆ ಜಮ್ಮು ಮತ್ತು ಕಾಶ್ಮೀರದಲ್ಲಿ ಮಾನವ ಹಕ್ಕುಗಳ ಉಲ್ಲಂಘನೆಗೆ ಸಂಬಂಧಿಸಿದಂತೆ ಬೆಂಗಳೂರಿನಲ್ಲಿ ಆ್ಯಮ್ನೆಸ್ಟಿ ಇಂಟರ್‌ನ್ಯಾಷನಲ್ ಸಂಸ್ಥೆ ಆಯೋಜಿಸಿದ್ದ ಕಾರ್ಯಕ್ರಮದಲ್ಲಿ ದೇಶ ವಿರೋಧಿ ಘೋಷಣೆ ಕೂಗಲಾಗಿದೆ ಎಂದು ಆರೋಪಿಸಿ ದೇಶದ್ರೋಹ ಪ್ರಕರಣ ದಾಖಲಿಸಲಾಗಿದೆ.

**ಟೀಕೆ**

ದೇಶದ್ರೋಹದ ಆರೋಪ ಹೊತ್ತವರಿಗೆ ಶಿಕ್ಷೆಯು ಕಾನೂನು ಪ್ರಕ್ರಿಯೆಯಂತೆ ಆರಂಭವಾಗುತ್ತದೆ. ಅವರನ್ನು ಬಂಧಮುಕ್ತಗೊಳಿಸಿದರೂ, ಅವರು ಸುದೀರ್ಘವಾದ ಕಾನೂನು ಪ್ರಕ್ರಿಯೆಗೆ ಒಳಪಡಬೇಕಾಗುತ್ತದೆ. ಅದು ಶಿಕ್ಷೆಯಾಗಿ ಪರಿಣಮಿಸುತ್ತದೆ ಮತ್ತು ಮಾತಾಡುವ ಧೈರ್ಯವಿದ್ದವರಿಗೆ ಅಡೆತಡೆಯಾಗಿ ಪರಿಣಮಿಸುತ್ತದೆ. ವಿಚಾರಣಾ ನ್ಯಾಯಾಲಯಗಳು ಮತ್ತು ಪೊಲೀಸ್ ಅಧಿಕಾರಿಗಳು ಯಾವುದೇ ಕಾರಣವಿಲ್ಲದೆ ನಿರಂತರವಾಗಿ ದೌರ್ಜನ್ಯವೆಸಗುತ್ತಾರೆ. ದೇಶದ್ರೋಹ ಕಾನೂನನ್ನು ಸರಕಾರದ ನೀತಿಗಳು ಮತ್ತು ಚಟುವಟಿಕೆಗಳ ವಿರುದ್ಧ ಧ್ವನಿ ಎತ್ತುವ ನಿರ್ದಿಷ್ಟ ಜನರನ್ನು ಗುರಿಯಾಗಿಸಿ ಬಳಸಲಾಗುತ್ತದೆ.

ದೇಶದ್ರೋಹ ಕಾನೂನನ್ನು ವಿರೋಧಿ ಧ್ವನಿ ಅಡಗಿಸಲು ಬಲಪ್ರಯೋಗದಿಂದಲೇ ಬಳಸಲಾಗುತ್ತದೆ. ಬಿನಾಯಕ ಸೇನ್, ಅರುಂಧತಿ ರಾಯ್, ಈ. ರತಿ ರಾವ್, ಭರತ್ ದೇಸಾಯಿ, ಮನೋಜ್ ಸಿಂಧೆ, ವಿ. ಗೋಪಾಲಸ್ವಾಮಿ ಮುಂತಾದ ವ್ಯಕ್ತಿಗಳು ಸರಕಾರದ ವಿರುದ್ಧ ದಂಗೆ ಎಬ್ಬಿಸುವ ಉದ್ದೇಶ ಹೊಂದಿರಲಿಲ್ಲ. ಅವರು ತಮ್ಮ ಭಾಷಣಗಳಲ್ಲಿ ಮತ್ತು ಬರಹಗಳಲ್ಲಿ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತಿದ್ದರು. ಅವರು ಸರಕಾರದ ಕೆಲವು ನಿರ್ದಿಷ್ಟ ಚಟುವಟಿಕೆಗಳನ್ನು ಟೀಕಿಸುತ್ತಿದ್ದರು. ದೇಶದ್ರೋಹ ಕಾನೂನಿನ ಇತಿಹಾಸವನ್ನು ಗಮನಿಸಿದಾಗ ಸುಪ್ರೀಂ ಕೋರ್ಟ್ ಮತ್ತು ಕೆಳ ನ್ಯಾಯಾಲಯಗಳು ನೀಡಿದ ತೀರ್ಪುಗಳಲ್ಲಿ ಅಜಗಜಾಂತರ ವ್ಯತ್ಯಾಸವಿರುವುದನ್ನು ಕಾಣಬಹುದು. ಇದರಿಂದ ನಿರಪರಾಧಿಗಳಿಗೆ ಅನ್ಯಾಯವಾಗಿರುವುದನ್ನು ಕಾಣಬಹುದು.

ರಾಷ್ಟ್ರೀಯವಾದಿಗಳು ಮತ್ತು ಬ್ರಿಟಿಷ್ ವಿರೋಧಿಗಳ ಬಾಯಿ ಮುಚ್ಚಿಸಲು ಜಾರಿಗೆ ತಂದ ಈ ಕಾನೂನನ್ನು ಇಂದೂ ಸಹ ಮುಂದುವರಿಸುವುದು ಅನಗತ್ಯ ಮತ್ತು ಪ್ರಜಾಪ್ರಭುತ್ವ ವಿರೋಧಿ. ವಸಾಹತು ಸರಕಾರದಲ್ಲಿ ಕಾನೂನುಬದ್ಧವಾಗಿ ರಚನೆಯಾದ ಸರಕಾರದ ವಿರುದ್ಧ ಪ್ರಜೆಗಳು ವೈರತ್ವ, ನಿಂದನೆ, ದ್ವೇಷ, ಅಸೂಯೆ ವ್ಯಕ್ತಪಡಿಸಬಾರದೆಂದು ಬಯಸುವ ಈ ಕಾನೂನಿಗೆ ಭಾರತದಂತಹ ಆಧುನಿಕ ಪ್ರಜಾಪ್ರಭುತ್ವ ರಾಷ್ಟ್ರದಲ್ಲಿ ಸ್ಥಾನವಿಲ್ಲ. ಭಾರತದ ಪ್ರಜೆಗಳು ಸರಕಾರದ ವಿರುದ್ಧದ ರಚನಾತ್ಮಕ ಟೀಕೆ ಮಾಡಬೇಕಾದರೆ ಅಥವಾ ವಿರುದ್ಧ ಧ್ವನಿ ಎತ್ತಬೇಕಾದರೆ ಈ ಕಾನೂನನ್ನು ರದ್ದುಪಡಿಸುವುದು ಉತ್ತಮ. ದೇಶದಾದ್ಯಂತ ಮಾನವ ಹಕ್ಕುಗಳ ಕಾರ್ಯಕರ್ತರು ಮತ್ತು ಅವರ ಸಂಘಟನೆಗಳು ದೇಶದ್ರೋಹ ಕಾನೂನು ಮತ್ತಿತರ ಸಮಾನ ಕಾನೂನುಗಳ ರದ್ದತಿಗೆ ಒತ್ತಾಯಿಸುತ್ತಾ ಬಂದಿರುವುದು ಪ್ರಸಿದ್ಧ.

ಸಂವಿಧಾನದಲ್ಲಿ ದೇಶದ್ರೋಹ ಕಾನೂನು ಅಸ್ತಿತ್ವದಲ್ಲಿರುವುದು ಮತ್ತು ಅಸೂಯೆಯ ಅಪರಾಧೀಕರಣ ಪ್ರಜಾಪ್ರಭುತ್ವ ಸಮಾಜದಲ್ಲಿ ಸ್ವೀಕಾರಾರ್ಹವಾದುದಲ್ಲ. ಈ ಕಾನೂನುಗಳು ಸ್ವಾತಂತ್ರ್ಯಕ್ಕಾಗಿ ಹೋರಾಡುವ ರಾಷ್ಟ್ರೀಯವಾದಿಗಳ ವಿರುದ್ಧ ವಸಾಹತುಶಾಹಿಗಳು ಪ್ರಯೋಗಿಸಿದ ಅಸ್ತ್ರಗಳಾಗಿವೆ. ಸುಪ್ರೀಂ ಕೋರ್ಟಿನ ತೀರ್ಪಿನ ಹೊರತಾಗಿಯೂ ಮಾಧ್ಯಮ ಪ್ರತಿನಿಧಿಗಳು, ಮಾನವ ಹಕ್ಕುಗಳ ಹೋರಾಟಗಾರರು, ರಾಜಕೀಯ ಹೋರಾಟಗಾರರು, ಕಲಾವಿದರು ಮತ್ತು ಬುದ್ಧಿಜೀವಿಗಳನ್ನು ಶೋಷಿಸಲು ಬಳಸುವ ಈ ಕಾನೂನು ಸಂವಿಧಾನದಲ್ಲಿರುವುದು ಪ್ರಜಾಪ್ರಭುತ್ವ ಮೌಲ್ಯಗಳಿಗೆ ಒಂದು ಬೆದರಿಕೆಯಾಗಿ ಪರಿಣಮಿಸಿದೆ. ಬಿನಾಯಕ ಸೇನ್‌ಗೆ ಶಿಕ್ಷೆ ನೀಡಿದ ಸಂದರ್ಭದಲ್ಲಿ ಆಗಿನ ಕೇಂದ್ರ ಕಾನೂನು ಸಚಿವ ವೀರಪ್ಪ ಮೋಯಿಲಿ ದೇಶದ್ರೋಹ ಕಾನೂನನ್ನು ಅವಲೋಕನ ಮಾಡುವ ಅಗತ್ಯವಿದೆ ಎಂದು ಘೋಷಿಸಿದ್ದರು. ಇತ್ತೀಚೆಗೆ ಕೇಂದ್ರ ಸರಕಾರ ಕೆಲವು ನಿರುಪಯುಕ್ತ ಹಳೆಯ ಕಾನೂನುಗಳನ್ನು ತೆಗೆದುಹಾಕುವ ಅಥವಾ ತಿದ್ದುಪಡಿ ಮಾಡುವ ಪ್ರಯತ್ನ ಮಾಡುತ್ತಿದೆ. ಈ ಕಾನೂನಿನ ದುರ್ಬಳಕೆಯನ್ನು ಗಮನಿಸಿದರೆ ಒಂದೇ ಒಂದು ಸಕಾರಣ ಕ್ರಮವೆಂದರೆ ಈ ಕಾನೂನನ್ನು ಆದಷ್ಟು ಬೇಗ ಕಿತ್ತುಹಾಕಬೇಕು.

**ಡಾ॥ ಸತೀಶ್ ಕುಮಾರ್ ಅಂಡಿಂಜೆ**
ಸಹಾಯಕ ಪ್ರಾಧ್ಯಾಪಕರು, ಪತ್ರಿಕೋದ್ಯಮ ಮತ್ತು ಸಮೂಹ ಸಂವಹನ ವಿಭಾಗ
ಕುವೆಂಪು ವಿಶ್ವವಿದ್ಯಾಲಯ
ಶಂಕರಘಟ್ಟ – ೫೭೭ ೪೫೧ ಶಿವಮೊಗ್ಗ ಜಿಲ್ಲೆ

# ಪರದೇಶದಲ್ಲಿ ಪರದಾಟ!

**ಎಸ್. ಜಿ. ಶಿವಶಂಕರ್**

**ಪ**ರದೇಶಗಳಿಗೆ ಹೋದವರಿಗೆ, ಅದರಲ್ಲಿಯೂ ಮೊದಲ ಬಾರಿ ಹೋದವರಿಗೆ ಅಲ್ಲಿ ಎದುರಿಸಬೇಕಾದ ತೊಂದರೆಗಳು ಒಂದಲ್ಲ ಎರಡಲ್ಲ. ತೊಂದರೆಗಳ ಪ್ರಮಾಣ ಹೆಚ್ಚಾಗಿರುವುದರಿಂದ ಅವನ್ನು ಪಡಿಪಾಟಲು, ಪರದಾಟ ಎನ್ನುವುದು ಸೂಕ್ತ! ಈ ಪರದಾಟ ಆಗುವುದು ಮಧ್ಯವಯಸ್ಸು ಮತ್ತದನ್ನು ಮೀರಿದವರಿಗೇ ಹೆಚ್ಚು! ಯುವಕರು ಪರದಾಡಿದರೂ ಕ್ರಮೇಣ ಹೊಂದಿಕೊಂಡುಬಿಡುತ್ತಾರೆ. ಅವರ ವಯೋಮಾನಕ್ಕೆ ಅದು ಪರದಾಟವೆನ್ನಿಸುವುದಿಲ್ಲ. ಸ್ವಲ್ಪ ಕಾಲ ಹೋಗಿಬರುವ ಮಧ್ಯವಯಸ್ಕರು ಮತ್ತು ಅದನ್ನು ಮೀರಿದವರಿಗೆ ಪರದೇಶ ನಿಜಕ್ಕೂ ಪರದಾಟವೇ ಸರಿ!

ಮೊದಲಿಗೆ ಮಧ್ಯವಯಸ್ಕರು, ವಯಸ್ಸಾದವರು ವಿದೇಶಕ್ಕೆ ಏಕೆ ಹೋಗಬೇಕಾಗುತ್ತದೆ ಎಂಬ ಪ್ರಶ್ನೆ ಮುಂದಾಗುತ್ತದೆ! ವಿದೇಶದಲ್ಲಿ ಉದ್ಯೋಗದಲ್ಲಿರುವ ಮಕ್ಕಳ ಮನೆಯ ಮದುವೆ, ಮುಂಜಿ, ಬಾಣಂತನ, ನಾಮಕರಣ, ಇಲ್ಲವೇ ಪ್ರವಾಸ ಮುಂತಾದ ಕಾರಣಗಳಿಗಾಗಿ ಪೋಷಕರು ಮತ್ತು ಹಿತೈಷಿಗಳು ವಿದೇಶಗಳಿಗೆ ಹೋಗಬೇಕಾಗುತ್ತದೆ. ವಿದೇಶಕ್ಕೆ ಹೋಗುವುದೆಂದರೆ ವಯಸ್ಸಾದವರಿಗೆ ಒಂದು ರೀತಿಯ ಆತಂಕ, ಹಿಂಜರಿಕೆ! ವಯಸ್ಸು ಹೆಚ್ಚಾಗಿದ್ದಷ್ಟೂ ಈ ಹಿಂಜರಿಕೆ ಹೆಚ್ಚು! ಸುಮಾರು ಮೂವತ್ತು ವರ್ಷಗಳ ಹಿಂದೆ ವಿದೇಶಕ್ಕೆ ಹೋಗುವುದು ಒಂದು ವಿಶೇಷವಾಗಿತ್ತು! ಆ ಕಾಲವನ್ನು ನಾನು ಕರಾರುವಾಕ್ಕಾಗಿ ಗುರುತಿಸುವ ಕಾರಣ ನಾನಾಗ ಜರ್ಮನಿಗೆ ಹೋಗಿದ್ದೆ. ಆಗದು ವಿಶೇಷವಾಗಿತ್ತು! ಈಗ ಹಾಗಿಲ್ಲ. ನಮ್ಮ ಪಕ್ಕದ ಮನೆಯವರು ಸುಮಾರು ನಾಲ್ಕೈದು ಸಾರಿ ವಿದೇಶಗಳಿಗೆ ಹೋಗಿಬಂದಿದ್ದಾರೆ. ಈಗ ಮತ್ತೆ ಹೊರಟಿದ್ದಾರೆ!

ನಮ್ಮ ಹಿಂದಿನವರು ವಿದೇಶವನ್ನು ಪರದೇಶ ಎಂದು ಕರೆಯುತ್ತಿದ್ದರು. ನಾವೀಗ ವಿದೇಶಗಳನ್ನು ಫಾರಿನ್ ಎಂದು ಕರೆಯುತ್ತಿದ್ದೇವೆ. ಪರದೇಶ ಎನ್ನುವ ಶಬ್ದ ಹಿತವಾಗಿ ಕೇಳಿಸುವುದಿಲ್ಲ ಎಂಬ ಕಾರಣಕ್ಕೋ ಏನೋ ಪರದೇಶ, ಪರದೇಶೀಯ ಬದಲು ಫಾರಿನ್, ಫಾರಿನರ್ ಎಂಬ ಶಬ್ದಗಳು ಇಂದು ಬಳಕೆಗೆ ಬಂದಿವೆ. ನಮ್ಮ ಹಿರಿಯರು 'ಪರದೇಶಿ' ಎಂದು ಬೈಯುತ್ತಿದ್ದುದನ್ನು ನಾನು ಕೇಳಿದ್ದೇನೆ. ನಾನು ಬಾಲಕನಾಗಿದ್ದಾಗ ನಮ್ಮ ಪಕ್ಕದ ಮನೆಯವರೊಬ್ಬರ ಸಂಬಂಧಿ ವಿದೇಶಕ್ಕೆ ಹೋಗಿ ಬಂದಿದ್ದರು. ಅವರು ಸಮುದ್ರ ದಾಟಿ ಬಂದಿದ್ದರಿಂದ ಶುದ್ಧಿ ಮಾಡಿಸಿಕೊಳ್ಳಬೇಕಾಗಿತ್ತು! ಈಗ ಪರಿಸ್ಥಿತಿ ಬದಲಾಗಿದೆ. ವಿದೇಶಕ್ಕೆ ಹೋಗಿಬಂದವರು ಶುದ್ಧಿ ಮಾಡಿಸಿಕೊಳ್ಳಬೇಕು ಎಂದು ಯಾರೂ ಹೇಳುವುದಿಲ್ಲ! ಬದಲಿಗೆ, ಅವರು ಇಲ್ಲಿರುವವರಿಗಿಂತ ಪವಿತ್ರರು ಎಂಬಂತೆ ನೋಡಲಾಗುತ್ತಿದೆ.

ವಿದೇಶಕ್ಕೆ ಹೋಗುವುದು ವಿಶೇಷವಾಗಿದ್ದ ಕಾಲ ಹೋಗಿ ಈಗದು ಅತಿ ಸಾಮಾನ್ಯ ಸಂಗತಿಯಾಗಿದೆ! ಉದ್ಯೋಗಕ್ಕೆ, ಹೆಚ್ಚಿನ ವ್ಯಾಸಂಗಕ್ಕೆ, ವ್ಯಾಪಾರ ಮತ್ತು ಪ್ರವಾಸಕ್ಕೆ ಯುವಕರು ವಿದೇಶಕ್ಕೆ ಹೋಗುವುದು ಸರ್ವೇಸಾಮಾನ್ಯ. ಈಗಂತೂ ವಿದೇಶಗಳಿಗೆ ಹೋಗುವುದೆಂದರೆ ಬೆಂಗಳೂರಿನಲ್ಲಿ ಒಂದು ಬಡಾವಣೆಯಿಂದ ಇನ್ನೊಂದು ಬಡಾವಣೆಗೆ ಹೋಗುವಷ್ಟೇ ಸಲೀಸಾಗಿದೆ. ಎಷ್ಟೋ ಸಮಯ ಬೆಂಗಳೂರಿನಲ್ಲಿ ಒಂದು ಬಡಾವಣೆಯಿಂದ ಇನ್ನೊಂದು ಬಡಾವಣೆಗೆ ಹೋಗುವ ಸಮಯದಲ್ಲೇ ಕೆಲವು ವಿದೇಶಗಳಿಗೂ ಹೋಗಬಹುದಾಗಿದೆ! ಬೆಂಗಳೂರಿನ ವಾಹನ, ಜನ ಮತ್ತು ದನದಟ್ಟಣೆ ಅಷ್ಟು ಅದ್ವಾನವಾಗಿದೆ. ಇದಕ್ಕೆ ಹೋಲಿಸಿದರೆ ವಿದೇಶಗಳಿಗೆ ವಿಮಾನದಲ್ಲಿ ಹೋಗುವುದು ಸುಲಭ! ಆದರೆ ಒಂದು ತೊಂದರೆಯಿದೆ. ವಿದೇಶಕ್ಕೇನೋ ಸುಲಭವಾಗಿ ಹೋಗಬಹುದು ಆದರೆ ಬೆಂಗಳೂರಿನ ವಿಮಾನ ನಿಲ್ದಾಣಕ್ಕೆ ಹೋಗುವುದು ? ಅದು ಅಷ್ಟು ಸುಲಭವಲ್ಲ !!

ಭಾರತೀಯರು ವಾಮನರು !! ಭೂಮಿ ಎಷ್ಟುದ್ದ ಇದೆಯೋ ಅಷ್ಟುದ್ದಕ್ಕೂ ಇವರು ತಳವೂರಿದ್ದಾರೆ. ಹೆಚ್ಚಿನವರು ಅಮೆರಿಕ ಮತ್ತು ಆಸ್ಟ್ರೇಲಿಯಾಗಳಲ್ಲಿ ನೆಲಸಿದ್ದಾರೆ. ಅರಬ್ ದೇಶಗಳಿಗೆ ಉದ್ಯೋಗ ನಿಮಿತ್ತ ಹೋಗಿರುವವರೂ ಲಕ್ಷಗಳ ಸಂಖ್ಯೆಯಲ್ಲಿದ್ದಾರೆ. ಕೆಲವರು ಮೂರು ನಾಲ್ಕು ತಲೆಮಾರುಗಳಿಂದ ಅಮೆರಿಕಾದಲ್ಲಿದ್ದಾರೆ. ಈಗಂತೂ ಐಟಿ ಯುವಕರು ತಮ್ಮ ಕೆಲಸದ ನಿಮಿತ್ತ ವರ್ಷಕ್ಕೆ ಮೂರ್ನಾಲ್ಕು ಬಾರಿ ಹೋಗಿಬರುತ್ತಿದ್ದಾರೆ. ಇನ್ನು ಕೆಲವರು ವಿದೇಶದಲ್ಲಿ ಮೂರ್ನಾಲ್ಕು ವರ್ಷವಿದ್ದು ಬರುತ್ತಾರೆ. ಇನ್ನು ಕೆಲವರು ಅಲ್ಲೇ ಬೇರುಬಿಡುತ್ತಿದ್ದಾರೆ. ಹೀಗೆ ಹೋದವರು ಬಾಣಂತನಕ್ಕೆ, ಮಕ್ಕಳ ಲಾಲನೆ–ಪಾಲನೆಗೆ ತಂದೆ–ತಾಯಿಯರನ್ನು ತಮ್ಮಲ್ಲಿಗೆ ಕರೆಸಿಕೊಳ್ಳುವುದು ಸಹಜ. ಈಗ ಹೆಣ್ಣುಮಕ್ಕಳೂ ಉದ್ಯೋಗ ಮಾಡುತ್ತಿದ್ದಾರೆ. ಅವರಿಗೆ ವರ್ಷಗಟ್ಟಲೆ ಬಾಣಂತನಕ್ಕಾಗಿ ರಜಾ ಸಿಗುವುದಿಲ್ಲ. ಹೆರಿಗೆಯ ನಂತರ ಐದಾರು ತಿಂಗಳಲ್ಲಿ ಅವರು ಕೆಲಸಕ್ಕೆ ಮರಳಬೇಕಾಗುತ್ತದೆ. ಈ ಸಮಯದಲ್ಲಿ ಶಿಶುವಿನ ಲಾಲನೆ–ಪಾಲನೆಗೆ ಹೆಣ್ಣುಮಕ್ಕಳಿಗೆ ಸಹಜವಾಗಿ ನೆನಪಾಗುವವರು ತಮ್ಮ ತಂದೆ–ತಾಯಿ. ವಿದೇಶಗಳಲ್ಲಿ ಕೆಲಸ ಮಾಡುವ ಬಹುತೇಕ ಹೆಣ್ಣುಮಕ್ಕಳು ತಮ್ಮ ತಾಯಂದಿರನ್ನು ಬಾಣಂತನಕ್ಕೆ ಕರೆಸಿಕೊಳ್ಳುತ್ತಾರೆ. ಆ ಸಮಯದಲ್ಲಿ ರಿಟೈರ್ ಆದ ತಂದೆಯೂ ಬಾಲಂಗೋಚಿಯಂತೆ ಪತ್ನಿಯನ್ನು ಹಿಂಬಾಲಿಸುತ್ತಾರೆ !! ಹೀಗೆ ಹೋದ ತಂದೆ–ತಾಯಿಗಳು ತಮ್ಮ ಮಕ್ಕಳಷ್ಟು ಸಹಜವಾಗಿ ಅಲ್ಲಿನ



ಪಾಶ್ಚಿಮಾತ್ಯರು ಆಹಾರ ಸೇವಿಸಲು ಫೋರ್ಕ್, ಚಾಕು ಮತ್ತು ಚಮಚಾಗಳನ್ನು ಉಪಯೋಗಿಸುತ್ತಾರೆ. ಅಲ್ಲಿಗೆ ಹೋದ ತಮ್ಮವರಿಗೆ ಅಲ್ಲಿನ ಪದ್ಧತಿಗಳನ್ನು ಸೂಕ್ಷ್ಮವಾಗಿ ತಿಳಿಸುತ್ತಾರೆ. ಹೋಟೆಲುಗಳಿಗೆ ಹೋದರೆ ಹೇಗೆ ತಿನ್ನಬೇಕು, ಫೋರ್ಕ್ ಮತ್ತು ಚಾಕು ಹೇಗೆ ಉಪಯೋಗಿಸಬೇಕು, ಯಾರಾದರೂ ಮಾತಾಡಿಸಿದರೆ 'ಹಾಯ್' ಎನ್ನಬೇಕು, ಅಲ್ಲಿನ ಕಸ ನಿರ್ವಹಣೆ ಹೇಗೆ ಮಾಡುತ್ತಾರೆ ಇತ್ಯಾದಿ. ಆದರೆ ಇವೆಲ್ಲಾ ಒಂದು ದಿನದಲ್ಲಿ ಅಥವಾ ಒಂದು ತಿಂಗಳಲ್ಲಿ ಬರುವಂಥವೇ...? ಬರೀ ಒಂದು ತಿಂಗಳಲ್ಲ, ವರ್ಷವಿದ್ದರೂ ಬರುವುದಿಲ್ಲ !

ಪರಿಸರಕ್ಕೆ ಹೊಂದಿಕೊಳ್ಳಲಾರರು ! ಆಗ ಶುರುವಾಗುತ್ತದೆ ನೋಡಿ ಪರದಾಟ !

ಸ್ವದೇಶದಲ್ಲಿ ಮನೆಗೆ ದಿನನಿತ್ಯ ಒಬ್ಬರಲ್ಲ ಒಬ್ಬರು ನೆಂಟರು, ಸ್ನೇಹಿತರು, ಅಕ್ಕ-ಪಕ್ಕದವರು ಬಂದುಹೋಗುವುದು ಸಾಮಾನ್ಯ. ಇದು ನಮ್ಮ ಬದುಕಿನ ಅವಿಭಾಜ್ಯ ಅಂಗ. ನಮ್ಮ ದೇಶದ ರಸ್ತೆಗಳಲ್ಲಿ ಹತ್ತು ನಿಮಿಷ ಕಾಲಾಡಿಸುವುದರಲ್ಲಿ ಹತ್ತಾರು ಜನ ಪರಿಚಿತರು ಸಿಗುತ್ತಾರೆ. ನಾವು ಜನಸಂಖ್ಯಾವೀರರು ! ನಮ್ಮಲ್ಲಿ ಎಲ್ಲೆಲ್ಲಿಯೂ ಜನವೋ ಜನ ! ವಿದೇಶಕ್ಕೆ ಹೋದವರಿಗೆ ಮೊದಲಿಗೆ ಎದುರಾಗುವ ಬದಲಾವಣೆ ಇದು ! ಅಲ್ಲಿ ಜನಸಂಖ್ಯೆ ಕಡಿಮೆ ! ಹತ್ತಾರು ಮೈಲು ಹೋದರೂ ಹತ್ತಾರು ಜನ ಸಹ ಸಿಗುವುದಿಲ್ಲ. ಇನ್ನು ಮನೆಯಲ್ಲಿ ಮಗಳು-ಅಳಿಯ, ಅವರ ಮಕ್ಕಳು ಇಲ್ಲವೇ ಮಗ-ಸೊಸೆ ಮತ್ತವರ ಮಕ್ಕಳು ಮಾತ್ರ! ಅಪರೂಪಕ್ಕೆ ಯಾರಾದರೊಬ್ಬರು ಪರಿಚಿತರು ಬರಬಹುದು, ಅಷ್ಟೆ! ಮಾತಾಡಲು ಜನರೇ ಸಿಗದೆ ಘಾಸಿಯಾಗುವ ಅಂಶ ಇದು ! ತಾವು ಏನನ್ನೋ ಕಳೆದುಕೊಂಡ ಭಾವನೆ ಮೂಡುತ್ತದೆ. ಪರದೇಶಕ್ಕೆ ಹೋಗಿ ಪರದೇಶಿಯಾದ ಅನುಭವ ! ಇದು ಪರದೇಶಕ್ಕೆ ಹೋದವರ ಮೊದಲ ಪರದಾಟ ! ಬೆಳಗಾಗುತ್ತಲೇ ಮನೆಯವರೆಲ್ಲ ಕೆಲಸಕ್ಕೆ ಹೋಗುತ್ತಾರೆ ! ಮಕ್ಕಳು ಡೇ ಕೇರ್ ಇಲ್ಲವೇ ಶಾಲೆಗೆ ಹೋಗುತ್ತಾರೆ. ನಂತರ ಮನೆ ಬಣಬಣ ! ಮಾತಾಡಲು ಜನರಿಲ್ಲ, ಅಕ್ಕಪಕ್ಕದವರಿಲ್ಲ ! ನೆಂಟರಿಲ್ಲ ! ಅಕಸ್ಮಾತ್ ಅಕ್ಕಪಕ್ಕ ವಯಸ್ಸಾದ ಜನರು ಸಿಗುತ್ತಾರೆ !! ಅವರು ವಿದೇಶೀಯರಾದರೆ ಭಾಷೆಯ ತೊಡಕು. ಅಕಸ್ಮಾತ್ ಭಾಷೆ ತಿಳಿದಿದ್ದರೂ ಉಚ್ಚಾರಣೆಯ ದೆಸೆಯಿಂದ ಸಂವಹನವೇ ಕಡಿದುಬೀಳುತ್ತದೆ ! ಇನ್ನು ತಮ್ಮ ದೇಶಕ್ಕೆ ಫೋನು ಮಾಡಲೂ ಪರದಾಡಬೇಕಾಗುತ್ತದೆ! ಫೋನು ಮಾಡಬೇಕೆಂದರೂ ತಮ್ಮ ದೇಶದ ಸಮಯ ನೋಡಿಕೊಳ್ಳಬೇಕು. ಎಷ್ಟೋ ದೇಶಗಳ ಕಾಲಮಾನಕ್ಕೂ ಸ್ವದೇಶದ ಕಾಲಮಾನಕ್ಕೂ ಭಾರೀ ವ್ಯತ್ಯಾಸಗಳಿರುತ್ತವೆ. ವಿದೇಶದಲ್ಲಿ ಬೆಳಗಾಗಿದ್ದರೆ ಭಾರತದಲ್ಲಿ ರಾತ್ರಿ ! ಅಲ್ಲಿ ಬೆಳಗಾಗಿದ್ದರೆ ಇಲ್ಲಿ ಮಲಗುವ ಸಮಯ ! ಫೋನು ಮಾಡಲು ಆತಂಕ ಬೇರೆ ! ಒಮ್ಮೊಮ್ಮೆ ಫೋನಿನಲ್ಲಿ ಮಾತಾಡುವವರ ದನಿ ಕೇಳಿಸುವುದಿಲ್ಲ ! ಜೋರಾಗಿ ಮಾತಾಡಬೇಕಾದ ಸಂದರ್ಭಗಳಿರುತ್ತವೆ ! ಆಗ ಹಿಂಜರಿಕೆಯಾಗುತ್ತದೆ ! ಮಗ-ಸೊಸೆ ಇಲ್ಲವೇ ಮಗಳು-ಅಳಿಯ ಏನಂದುಕೊಳ್ಳುತ್ತಾರೋ, ಮಾತು ಹೆಚ್ಚಾದರೆ ಅದು ಗಾಸಿಪ್ ಎಂದು ದೂರಬಹುದು ಎಂಬ ಹೆದರಿಕೆ !

ಕೆಲಸಕ್ಕೆ ಹೋದವರು ಸಂಜೆಗೇ ಬರುವುದು ! ಅವರು ಬರುವವರೆಗೂ ಮನೆಯ ಗೋಡೆಗಳನ್ನು ನೋಡುತ್ತಾ ಕಾಲ ಕಳೆಯಬೇಕು !! ಇಲ್ಲವೇ ಪುಟ್ಟ ಮಕ್ಕಳಿದ್ದರೆ ಅವರ ಲಾಲನೆ ಪಾಲನೆಯಲ್ಲಿ ತೊಡಗಿಸಿಕೊಳ್ಳಬೇಕು ! ಎರಡನೆಯ ಪರದಾಟವೆಂದರೆ ಊಟ-ತಿಂಡಿಯದು. ತಮ್ಮ ಮನೆಯಲ್ಲಿ ಬೆಳಗ್ಗೆ ರುಚಿರುಚಿಯಾದ ತಿಂಡಿಗಳನ್ನು ತಿನ್ನುತ್ತಿದ್ದವರಿಗೆ ವಿದೇಶದಲ್ಲಿ ತಮ್ಮವರು ಬೆಳಿಗ್ಗೆ ಸಿರಿಯಲ್ ತಿನ್ನುವುದು ಕಂಡು ಅಲ್ಲಿಗೆ ಹೋದವರು ಹೌಹಾರುತ್ತಾರೆ ! ಅದನ್ನು ತಿಂದು ಇವರು ಹೇಗಿರುತ್ತಾರೆ ಎಂಬ ವ್ಯಸನ ಕಾಡುತ್ತದೆ. ಒಂದು ಹಿಡಿಯಷ್ಟು ಓಟ್ಸನ್ನು ಬಟ್ಟಲು ಹಾಲಿನಲ್ಲಿ ಹಾಕಿಕೊಂಡು ಮೈಕ್ರೋವೇವಿನಲ್ಲಿ ಒಂದು ನಿಮಿಷ ಇಟ್ಟರೆ ಅವರ ಬೆಳಗಿನ ತಿಂಡಿ ರೆಡಿ ! ಇನ್ನು ಕೆಲವರು ಹಾಲಿಗೆ ಮುಸುಕಿನ ಜೋಳದ ಅವಲಕ್ಕಿ ಸುರಿದುಕೊಂಡು ಮೂರೇ ನಿಮಿಷದಲ್ಲಿ ತಿಂದು ಕೆಲಸಕ್ಕೆ ಹೊರಡುತ್ತಾರೆ. 'ನಿಮಗೆ ಬೇಕಾದದ್ದು ಮಾಡಿಕೊಂಡು ತಿನ್ನಿ' ಎಂದು ಅವರು ಹೇಳಿದರೂ ಹಾಗೆ ಮಾಡಲಾಗದೆ ಹೋದವರು ಪರದಾಡುತ್ತಾರೆ ! ಅಲ್ಲಿನವರು ಆಹಾರವನ್ನು ಕ್ಯಾಲೊರಿ ಲೆಕ್ಕದಲ್ಲಿ ತಿನ್ನುವುದು ನೋಡಿ ತಾವೂ ಸಿರಿಯಲ್ಲನ್ನೇ ಆಹಾರವನ್ನಾಗಿ ಮಾಡಿಕೊಂಡು ತಮ್ಮ ಸ್ಥಿತಿಗೆ ಮರುಕಪಟ್ಟುಕೊಳ್ಳಬೇಕಾಗುತ್ತದೆ ! ಸಪ್ಪೆ ಆಹಾರ ಸಂಕಟವಾಗುತ್ತದೆ !

ಪಾಶ್ಚಿಮಾತ್ಯರು ಆಹಾರ ಸೇವಿಸಲು ಫೋರ್ಕ್, ಚಾಕು ಮತ್ತು ಚಮಚಾಗಳನ್ನು ಉಪಯೋಗಿಸುತ್ತಾರೆ. ಅಲ್ಲಿಗೆ ಹೋದ ತಮ್ಮವರಿಗೆ ಅಲ್ಲಿನ ಪದ್ಧತಿಗಳನ್ನು ಸೂಕ್ಷ್ಮವಾಗಿ ತಿಳಿಸುತ್ತಾರೆ. ಹೋಟೆಲುಗಳಿಗೆ ಹೋದರೆ ಹೇಗೆ ತಿನ್ನಬೇಕು, ಫೋರ್ಕ್ ಮತ್ತು ಚಾಕು ಹೇಗೆ ಉಪಯೋಗಿಸಬೇಕು, ಯಾರಾದರೂ ಮಾತಾಡಿಸಿದರೆ 'ಹಾಯ್' ಎನ್ನಬೇಕು, ಅಲ್ಲಿನ ಕಸ ನಿರ್ವಹಣೆ ಹೇಗೆ ಮಾಡುತ್ತಾರೆ ಇತ್ಯಾದಿ. ಆದರೆ ಇವೆಲ್ಲಾ ಒಂದು ದಿನದಲ್ಲಿ ಅಥವಾ ಒಂದು ತಿಂಗಳಲ್ಲಿ ಬರುವಂಥವೇ...? ಬರೀ ಒಂದು ತಿಂಗಳಲ್ಲ, ವರ್ಷವಿದ್ದರೂ ಬರುವುದಿಲ್ಲ !

ಹೋಟೆಲುಗಳಲ್ಲಿ ಫೋರ್ಕ್ ಮತ್ತು ಚಾಕುವನ್ನು ಉಪಯೋಗಿಸುವಾಗ ಹಿಂಸೆಯಾಗುತ್ತದೆ ! ಚಾಕುವಿನಿಂದ ತಿನಿಸು ಕತ್ತರಿಸುವಾಗ ಲಟಲಟ ಎಂದು ಉತ್ಪತ್ತಿಯಾಗುವ ಶಬ್ದಕ್ಕೆ ಹೆದರುತ್ತಾರೆ ! ಆಹಾರವನ್ನು ಫೋರ್ಕಿಗೆ ಚುಚ್ಚಿಕೊಂಡು ಬಾಯಿಗೆ ಹಸ್ತಾಂತರಿಸುವಾಗ ಕೆಲಸಮಯ ಕೆಳಗೆ ಬೀಳುವ ಸಂದರ್ಭಗಳೇ ಹೆಚ್ಚು ! ಆಗ ಮುಖ ಸಿಂಡರಿಸಿಕೊಳ್ಳುವ ತಮ್ಮ ಕರುಳ ಕುಡಿಗಳ ನೋಟ ಅಪರಾಧ ಪ್ರಜ್ಞೆ ಮೂಡಿಸುತ್ತದೆ. ಕೊನೆಗೆ 'ಹೋಗಲಿ, ಕೈಯಲ್ಲೇ ತಿಂದುಬಿಡಿ' ಎಂಬ ಸಂದೇಶ ಬಂದಾಗಲಂತೂ ಇನ್ನಷ್ಟು ಹಿಂಸೆಯಾಗುತ್ತದೆ. 'ನಮಗಿವೆಲ್ಲಾ ಸರಿಬರುವುದಿಲ್ಲ. ನೆಮ್ಮದಿಯಾಗಿ ಮನೆಯಲ್ಲೇ ಮಾಡಿಕೊಂಡು ತಿನ್ನಬಹುದಿತ್ತು' ಎನ್ನುವ ಮಾತು ಗಂಟಲಲ್ಲೇ ಉಳಿಯುತ್ತದೆ.

ಇನ್ನು ವಿದೇಶೀಯರ ಆಹಾರಾಭ್ಯಾಸ ನುಂಗಲಾರದ ತುತ್ತೇ. ಸಸ್ಯಾಹಾರಿಗಳಿಗಂತೂ ಹೊರಗೆ ತಿನ್ನುವುದೆಂದರೆ ಗಾಬರಿಯ ಅಂಶವೇ ! ವಿದೇಶೀಯರ ಆಹಾರದ ಹೆಚ್ಚಿನ ಭಾಗ ಮಾಂಸ, ಮೊಟ್ಟೆ ಮತ್ತು ಮೀನು ! ರೆಸ್ಟೋರಾಂಟ್‌ಗಳ ಮೆನ್ಯುಗಳನ್ನು ನೋಡಿಯೇ ಹೋದವರು ಹೆದರುವುದುಂಟು ! ಸಸ್ಯಾಹಾರದ ತಿನಿಸನ್ನು ಮೆನ್ಯುವಿನಲ್ಲಿ ಭೂತಗನ್ನಡಿ ಹಾಕಿ ಹುಡುಕಬೇಕಾಗುತ್ತದೆ. ಒಂದೋ ಎರಡೋ ಸಸ್ಯಾಹಾರ ತಿನಿಸುಗಳಿದ್ದರೂ ಅವೂ ಬಹುತೇಕ ಸಪ್ಪೆ ! ಅವನ್ನು ತಿನ್ನುವಾಗ ಮಾಂಸಾಹಾರವೇ ಇರಬಹುದೆನ್ನುವ ಅನುಮಾನ ಕಾಡುತ್ತದೆ ! ಇಲ್ಲಿಂದ ಹೋದ ಮಾಂಸಾಹಾರಿಗಳೂ ಸಹ ಅಲ್ಲಿನ ತಿನಿಸುಗಳನ್ನು ಮೆಚ್ಚಲಾರರು. ಕಾರಣ ರುಚಿ. ಹೆಚ್ಚು ಮಸಾಲೆ ಪದಾರ್ಥಗಳಿಲ್ಲದ ವಿದೇಶೀಯರ ಆಹಾರ ಬಹುತೇಕ ಸಪ್ಪೆ !! ಒಂದಿಷ್ಟು ಖಾರವಿದ್ದರೂ ವಿದೇಶೀಯರು ಬಾಯಿಗೆ ಬೆಂಕಿ ಬಿದ್ದಂತೆ ಹೌಹಾರುತ್ತಾರೆ ! 'ಹಾಟ್ ಹಾಟ್' ಎಂದು ಕಣ್ಣಲ್ಲಿ ನೀರು ತುಳುಕಿಸುತ್ತಾರೆ ! ಸಸ್ಯಾಹಾರಿಗಳಿಗೆ ಇಲ್ಲಿ ಸಿಗುವ ತಿನಿಸುಗಳೆಂದರೆ ಬರ್ಗರ್, ಪಿಜ್ಜಾ ಇತ್ಯಾದಿಗಳು. ಎಲ್ಲ ರೀತಿಯ ರೆಸ್ಟೋರಾಂಟುಗಳನ್ನೂ ವಿದೇಶಗಳಲ್ಲಿ ಕಾಣಬಹುದು. ಇಟಾಲಿಯನ್, ಮೆಕ್ಸಿಕನ್, ಮಲೇಶಿಯನ್, ಚೈನೀಸ್ ಅಲ್ಲದೆ ಭಾರತೀಯರ ಹೋಟೆಲುಗಳೂ ಸಿಗುತ್ತವೆ. ಅಲ್ಲಿ ದೋಸೆ, ಇಡ್ಲಿಗಳನ್ನು ಮಾಡುತ್ತಾರಾದರೂ ಅವು ಚೆನ್ನಾಗಿರುವುದಿಲ್ಲ !

ನಮ್ಮ ದೇಶದ ಸಮತೋಲಿತ ಹವಾಮಾನ ಬೇರಾವುದೇ ದೇಶದಲ್ಲಿಯೂ ದೊರೆಯದು ! ಅರಬ್ ದೇಶಗಳಲ್ಲಿ ವಿಪರೀತ ಬಿಸಿಲಾದರೆ, ಉತ್ತರ ಮತ್ತು ಪಶ್ಚಿಮಕ್ಕೆ ಸರಿಯುತ್ತಾ ಚಳಿ ಮತ್ತು ಮಳೆ ಹೆಚ್ಚು ! ಚಳಿಗಾಲದಲ್ಲಿ ಮನೆಯಿಂದ ಆಚೆ ಕಾಲಿಡಲಾಗುವುದಿಲ್ಲ. ಅಂತೆಯೇ ಅರಬ್ ದೇಶಗಳಲ್ಲಿ ಬಿಸಿಲಿಗೆ ಬೆದರಿ ಆಚೆ ಕಾಲಿಡಲಾಗದು. ಇಂಥ ದೇಶಗಳಲ್ಲಿ ಬಿಸಿಲಿಗೆ ಬೆದರಿ ಚಳಿಗೆ ಮುದುಡಬೇಕಾಗುತ್ತದೆ ! ಮಳೆ ಬಂದರೆ ಕೆಲವೊಮ್ಮೆ ಎರಡು ಮೂರು ದಿನ ಒಂದೇ ಸಮ ಸುರಿಯುತ್ತದೆ. ಕೆಲವು ಕಡೆಗಳಲ್ಲಿ ಮಂಜು ಬೀಳುತ್ತದೆ ! ಆ ಮಂಜಿನ ಜೊತೆಗೆ ಬೀಸುವ ಗಾಳಿಗೆ ಇಲ್ಲಿಂದ ಹೋದವರು ಗಡಗಡಿಸಬೇಕಾಗುತ್ತದೆ ! ಎಲ್ಲಿಗಾದರೂ ಹೋಗಬೇಕೆಂದರೂ ಕಾರು ಬೇಕು ! ಕಾರಿಲ್ಲದೆ ಇಲ್ಲಿ ಜೀವನವೇ ಇಲ್ಲ ! ಕಾರು ಇಲ್ಲಿನವರ ಎರಡನೆಯ ಮನೆಯಂತೆ ! ಕಾರುಗಳು ಗಾತ್ರದಲ್ಲಿಯೂ ಮತ್ತು ಅನುಕೂಲಗಳಲ್ಲಿಯೂ ದೊಡ್ಡವು. ಹವಾನಿಯಂತ್ರಿತ ವ್ಯವಸ್ಥೆ ಈ ಕಾರುಗಳಲ್ಲಿ ಸರ್ವೇಸಾಮಾನ್ಯ ! ಪೆಟ್ರೋಲು ವಿದೇಶಗಳಲ್ಲಿ ಅಗ್ಗ ! ಇಲ್ಲಿ ಕಾರೇ ಸಗ್ಗ !

ನಮ್ಮ ಜೀವನಕ್ರಮದಲ್ಲಿ ಬೆಳಗಾಗುತ್ತಲೇ ಆಚೆಯ ಬಾಗಿಲಿಗೆ ನೀರು ಹಾಕಿ, ರಂಗೋಲಿ ಇಟ್ಟು ನಂತರ ಮನೆಯೊಳಗೂ ಗುಡಿಸಿ, ಸಾರಿಸಿ ಸ್ನಾನ-ಪೂಜೆಯ ನಂತರ ಆಹಾರ ಸೇವಿಸುವುದು ಸಾಮಾನ್ಯ ! ವಿದೇಶದಲ್ಲಿನ ಜೀವನಕ್ರಮ ತೀರಾ ಭಿನ್ನ ! ಇಲ್ಲಿ ವಾರಕ್ಕೊಮ್ಮೆ ನೆಲವನ್ನು ವ್ಯಾಕ್ಯೂಮ್ ಮಾಡುತ್ತಾರೆ ! ನೆಲಕ್ಕೆ ನೀರು ಹನಿಸುವುದು ಸಾಧ್ಯವೇ ಇಲ್ಲ. ಕಾರಣ ಕಾರ್ಪೆಟ್ಟು ಮತ್ತು ಮರದ ನೆಲ !! ಆಚೆ ಬಾಗಿಲಿಗೆ ನೀರು ಹಾಕುವುದಂತೂ ದೂರವೇ ಉಳಿಯಿತು ! ನೀರಿನಿಂದ ಮನೆಯನ್ನು ತೊಳೆಯದಿದ್ದರೆ ಮನೆ ಚೊಕ್ಕಟವಾಯಿತೆನ್ನುವ ನಂಬಿಕೆ ಬರದೆ ಅಲ್ಲಿಗೆ ಹೋದವರು ಪರಿತಪಿಸುತ್ತಾರೆ ! ಅಲ್ಲಿಗೆ ಹೋದವರನ್ನು ಇಂಥ ಜೀವನಕ್ರಮಗಳು ಚಕಿತಗೊಳಿಸುತ್ತವೆ ! 'ಎಲಾ...? ಹೀಗೂ ಉಂಟೆ ?' ಎನ್ನುವ ಉದ್ಗಾರವನ್ನು ಅಡಿಗಡಿಗೆ ಹೊರಡಿಸಬೇಕಾಗುತ್ತದೆ.

ಒಟ್ಟಿನಲ್ಲಿ, ವಿದೇಶಗಳಿಗೆ ಹೋಗಿಬಂದ ವಯಸ್ಸಾದವರು ವಾಪಸ್ಸು ಬಂದೊಡನೆಯೇ ನೆಮ್ಮದಿಯ ನಿಟ್ಟುಸಿರುಬಿಡುತ್ತಾರೆ ! ಅಷ್ಟಲ್ಲದೆ ಪಂಪ ಬರೆದನೇ 'ಆರಂಕುಶಮಿಟ್ಟೊಡಂ ನೆನೆವುದೆನ್ನ ಮನಂ ಬನವಾಸಿ ದೇಶಮಂ' ಎಂದು !?

**ಎಸ್. ಜಿ. ಶಿವಶಂಕರ್**
ನಂ. ೫೧೭೭, 'ಶಿವಲತ', ಎಚ್. ಟಿ. ಜೋಡಿ ರಸ್ತೆ
ವಿಜಯನಗರ ೨ನೇ ಹಂತ, ಮೈಸೂರು – ೫೭೦ ೦೧೭

ನಾನು ಓದಿದ ಪುಸ್ತಕ

# ಓದಿರಿ

ಪ್ರವಾದಿ ಮುಹಮ್ಮದರ ಜೀವನಾಧಾರಿತ
ಮೊತ್ತಮೊದಲ ಐತಿಹಾಸಿಕ ಕಾದಂಬರಿ

ಓದಿರಿ



ಬೊಳುವಾರು ಮಹಮದ್ ಕುಂಞಿ

ಲೇಖಕರು : **ಬೊಳುವಾರು ಮಹಮದ್ ಕುಂಞಿ**
ಪುಟಗಳು : ೩೦೨    ಬೆಲೆ : **ರೂ. ೨೨೦/-**
ಪ್ರಕಾಶಕರು : **ಮುತ್ತುಪಾಡಿ ಪುಸ್ತಕ**
'ಮೋನು' # ಬಿ-೪-೦೧೬
ಕಾವೇರಿ ಬಡಾವಣೆ, ನ್ಯಾಷನಲ್ ಗೇಮ್ಸ್ ವಿಲೇಜ್
ಕೋರಮಂಗಲ, ಬೆಂಗಳೂರು - ೫೬೦೦೪೭

**ಬೊ**ಳುವಾರು ಅವರ 'ಸ್ವಾತಂತ್ರ್ಯದ ಓಟ' ಕಾದಂಬರಿಗೆ 'ಓದಿರಿ' ಎಂಬ ಅವರ ಕಾದಂಬರಿಗೆ ಹೋಲಿಸಿದರೆ ಇದು ೧/೩ ಭಾಗಕ್ಕಿಂತ ಕಡಿಮೆ ಗಾತ್ರದ್ದು. ಸುಮಾರು ೩೦೦ ಪುಟಗಳ ಆಕಾರದ್ದು. ಪ್ರವಾದಿ ಮುಹಮ್ಮದರ ಜೀವನಾಧಾರಿತ ಮೊತ್ತಮೊದಲ ಐತಿಹಾಸಿಕ ಕಾದಂಬರಿ ಇದೆಂದು ಅವರೇ ಹೇಳಿದ್ದಾರೆ. 'ಸ್ವಾತಂತ್ರ್ಯದ ಓಟ' ಕಾದಂಬರಿಕಾರರಿಗೆ ಸೃಜನಾತ್ಮಕ ಓಟ ಒದಗಿಸಿದರೆ 'ಓದಿರಿ' ಇಸ್ಲಾಂ ಮತದ ಚರಿತ್ರೆಯ ಸತ್ಯ ಘಟನೆಗಳನ್ನು ಸೃಜಿಸುತ್ತದೆ. 'ಯಾವುದೇ ಒಂದು ಧರ್ಮವನ್ನು ಅಥವಾ ಧರ್ಮಗ್ರಂಥವನ್ನು ಸಮರ್ಥಿಸುವ ಅಥವಾ ವಿರೋಧಿಸುವ ಮೊದಲು, ಕನಿಷ್ಠ ಒಂದು ಬಾರಿಯಾದರೂ ಓದಿಕೊಳ್ಳುವುದು ಒಳಿತು ಎಂಬುದು ನನ್ನ ನಂಬಿಕೆ. ಹೀಗೆ ಓದಿಕೊಂಡು ಅಲ್ಪಸ್ವಲ್ಪವಾದರೂ ಪರಸ್ಪರ ಪರಿಚಿತರಾದರೆ ನಮ್ಮೊಲ್ಲರ ಸಣ್ಣಪುಟ್ಟ ದೋಷಗಳು ಅಲ್ಪಸ್ವಲ್ಪವಾದರೂ ಮನ್ನಿಸಲ್ಪಡಬಹುದೇನೋ ಎಂಬುದು ನನ್ನ ಆಸೆ' ಎಂದು ಕೃತಿಕಾರರು ಪ್ರಸ್ತಾವನೆಯಲ್ಲಿ ಹೇಳುತ್ತಾರೆ. ಇದು ವರ್ತಮಾನ ಭಾರತದಲ್ಲಿ ಅಲ್ಪಸಂಖ್ಯಾತರು ಮಾಡುವ ಕೋರಿಕೆ ಬಹುಸಂಖ್ಯಾತರಿಗೆ ಇರಬೇಕಾದ ಘನತೆ. 'ಸಿರಿಯಾ' ಕಾದಂಬರಿ ನಡೆದ ಚಾರಿತ್ರಿಕ ಸ್ಥಳ. ಅದೇ ಸ್ಥಳವೀಗ ಜಗತ್ತಿನ ನಡುವೆ ಇರುವ ಒಂದು ಬಾಂಬಿನಂತೆ ಕಾಣುತ್ತಿದೆ. ಅಲ್ಲಿನ ಪ್ರಜೆಗಳು ದೇಶಬಿಟ್ಟು ಅಕ್ಕಪಕ್ಕದ ದೇಶಗಳಿಗೆ ಜೀವನ್ಮರಣ ಲೆಕ್ಕಿಸದೆ ನಿರಾಶ್ರಿತರಾಗಿ ನುಗ್ಗುತ್ತಿದ್ದಾರೆ. ಬ್ರಿಟನ್, ಫ್ರಾನ್ಸ್, ಅಮೆರಿಕಾ ಎಲ್ಲವೂ ಅಲ್ಲಿನ ಮತಾಂಧರ ನಿರ್ಮೂಲಕ್ಕೆ ತುದಿಗಾಲ ಮೇಲೆ ನಿಂತಿವೆ. ಮುಹಮ್ಮದರು ಸಾರಿದ ಸಂದೇಶವೇನು ? ಮುಂದೆ ಏನಾಗಿ ಹೋಯಿತು ? ಜಗವು ಧರ್ಮವೊಂದಕ್ಕೆ ಯಾಕಿಷ್ಟು ತಲ್ಲಣಿಸುತ್ತಿದೆ ? ಧರ್ಮವೆಂದರೆ ಮನುಷ್ಯನನ್ನು ತಿದ್ದಿ ತೀಡುವ ಒಂದು ಬಗೆಯಲ್ಲವೆ ? ಈ ಎಲ್ಲದಕ್ಕೂ ಈ ಕಾದಂಬರಿಯಲ್ಲಿ ಉತ್ತರ ಸಿಗಬಹುದೆಂದು ಆಲೋಚಿಸುತ್ತಾ ಹೋದಾಗ ಅಲ್ಲಿರುವ ಬೀಜಗಳಲ್ಲಿನ ಚರಿತ್ರೆಗೆ ಈಗ ಒಂದೂವರೆ ಸಾವಿರ ವರ್ಷಗಳು ಕಳೆದುಹೋಗಿವೆ. ಕಾದಂಬರಿ ಪ್ರಾರಂಭವಾಗುವುದು 'ಹಿರಾ' ಎಂಬ ಗುಹೆಯೊಳಗೆ ಧ್ಯಾನಿಸುವಾಗ ನುಡಿದ ಕಂಚಿನ ಕಂಠದ ಧ್ವನಿ 'ಓದಿರಿ' ಎಂದಾಗ 'ನನಗೆ ಓದಲು ತಿಳಿಯದು' ಎಂಬುದು ನಲ್ವತ್ತು ವರ್ಷದ ಮುಹಮ್ಮದರ ನುಡಿ. ಮುಹಮ್ಮದರ ದೊಡ್ಡಪ್ಪ ಅಬೂತಾಲಿಬರೊಡನೆ ಮೆಕ್ಕಾದಿಂದ ಯಸ್ರಿಬ್ ದಾರಿಯಲ್ಲಿ ಸಿರಿಯಾ ದೇಶಕ್ಕೆ ಸರಕು ಸಾಗಿಸುವ ಮರಳುಗಾಡಿನ ದಾರಿಯ ಬದುಕು ಮುಹಮ್ಮದರದು. ಹುಟ್ಟುವ ಮೊದಲೇ ತಂದೆಯನ್ನು, ಎಂಟು ವರ್ಷ ತುಂಬುವ ಮುನ್ನವೇ ತಾಯಿಯನ್ನು ಕಳೆದುಕೊಂಡ ನಿರ್ಗತಿಕ ಅನಕ್ಷರಸ್ಥ ಬಾಲಕ ಮುಹಮ್ಮದನಿಗೆ ದೊಡ್ಡಪ್ಪನೇ ಆಧಾರ ಹಾಗೂ ದಾರಿತೋರಿಸುವ ಮಾರ್ಗದರ್ಶಕನಾಗಿ ಇಡೀ ಕಾದಂಬರಿ ಕಟ್ಟಿಕೊಡುತ್ತದೆ. ಕಾದಂಬರಿಕಾರರು ಈ ಕೃತಿಯನ್ನು ಬರೆಯುವಾಗ ಜನ ಸ್ವೀಕರಿಸುತ್ತಾರೆಯೆ ಎಂಬ ಅಳುಕಿರುತ್ತದೆ. ಕುರ್-ಆನ್ ಬಗ್ಗೆ ೧೯೭೮ರವರೆಗೆ ಕನ್ನಡ ಆವೃತ್ತಿಯೇ ಇರಲಿಲ್ಲವೆಂದು ತಿಳಿಸುತ್ತಾರೆ. 'ಸ್ವಲ್ಲಲ್ಲಾಹು ಅಲೈಹಿವಸಲ್ಲಮ್' ಎಂದು ಪ್ರವಾದಿ ಮುಹಮ್ಮದ್ ಬಗ್ಗೆ ಹೇಳುವಾಗಲೆಲ್ಲಾ ಹೇಳಲೇಬೇಕೆಂಬುದನ್ನು ಕುರ್-ಆನ್ ಬಗೆಯ ನಂಬಿಕೆ. ಇದು ಬಿಟ್ಟರೂ ಸೂಕ್ಷ್ಮತೆಗೆ ಧಕ್ಕೆ ಬರದಂತೆ ಬಗೆಹರಿಸಿಕೊಂಡಿದ್ದೇನೆಂದು ಕಾದಂಬರಿಕಾರರು ಹೇಳುತ್ತಾರೆ.

ಅಂತೂ ಧಾರ್ಮಿಕ ಭಯ ಮತ್ತು ಮುಹಮ್ಮದರ ಒಳಿತುಗಳನ್ನು ಹೇಳುವ ತವಕದ ನಡುವೆ ಒಂದು ಸೇತುವೆ ನಿರ್ಮಾಣ ಮಾಡಿಕೊಂಡು ಬರೆದ ಈ ಕಾದಂಬರಿ ವರ್ಷ ತುಂಬುವುದರೊಳಗೆ ಮೂರು ಪ್ರಕಟಣೆಯಾಗಿ ಮುಂದಕ್ಕೆ ಸಾಗುತ್ತಿದೆ. ಇದು ಕನಿಷ್ಠ ಒಂದು ಬಾರಿಯಾದರೂ ಓದದೆ ಮಾತನಾಡ ಬಾರದೆಂಬ ಅಭಿಪ್ರಾಯದ ಮನ್ನಣೆಯದು. ಬೊಳುವಾರು ಬೆಳೆದ ವಾತಾವರಣ ಸನಾತನ ಭಾರತ. 'ಭರತ ವರ್ಷವು ಇತಿಹಾಸ ಕಾಲದಿಂದಲೂ ನಾನಾ ಜನಾಂಗಗಳ ನಾಗರಿಕತೆಗಳು ಮತ್ತು ಸಭ್ಯತೆಗಳ ಸುಂದರ ಸಮನ್ವಯ ಮಂದಿರವಾಗಿದೆ... ಭಾರತೀಯ ಸಂಸ್ಕೃತಿ ಇಸ್ಲಾಂ ಸಂಸ್ಕೃತಿಯ ಮಾನ್ಯಾಂಶವನ್ನು ಬಿಚ್ಚೆದೆಯಿಂದ ಮೈಗೂಡಿಸಿ ಕೊಂಡರೂ, ಅದಕ್ಕೆ ಮಣಿಯದೆ, ಅದಕ್ಕೂ ಭಾರತೀಕರಣದ ಮುದ್ರೆಯೊತ್ತಿತ್ತು. (ಪು. ೭೬೯ ಕುವೆಂಪು ಸಮಗ್ರ ಗದ್ಯಭಾಗ (೨) ಈ ಮಾತು ಬಿ. ಎಂ. ಶ್ರೀಯವರು ಮಹಮದ್ ಅಬ್ಬಾಸ್ ಶೂಸ್ತ್ರಿ ಅವರ 'ಇಸ್ಲಾಂ ಸಂಸ್ಕೃತಿ' ಎಂಬ ಪುಸ್ತಕವನ್ನು ಕನ್ನಡದಲ್ಲಿ ಬರೆದಾಗ ಕುವೆಂಪು ಬರೆದ ಮುನ್ನುಡಿಯದು. ಅಂದರೆ ಬೊಳುವಾರು ಅವರ ಈಗಿನ ಭಾರತವು 'ಓದಿರಿ' ಕಾದಂಬರಿಯನ್ನು ಹಾಗೂ 'ಸ್ವಾತಂತ್ರ್ಯದ ಓಟ' ಕಾದಂಬರಿಯನ್ನು ಓದಿ ಈಗಿನ 'ಅಸಹಿಷ್ಣುತೆ' ಎಂಬ ವರ್ತಮಾನಕ್ಕೆ ಸ್ಪಂದಿಸುತ್ತದೆಯೇ ! ಹಾಗಾದರೆ ಸಾರ್ಥಕ. ಇದು ಅಸಂತೋಷವೇ ಅಗ್ನಿ. ಹೀನ ಅಸೂಯಾದಿ ಭಾವದ ಮತ್ಸರಾಗ್ನಿಯು ಪಾತಕಾಗ್ನಿಯಲ್ಲ; 'ಚಿತೆ' (ಪು. ೧೨೬. ಶಂಬಾ ಸಂ. ೬). ಈ ಚಿಂತನೆಯ ಶಂಬಾ ಜೋಷಿಯವರ ನುಡಿಯ ಆತಂಕಕ್ಕೆ ಬೇಕಾದ ಸಾರ್ವತ್ರಿಕ ಸತ್ಯ. ಬೊಳುವಾರು ಭಾರತೀಯ ಪುರಾಣ ಕಾವ್ಯ ಜಾನಪದ ಯಕ್ಷಗಾನ ದೇವರು ದಿಂಡರೊಳಗೆ ಬೆಳೆದವರು. ಇಸ್ಲಾಂ ಧರ್ಮವೆಂಬುದು

'ಕಳವು ಮಾಡದಿರಿ, ಕೊಲೆ ಮಾಡದಿರಿ, ಸುಳ್ಳು ಹೇಳದಿರಿ, ಸಿಟ್ಟು ಮಾಡದಿರಿ, ಎದುರು ವಾದಿಸದಿರಿ, ತಾವೇ ಶ್ರೇಷ್ಠರೆಂದು ಹೆಮ್ಮೆ ಪಡದಿರಿ, ಬೇರೆಯವರ ಬಗ್ಗೆ ಅಸಹ್ಯ ಪಡದಿರಿ, ಬಹುದೇವ ವಿಶ್ವಾಸ ಮಾಡದಿರಿ ಎಂದರು. ದೇವನು ಒಬ್ಬನೇ ಎಂದರು. (ಪು. ೧೧೪) ಈ ತಿಳವು ಜಗದ ಸತ್ಯ ವಿಚಾರಗಳು. ಇವೇ ಬಸವಣ್ಣನ ನುಡಿಗಳು. ಏಸುವಿರಲಿ, ಮಹಮದನಿರಲಿ, ಬಸವನಿರಲಿ, ಎಲ್ಲರೂ ಈ ತಳಹದಿಯವರೇ ಹೌದು. ಹಿಂದೂ ಸನಾತನ ಧರ್ಮದೊಳಗೆ ನಿಂತು ಮಾತನಾಡುವ ಗಾಂಧಿ ಕೂಡ ಬಹುದೇವರೊಳಗೆ ದೇವರೊಬ್ಬನನ್ನು ಹುಡುಕಿದ ಸಂತ. ಇದೇ ತಿಳಿವಿನ ಮಹತ್ವ . ಇದೇ ಇಸ್ಲಾಂ ತತ್ವ . ಇದೇ ಭಾರತೀಯ ತತ್ವ . ಇದೇ ಜಗದ ತತ್ವ .

**ಡಾ॥ ರಾಜೇಗೌಡ ಹೊಸಹಳ್ಳಿ**

ಭಾರತದೊಳಗೆ ಭಾರತದಾಚೆಯ ಚಹರೆಯಾಗಿ ಉಳಿದಿಲ್ಲ. ಹಾಗಾಗಿ 'ಓದಿರಿ' ಕಾದಂಬರಿ ಕೂಡ ಭಾರತದಾಚೆಯ ಇಸ್ಲಾಂದೊಡನೆ ಮಿಲನವಾದಂತೆ ಕಾಣದೆ ಭಾರತೀಕರಣಗೊಂಡಿದೆ.

ಇಸ್ಲಾಂ ಎಂಬ ಶಬ್ದಕ್ಕೆ ಅರ್ಥವು ಆತ್ಮ ಸಮರ್ಪಣೆ. ಅಲ್ಲಾಹುನ ಆಜ್ಞೆಗೆ ತಲೆಬಾಗುವುದು. ಔರಂಗಜೇಬನು ಈ ಆಜ್ಞೆಗೆ ತಲೆಬಾಗಿದಂತೆ ಮಾಡುತ್ತಲೇ ಅಧಿಕಾರದ ಮದದಲ್ಲಿ ಸಹೋದರರನ್ನು ಕೊಂದು ತನ್ನಪ್ಪ ಮತ್ತು ಸಹೋದರಿಯನ್ನು ಆಗ್ರಾದ ಸೆರೆಯಲ್ಲಿಟ್ಟನು. ಈ ಚಕ್ರವರ್ತಿಗೆ ಇಸ್ಲಾಂ ಮತದ ಸಂತ ಸರ್‌ಮದ್ ಷಹೀದ್ ತಲೆಬಾಗಲಿಲ್ಲ. ಚಕ್ರವರ್ತಿಯ ಸಹೋದರ ದಾರಾ ಶಿಕೋ ಇಸ್ಲಾಮಿಕ್ ಈ ಅಧ್ಯಾತ್ಮ ಪುರುಷನ ಸ್ನೇಹಿತನಾಗಿ ಅವನ ಕೊಲೆಗೆ ಪ್ರತಿಭಟಿಸುತ್ತಾನೆ. ಪ್ರತಿಭಟನೆಯ ಸಂಕೇತವಾಗಿ ನಗ್ನ ಸನ್ಯಾಸಿಯಾಗಿ ತಿರುಗಾಡುತ್ತಾನೆ. ಸೈತಾನನ ರಾಜ್ಯದಲ್ಲಿ ನಾನಿರುವುದೇ ಹೀಗೆ ಎನ್ನುತ್ತಾನೆ. ಚಕ್ರವರ್ತಿಯಿಂದ ಆತನ ಕೊಲೆ ಯಾಗುವಾಗ ೧೬೬೧ರಲ್ಲಿ ಈತ ಕುಣಿಯುತ್ತಲೇ ಹುತಾತ್ಮನಾಗುತ್ತಾನೆ. ದೆಹಲಿಯ ಜುಮ್ಮಾ ಮಸೀದಿ ಎದುರಿಗೆ ಈ ಸಂತನ ದರ್ಗ ಇದೆ (ನೋಡಿ : ಸೂಫಿ ಸಂತರು, ಮಹಮ್ಮದ್ ಕಟ್ಪಾಡಿ). ಅಂದರೆ ಏನಾಯಿತು ? ಧರ್ಮವೆಂಬುದು ಮನುಷ್ಯರನ್ನು ತಿದ್ದಬೇಕು. ಇಲ್ಲದಿದ್ದರೆ ಸಾಮಾನ್ಯರಾಗಲೀ ಚಕ್ರವರ್ತಿಯಾಗಲೀ ಜನಸಂಪನ್ಮೂಲ ಮೌಲ್ಯವಾದ ಸಮಾಜ ಪ್ರತಿನಿಧಿಸುವ ಧಾರ್ಮಿಕ ಸಂತರಿಂದ ತಿರಸ್ಕಾರಕ್ಕೊಳಗಾಗುತ್ತಾರೆ. ಈ ಮಾತು ಎಲ್ಲ ಧರ್ಮಕ್ಕೂ ಅನ್ವಯಿಸುತ್ತದೆ.

'ಮುಹಮ್ಮದರ ದೊಡ್ಡಪ್ಪ ಅಬೂತಾಲಿಬರು ಬುಸ್ರಾ ಎಂಬ ಮಾರುಕಟ್ಟೆಗೆ ಮುಹಮ್ಮದನನ್ನು ಕರೆದುಕೊಂಡು ಬಂದಿದ್ದರು. ವ್ಯಾಪಾರ ಅವರ ವೃತ್ತಿ. 'ಕೆಲವು ವರ್ಷಗಳಿಂದ ಮನೆತನದ ಆಡು ಮೇಯಿಸುವ ಕೆಲಸಗಳನ್ನು ನಿಷ್ಠೆಯಿಂದ ಮಾಡುತ್ತಿದ್ದ ಹುಡುಗ ಎಲ್ಲರಂತಿರಲಿಲ್ಲ. ಅನಗತ್ಯವಾಗಿ ಮಾತನ್ನೂ ಆಡುತ್ತಿರಲಿಲ್ಲ. ಹಿರಿಯರ ಜೊತೆ ಅನಗತ್ಯವಾಗಿ ವಾದ ಮಾಡುತ್ತಿರಲಿಲ್ಲ. ಅಪ್ರಾಮಾಣಿಕತೆ ಎಂಬುದು ಇಲ್ಲವೇ ಇಲ್ಲ.' (ಪು. ೨೩ ಓದಿರಿ) ಹೀಗೆ ಮುಹಮ್ಮದ್ ಬಗ್ಗೆಯ ವ್ಯಕ್ತಿತ್ವದ ಅತಿಮಾನುಷ ಭಾವನಾತ್ಮಕ, ಗುಣಾತ್ಮಕ ಮೌಲ್ಯ ಕಟ್ಟಿಕೊಡುವ ಈ ಕಾದಂಬರಿಯಲ್ಲಿ ಮೂರು ಭಾಗಗಳಿವೆ. 'ಅಂತರಂಗ' ಇದರ ಮೊದಲ ಭಾಗ. ಕ್ರಿ. ಶ. ೦೫೭೦–೦೬೧೨ರವರೆಗೆ ಇತಿಹಾಸದೊಳಗಿನ ಚಾರಿತ್ರಿಕ ಸಂಗತಿಯೊಳಗೆ ಹೆಣೆದದ್ದು.

ಈ ಬಾಲಕ ಕುರೈಶ್ ವಂಶದ ಕುಡಿ. ಈತನು ಸಾಮಾನ್ಯ ಬಾಲಕನಲ್ಲವೆಂದು ಗುರುತಿಸಿದ್ದ ವೃದ್ಧ. ಕ್ರೈಸ್ತ ಮಹಾತ್ಮರು ಔತಣ ಕೂಟಕ್ಕೆ ಈ ವ್ಯಾಪಾರಿಗಳನ್ನು ಬರಮಾಡಿಕೊಳ್ಳುವಾಗ, "ಆ ಬಾಲಕನೆಲ್ಲಿ ?" ಎಂದು ಕೇಳುತ್ತಾರೆ : 'ಅವನು ಸಾಮಾನ್ಯ ಬಾಲಕನಲ್ಲ. ನನಗವನನ್ನು ಹತ್ತಿರದಿಂದ ನೋಡಬೇಕು' ಆದೇಶದಂತಿತ್ತು ಅವರ ಮಾತು (ಪು. ೨೫). ಕಾದಂಬರಿ ಇತಿಹಾಸದತ್ತ ಗಮನವಿರಿಸಿದೆ. ಈಗಾಗಲೇ ಐದು ಶತಮಾನ ಕಳೆದುಹೋಗಿರುವ ಕ್ರೈಸ್ತ ಧರ್ಮದ ಮಹತ್ವವನ್ನು ಅದರೊಳಗಿನ ಸಾಧು ಸಂತ ಹಿರಿಯರನ್ನು ಗಮನಿಸಿದೆ. ಮರಳುಗಾಡಿನ ಬಂಧು ಸಮಾಜಗಳ ಬರ್ಬರತೆಯ ನಡುವೆ ಮನುಷ್ಯನಿಗೆ ಬೇಕಾದ ನೆಮ್ಮದಿಯನ್ನು ಹರಸಲು ಮುಹಮ್ಮದರು ಬೇಕಾಗಿದ್ದಾರೆಂಬ ಕ್ರೈಸ್ತ ಪಾದ್ರಿಯ ಬಯಕೆಯೋ ಎಂಬಂತೆ ಚರಿತ್ರೆಯ ನಿಲುವು ತಾಳುತ್ತದೆ. ಬಾಲಕ ಮುಹಮ್ಮದ್ ಬರುವಾಗ ಒಂಟೆಯ ಹೆಜ್ಜೆಗೆ ಖರ್ಜೂರ ಗಿಡಗಳು ಚಾಮರ ಬೀಸುತ್ತಿವೆ. ಭೂಮಂಡಲವನ್ನು ಬೆಳಗುವೆನೆಂದು ಬಂಗಾರದ ಚೆಂಡು ಮೆದುವಾಗಿ ಉರಿಯುತ್ತಿದೆ. ಬೆಳದಿಂಗಳ ಬಟ್ಟಲೊಂದು ತಂಪಾಗಿ ಸವಾರಿ ಮಾಡುತ್ತಿರುವಂತೆ ಆ ಪುಟ್ಟ ಬಾಲಕ ಕಾಣುತ್ತಿದ್ದಾನೆ. ಆಗ ಆ ಮರುಭೂಮಿಯೊಳಗಿನ ಬದುಕು ಹೇಗಿತ್ತು ? 'ತಮ್ಮ ಹೆಂಡಂದಿರ ಮೊಲೆಹಾಲನ್ನು ತಮ್ಮದೇ ಮಗು ಕುಡಿಯುವುದು ಕೂಡ ಪ್ರತಿಷ್ಠೆಗೆ ಕುಂದು ಎಂದು ಭಾವಿಸಿರುವ ಗಂಡು ಸರದಾರರುಗಳು. ಅವರ ಮನೆತನದವರು ಬಲು ಹಿಂದಿನಿಂದಲೂ ಪಾಲಿಸಿಕೊಂಡು ಬಂದಿರುವ ಕಡ್ಡಾಯ ಸಂಪ್ರದಾಯ' (ಪು. ೩೦). ಇದನ್ನು ಮುರಿಯುವ ಧೈರ್ಯ ತಾಯಿ ಆಮಿನಾಳಿಗೆ ಇರಲಿಲ್ಲ. ಆಕೆಯ ಪತಿ ಅಬ್ದುಲ್ಲಾ ತೀರಿಕೊಂಡಾಗಿತ್ತು. ಕಡುಬಡತನ. ಇದ್ದ ಆಸ್ತಿ ಹದಿನಾರು ಆಡು, ಎರಡು ಒಂಟೆಗಳು ಮಾತ್ರ. ದಾಸಿ ಸೌಬಿಯಾ ಮುಹಮ್ಮದರಿಗೆ ಹಾಲು ಕುಡಿಸಿದಾಕೆ. ಅಂದು ಜನನ ದಿನ 'ಕಅಬಾ ಮಂದಿರದ ಒಳಗೆ ಮಲಗಿರುವ ಮುನ್ನೂರ ಅರವತ್ತು ವಿಗ್ರಹಗಳೂ ಬೆಚ್ಚಿಬಿದ್ದು ಎಚ್ಚರವಾಗುವಷ್ಟು ಗಟ್ಟಿಯಾಗಿ ಘೋಷಿಸುತ್ತವೆ: 'ಅಮ್ಮ ಹುಣ್ಣಿಮೆಯ ಚಂದ್ರನಂತಹ ಮುಖದ ಗಂಡುಮಗುವನ್ನು ಹೆತ್ತಿರುವರು' (ಪು. ೩೭). ಈ ಜನನ ಮಾದರಿ ಅತಿಮಾನುಷ ಅತಿ ನಿರೀಕ್ಷಿತ ಕಾದಂಬರಿ ಅರಿವು.

ಚರಿತ್ರೆಯ ಪ್ರಕಾರ ಮುಹಮ್ಮದರ ತಂದೆ ಅಬ್ದುಲ್ ಮುತಾಲಿಬರಿಗೆ ೧೨ ಜನ ಗಂಡುಮಕ್ಕಳು, ೬ ಜನ ಹೆಣ್ಣುಮಕ್ಕಳು. ಅವರಲ್ಲಿ ಒಬ್ಬಾತ ಮುಹಮ್ಮದ್. ೨೫ ವರ್ಷದ ಮುಹಮ್ಮದರಿಗೆ ಗಾಂಭೀರ್ಯಕ್ಕೆ ಒಲಿದಾಕೆ ೪೦ ವರ್ಷದ ವಿಧವೆ ಖದೀಜಾ. ಪತಿಯ ಅಧ್ಯಾತ್ಮಕ್ಕೆ ಒಲಿದು ಸಮಾಜ ಕಾರ್ಯಕ್ಕೆ ನಿಂತಾಕೆ. ಈ ಚಾರಿತ್ರಿಕ ಸಂಗತಿಗಳನ್ನು ಕಾದಂಬರಿಕಾರರು ಬಹು ಗಾಂಭೀರ್ಯದಲ್ಲಿ ಧಾರ್ಮಿಕ ಪುರುಷನ ವ್ಯಕ್ತಿತ್ವಕ್ಕೆ ಯಾವುದೇ ಧಕ್ಕೆ ಬರದಂತೆ ಪೋಣಿಸುತ್ತ ಸಾಗುತ್ತಾರೆ.

ಕಾದಂಬರಿಯು ಚರಿತ್ರೆಯೊಳಗೆ ತನ್ನ ತನುವನ್ನು ಕಟ್ಟಿಕೊಳ್ಳುವಾಗ ಸಾಂಸ್ಕೃತಿಕ ಹಾಗೂ ಸಾಮಾಜಿಕ ಅಂಶಗಳನ್ನು ಗಮನಿಸುತ್ತ ಚರಿತ್ರೆಯೊಳಗೆ ಕಾದಂಬರಿ ಎಂಬ ಮುಹಮ್ಮದ್‌ರ ಕಥನವನ್ನು ಕಟ್ಟಿಕೊಡುತ್ತದೆ. ಸಮಾಜವೆಂದರೆ ನಂಬಿಕೆ ಮತ್ತು ಮೂಢನಂಬಿಕೆಗಳನ್ನು ಕೊಂಡೊಯ್ಯುವಂತಹುದು. ಈ ನಡುವೆ ಧರ್ಮವೆಂಬುದು ಒಳಗೆ ಪ್ರವೇಶಿಸಬೇಕು. ಅದು ಸಮಾಜದ ರೂಢಿ – ಸಂಪ್ರದಾಯಗಳನ್ನು ಮುರಿದು ಆಳುವುದಲ್ಲ. ಒಲಿಸಿ ಪಳಗಿಸುವುದು. ಇತ್ತೀಚಿನ, ಕೇವಲ ಒಂದೆರಡು ಶತಮಾನದ ನಾಗಾಲ್ಯಾಂಡಾಗಲೀ, ಹಿಮಾಲಯ ಸಂಸ್ಕೃತಿ ಯಾಗಲೀ, ಧರ್ಮಕ್ಕೆ ಸೆರೆಯಾಗಿದ್ದು ಹೀಗೆ ಎಂಬುದನ್ನು ಗಮನದಲ್ಲಿ ಇಟ್ಟುಕೊಂಡರೆ ಕಾದಂಬರಿಯ ಬರವಣಿಗೆಯ ದಾರಿ ಕಾಣುತ್ತಾ ಹೋಗುತ್ತದೆ. ವಿಗ್ರಹಾರಾಧನೆಯ ಸಮಾಜವನ್ನು ಕಿತ್ತು ಏಕದೇವೋಪಾಸನೆ, ಅದರಲ್ಲೂ ಕಲ್ಪನೆಯಲ್ಲಿಯೂ ಸಹ ರೂಪವಿಲ್ಲದ ದೇವರನ್ನು ಅಲ್ಲಾಹುನನ್ನು ಕಲ್ಪಿಸಿಕೊಂಡು ಹೋಗುವ ಸಮಾಜ ನಿರ್ಮಾಣದ ಪ್ರಥಮ ಅಸ್ತಿಭಾರವೇ ಇಸ್ಲಾಂ ಧರ್ಮದ ಆಶಯ. ಮುಹಮ್ಮದ್ ಕಡೆಯ ಪ್ರವಾದಿ. ಇಷ್ಟರಲ್ಲಾಗಲೇ ಅನೇಕರು ಬಂದು ಹೋಗಿದ್ದರು. ಇಸ್ಲಾಂ ಧರ್ಮದ ಉದಯಕ್ಕೆ ಒಂದು ರೂಪ ದೊರಕಿದ್ದು ಮುಹಮ್ಮದರಿಂದ ಅಲ್ಲಾಹುನ ಆಣತಿಯ ಮೇರೆಗೆ ಎಂಬುದೂ ಹೌದು. ಇಲ್ಲಿ ಯಮನ್ ದೇಶದ ಮಹಾರಾಜ ಅಬ್ರಹಕ್‌ನ ಅರವತ್ತು ಸಾವಿರ ಸೈನ್ಯ ಕಅಬಾ ಮಂದಿರಗಳನ್ನು ಕೆಡವಿ ಹಾಕಲು ಹೊರಟಿರುವ ವಿವರಗಳಿವೆ. ಯಾವ ಆರಾಧನಾಲಯವೂ ಇರಬಾರದು ಎಂಬುದು ಮಹಾರಾಜನ ಉದ್ದೇಶ. ಇದು ಕಾಂದಾಹಾರ್‌ನಲ್ಲಿ ನೆಲಸಮ ಮಾಡಿದ ಬುದ್ಧ ಬಹಿಮಿಯನ್ ಪರ್ವತವನ್ನು ಉರುಳಿಸಿದ್ದನ್ನು ನೆನಪಿಸುವುದುಂಟು. ಧರ್ಮ ಕಾಲ ಕಳೆದಂತೆ ಪಳಗುತ್ತಿರಬೇಕು. ಇಸ್ಲಾಂ ಕೂಡ ಹೊರತಲ್ಲ. ಅದು ಮುಹಮ್ಮದರ ಬದುಕಿನಲ್ಲಿ ಸಂದೇಶದಲ್ಲಿ ಇದ್ದೇ ಇದೆ. ಅಂದಿನ ಮೆಕ್ಕಾ ಮದೀನಾ ಮೂಲದ ಸಮಾಜ ತೀರಾ ಬರ್ಬರ ಸ್ಥಿತಿಯಲ್ಲಿತ್ತು. ಒಂದು ಕಡೆ ಕ್ರೈಸ್ತ ಸಮಾಜ, ಮತ್ತೊಂದು ಕಡೆ ಕಅಬಾ ಮಂದಿರಗಳನ್ನು ನೆಲಸಮ ಮಾಡುವ ಆಳ್ವಿಕೆ ಇದೆಲ್ಲವನ್ನು ಶಮನಗೊಳಿಸುತ್ತಾ ಸರಿದೂಗಿಸುತ್ತಾ ಹೋಗುವ ಪ್ರವಾದಿಯಂತೆ ಮುಹಮ್ಮದ್ ಜೀವನ ರೂಪುಗೊಳ್ಳುತ್ತಿದೆ. 'ಮದ್ಯದಂಗಡಿಗಳಲ್ಲಿ ರಾತ್ರಿ ಹೊತ್ತು ಹಗಲಿಗಿಂತ ಗಿರಾಕಿಗಳು ಜಾಸ್ತಿ. ಅಷ್ಟೇ ಮದ್ಯದಂಗಡಿಯ ಆಸುಪಾಸುಗಳಲ್ಲಿ ಗಿಜಿಗುಟ್ಟುವ ಜೂಜು ಕಟ್ಟೆಗಳಲ್ಲಿ ಪ್ರವಾಸಿಗರ ಸಂಖ್ಯೆಯೇ ಹೆಚ್ಚು. ಅಲ್ಲಿ ಜೂಜಾಟ ಗಳಿಗಿಂತ ಹೊಡೆದಾಟಗಳೇ ಜಾಸ್ತಿ (ಪು. ೪೯). ಹೀಗೆ ಜೂಜು, ಕುಡಿತ, ವೇಶ್ಯೆಗಾರಿಕೆ ಇವೆಲ್ಲದರಿಂದಾಗಿ ಅಲ್ಲಿನ ವ್ಯಾಪಾರಿ ಸಮಾಜದಲ್ಲಿ ಬದುಕು ಹದ್ದುಬಸ್ತಿನಲ್ಲಿಲ್ಲದ ಮೂರಾಬಟ್ಟೆಯಾಗಿತ್ತು. ಅದರೊಳಗೆ ಗೋಷ್ಠಿಗಳು, ಕಾವ್ಯಾಸ್ವಾಧನೆಗಳು, ಕೊಲೆ ಸುಲಿಗೆಗಳು ಎಲ್ಲವೂ ಇದ್ದವು. ಮರಳುಗಾಡಿನ ನರ್ತನ, ಅರೆಬೆತ್ತಲೆ ಕುಣಿತಗಳೆಲ್ಲವೂ ಇದ್ದವು. ಹಲವರು ಯಹೂದಿ ಧರ್ಮವನ್ನು, ಹಲವರು ಕ್ರೈಸ್ತ ಧರ್ಮವನ್ನು ನಂಬಿಕೊಂಡಿದ್ದರು. ಈ ನಡುವೆ ಇಸ್ಲಾಂ ಧರ್ಮ ತಳವೂರಲು ಸಮಾಜವನ್ನು ಸತ್ಯದ ಕಡೆಗೆ ಒಲಿಸಿಕೊಳ್ಳಲು ಮುಹಮ್ಮದ್ ಮೂಲಕ ಬೇರು ಬಿಡಲಾರಂಭಿಸಿದ ವಿಚಾರಗಳನ್ನು ಕಾದಂಬರಿ ಕಟ್ಟಿಕೊಳ್ಳುತ್ತದೆ. ವ್ಯಾಪಾರದ ಬಿಡುವಿನ ವೇಳೆ ದೂರದ ಪರ್ವತವೇರಿ, ಏಕಾಗ್ರತೆಯ ಧ್ಯಾನಕ್ಕೆ ಏರಿ ಮುಹಮ್ಮದರು ಜನ ಹೀಗೇಕೆ ಇರುವರು ಎಂದು ಚಿಂತಿಸುತ್ತಾರೆ.

ಓ ಆಕಾಶವೇ ನನ್ನ ಪ್ರಶ್ನೆಗಳಿಗೆ ಉತ್ತರಿಸು.
ಓ ಭೂಮಿಯೇ ನನ್ನ ಪ್ರಶ್ನೆಗಳಿಗೆ ಉತ್ತರಿಸು.
ಓ ಗಾಳಿಯೇ ನನ್ನ ಪ್ರಶ್ನೆಗಳಿಗೆ ಉತ್ತರಿಸು.
ಆಕಾಶ ಯಾಕೆ ಮೇಲಿದೆ ?
ಭೂಮಿ ಯಾಕೆ ಕೆಳಗಿದೆ ? (ಪು. ೬೨)

ಹೀಗೆ ಒಂಟೆಗಳಿಗೆ, ಪಕ್ಷಿಗಳಿಗೆ ಪ್ರತ್ಯೇಕ ದೇವರಿರುವನೇ ಎಂದು ಸತ್ಯ ಅರಸುತ್ತಿದ್ದಾರೆ. ಜಗದೇಕ ಸತ್ಯದೊಡನೆ ಜಗದೇಕ ದೇವರನ್ನು ಹುಡುಕುವುದು ಇದಾಗಿದೆ. ಮೂಲ ಸಮಾಜವೊಂದು ಪ್ರಕೃತಿಯ ಅಚ್ಚರಿಗಳಿಗೆ ಬೆದರಿದ ಮಣಿದ ಒಲಿದ ಒಲಿಸಿಕೊಂಡ ಸಾಮಾಜಿಕ ಕಥನ ಇದಾಗಿದೆ. ಈ ಅರಿವು ನೀಡುವ ಇಂತಹ ಸಂತನಂತಹ ವ್ಯಕ್ತಿಗೆ ಒಲಿದ ವಿಧವೆ ಖದೀಜ ಒಲಿದು ಬರುವ ಸರದಾರರೆಲ್ಲರನ್ನು ತಿರಸ್ಕರಿಸಿದಾಕೆ. ಮದುವಣಗಿತ್ತಿಯಾಗಿ ಖದೀಜ ಮಹಮ್ಮದರನ್ನು ವರಿಸುತ್ತಾಳೆ. ಆಕೆಗಾಗಲೇ ಮಕ್ಕಳಿರುತ್ತವೆ. ದೊಡ್ಡ ಸಾಹುಕಾರಳು. ಮಹಮ್ಮದ್ ಧರ್ಮದಲ್ಲಿ ಈ ರೀತಿಯ ವಿಧವಾ ವಿವಾಹ ಬಹುಪತ್ನಿತ್ವ, ಬಹುಪತಿತ್ವ ವಿವಾಹವು ಸಮಾಜದ ಮನ್ನಣೆ ಪಡೆಯುತ್ತದೆ. ಮದುವೆಯಿಲ್ಲದೆ ಬಾಳಿಗೆ ಅಲ್ಲಿ ಮಹತ್ವವಿಲ್ಲ. 'ನೀನು ಮಾತ್ರವಲ್ಲ ಮಗಳೇ, ಭೂಮಿಯ ಮೇಲಿರುವ ಎಲ್ಲರೂ ನಮ್ಮ ಜೊತೆಯಲ್ಲಿ ಕುಳಿತು ಪ್ರಾರ್ಥಿಸುವ ದಿನ ಬಲುಬೇಗ ಬರಲೆಂದೇ ನಿತ್ಯ ಧ್ಯಾನಿಸುತ್ತಿರುವೆ' (ಪು. ೭೩). ಈ ಮಾತು ಇಸ್ಲಾಂ ಸಮಾಜದ ಸ್ತ್ರೀಯರಿಗೆ ಒದಗಬೇಕಾದ ಮುಹಮ್ಮದರ ಅಭಿಲಾಷೆ. ಕಾದಂಬರಿಯ ಬಯಕೆ ಮಾತ್ರ ಮೂಲಕ್ಕೆ ನೀಡುವ ಗೌರವ. ಖದೀಜಾ ಪೈಗಂಬರ ಮೊದಲ ಶಿಷ್ಯೆ. ಪತಿ ಮಾಡುವ ಕಾಯಕದ ಸೇವಕಿ. ಪತಿಗೆ ಒಲುವು ನೀಡುವ ಪತ್ನಿ.

ಕ್ರಿ. ಶ. ೬೩೨ರಲ್ಲಿನ ಸೋಮವಾರ ಮುಂಜಾವಿನ ವರೆಗೆ, ಅಂದರೆ ೬೩ ವರ್ಷದವರೆಗೆ ಈ ಪ್ರವಾದಿ ಬದುಕಿದ್ದರು. ಏಕದೇವತ್ವ ಇಸ್ಲಾಂ ತಳಹದಿ. ಇದಕ್ಕೆ ತಾಹೀದ್ ಎನ್ನುವರು. ಇಸ್ಲಾಂ ಮೇಲಿನ ನಂಬಿಕೆಗಳಿಗೆ ಇಮಾನ್ ಎನ್ನುವರು. ಹುಟ್ಟು–ಸಾವು ಅಲ್ಲಾಹುನ ಅಧೀನ ಎಂಬುದು ನಂಬಿಕೆ. ಅಲ್ಲಾಹುನ ದೂತರು ಜ್ಯೋತಿಯಿಂದ ಹುಟ್ಟಿದವರು. ಪ್ರತಿಯೊಬ್ಬರೂ ಕುರ್–ಆನ್‌ಅನ್ನು ನಂಬಬೇಕು. ಕಲಿಮಾ ಎಂಬ ಶ್ಲೋಕಗಳನ್ನು ಪಠಿಸಬೇಕು. ಅಲ್ಲಾಹುನೊಂದಿಗೆ ನೇರ ಸಂವಾದವೇ ನಮಾಜು. ವಜಲಾ ಇದು ದೇಹಶುದ್ಧಿಯ ನಂಬಿಕೆಯಲ್ಲಿ ಐದು ಹೊತ್ತಿನ ಪ್ರಾರ್ಥನೆ ನಮಾಜಿನದು; ಪಶ್ಚಿಮ ದಿಕ್ಕು ಅಂದರೆ ಮೆಕ್ಕಾ ಕಡೆಯ ಪ್ರಾರ್ಥನೆ. ರಮಜಾನ್‌ನಲ್ಲಿ ಉಪವಾಸ ವ್ರತ, ಜಕಾತ್ ಅಂದರೆ ದುಡಿದ ಸಂಪತ್ತನ್ನು ದಾನದ ರೀತಿ ವಿನಿಮಯ, ಬರಿಗಾಲಿನಲ್ಲಿ ಹಜ್ ಯಾತ್ರೆ, ಗೋಷಾ ಪದ್ಧತಿ, ಸುಂತಿ, ಹೂಳುವ ಶವಸಂಸ್ಕಾರ ವಿಧಾನಗಳು ಇವೆಲ್ಲವೂ ಇಸ್ಲಾಂ ಧರ್ಮದಲ್ಲಿ ಉಂಟು. ಇಸ್ಲಾಂ ಧರ್ಮವು ಒಂದು ಸಮಾಜದ ಅನೇಕ ವಿಧಾನಗಳನ್ನು, ಕ್ರೈಸ್ತ ಧರ್ಮದ ಅನೇಕ ಕುರುಹುಗಳನ್ನು ಭಾರತದ ಸಂದರ್ಭದಲ್ಲಂತೂ ಹಿಂದೂ ಧರ್ಮದ ಅನೇಕ ಪದ್ಧತಿಗಳನ್ನು... ಹೀಗೆ ವಿಶ್ವದ ಅನೇಕ ವೈವಿಧ್ಯಗಳನ್ನು ತನ್ನೊಳಗೆ ಇರಿಸಿಕೊಂಡಿರುವ ಒಂದು ಧರ್ಮವೆಂದು ತಿಳಿದರೆ ಒಳಿತು. ಅದೇ ಸರ್ವಧರ್ಮ ಅರಿಯುವ ವಿಧಾನ. ಅಂಥ ತಿಳಿವುಗಳು ಕಾದಂಬರಿಯಲ್ಲಿ ಕಂಡುಬರುತ್ತವೆ.

ಕಾದಂಬರಿ ಎರಡನೇ ಭಾಗ 'ಬಹಿರಂಗ' ಕ್ರಿ. ಶ. ೬೧೩ರಿಂದ ೬೩೨ರವರೆಗಿನ ಮುಹಮ್ಮದ್ ಬದುಕಿನೊಡನೆ ಕಥನ ಸಾಗಿಸುತ್ತದೆ. 'ಅಂತಿಮ ಸತ್ಯವನ್ನು ಮರೆತು ಮಿಥ್ಯಧರ್ಮಗಳನ್ನು ನಂಬಿ ಸಿಕ್ಕಸಿಕ್ಕ ಕಲ್ಲು ಮರಗಳನ್ನು ಪೂಜಿಸುತ್ತಾ ಅಡ್ಡಡ್ಡ ನಲುಗುತ್ತಿರುವ ಮೆಕ್ಕಾದ ಜನರನ್ನು ಎಚ್ಚರಿಸುವ ಅಪೂರ್ವ ಅವಕಾಶವನ್ನು ಅಲ್ಲಾಹು ನನಗೆ ಕರುಣಿಸಿರುವನು' (ಪು. ೯೫). ಈ ಮಹಮ್ಮದರ ಮಾತನ್ನು ಕೇಳಿದ ಮುತಾಲಿಬರ ಕಣ್ಣುಗಳಲ್ಲಿ ಆನಂದಭಾಷ್ಪ ಉದುರುತ್ತದೆ. ಈ ನಡುವೆ ಯಹೂದಿಗಳು, ಕ್ರೈಸ್ತರು, ವಿಗ್ರಹಾರಾಧಕರು ಸುಮ್ಮನೆ ಏಕದೇವೋಪಾಸನೆಯನ್ನು ಒಪ್ಪಿಕೊಂಡವರಲ್ಲ.






# ಜಗದ ಸೂಲಗಿತ್ತಿ

ಈಕೆ ನಿರ್ಗತಿಕರ ಭಾಗ್ಯ
ಅವಳ ಹರಿದ ಎಲೆ, ಅಡಿಕೆಯ
ಕೌದಿಯ ತಿತ್ತಿಯಲ್ಲಿ ಅದೆಷ್ಟು ಕಥೆಗಳಿವೆ
ಅದೆಷ್ಟು ಕನಸುಗಳಿವೆ. ಬಾಚಿಕೊಂಡಷ್ಟೂ...

ಇವಳು ಮಮತೆಯನ್ನು ಚೆಲ್ಲುವ ಕಲೆಗಾತಿ
ಅವಳ ಕಂಕುಳಿನಲ್ಲಿ ಬಂತೆ, ದುಬ್ಬಟಿ,
ಗಳಾಸು,
ಗಂಟು ಹೊಡೆದರೆ ಉದುರತ್ತವೆ
ಪೆಪ್ಪರಮೆಂಟು, ಬತಾಸು

ಎಳೆಯ ನಾಲಿಗೆಗಳನ್ನು ತಣಿಸಲು
ಅವಳ ವೀಳ್ಯದ ಖಯಾಲಿಗೆ
ಹಲ್ಲುಗಳು ಕೆಮ್ಮಣ್ಣಿನ ಬಣ್ಣಕ್ಕೆ ತಿರುಗಿ
ಫಳಫಳನೆ ಹೊಳೆಯುತ್ತಿವೆ

ಸೋರೆ ಹೂವಿನಂತೆ ಇಳಿಬಿಟ್ಟ ಉದ್ದ ಜಡೆ
ನೆತ್ತಿಯಲ್ಲಿ ಎಂದಿಗೂ ಮಾಸದ ವಿಭೂತಿ ಪಟ್ಟೆ
ಕೊರಳಲ್ಲಿ ಕರಿಮಣಿಗಳ ಸರ
ಬಾಯಿ ತೆರೆದರೆ ನಿಷ್ಠೂರ ಮಾತಿನ
ಬೈಗುಳಗಳ ಸುರಿಮಳೆ
ಹುಡುಕುತ್ತಾಳೆ ಕಾಯಿಲೆ ಬಿದ್ದವರ
ಮನೆ ಮನೆಯನ್ನು
ಬಸುರಿ, ಬಾಣಂತಿಯರು ಇರುವ ಜಾಡನ್ನು...
ಇವಳು ಬಸವಳಿದ ಬದುಕಿನ ಮನೆಗಳಿಗೆ
ಭರವಸೆಯ ಮುಲಾಮು...

ಇವಳು ನಿಲ್ಲುವಳಲ್ಲ
ಸದಾ ಜಂಗಮ ಪಾದಗಳು
ಇದ್ದರೆ ಈ ಊರು ಎದ್ದರೆ ಆ ಊರು
ಇವಳ ಕರುಣೆಯ ಕಣ್ಣಿಗೆ
ಅದೆಷ್ಟು ಜೀವಗಳ ಮುಖಗಳಲ್ಲಿ ಕಳೆಕಟ್ಟುತ್ತದೆ
ಊರ ಬಾಣಂತಿಯರಿಗಂತೂ ಬಯಸದ ಭಾಗ್ಯ
ಕೊಟ್ಟರೆ ಒಂದು ತುತ್ತು...
ಕೊಡುವಳು ಮತ್ತೆ ತಾಯ್ತನದ ತುತ್ತು.

**ಗಂಗಪ್ಪ ತಳವಾರ್**
'ಗಂಗೆ', ಲಕ್ಕೂರು ಅಂಚೆ ಮತ್ತು ಗ್ರಾಮ, ಮಾಲೂರು ತಾಲೂಕು
ಕೋಲಾರ ಜಿಲ್ಲೆ, ಪಿನ್ – ೫೬೩ ೧೬೦

ಮುಹಮ್ಮದರಿಗೆ ತಿರುಗಿ ಬಿದ್ದಿರುವುದುಂಟು. ತಂಟೆ ಮಾಡಿರುವುದುಂಟು. ಸತ್ಯ ಅರಿತಿರುವುದುಂಟು. ಕ್ರಿಸ್ತನಾಗಲೀ, ಬಸವನಾಗಲೀ, ಇಲ್ಲಿನ ಮಹಮ್ಮದ್ ಆಗಲೀ, ಧಾರ್ಮಿಕ ಪುರುಷರು ಈ ಎಲ್ಲಾ ಇದಿರೇಟುಗಳಿಗೆ ಎದೆಯೊಡ್ಡಿ ನಿಂತವರು.

ಕಾದಂಬರಿಯಲ್ಲಿ ಬರುವ ಈ ಮಹಮ್ಮದರ ಮಾತು ಇಹದ ಎಚ್ಚರವನ್ನು ಪರದ ಭಯವನ್ನು, ಒಟ್ಟಿಗೆ ಸೂಚಿಸುತ್ತದೆ. ಭೂಮಿಯ ಮೇಲಿರುವವರೆಗೆ ತನ್ನ ಪರಿಸರಕ್ಕೆ ಎಚ್ಚರವಾಗಿರುವುದಷ್ಟೇ ಅಲ್ಲ, ಅದಕ್ಕೆ ನಿಷ್ಠೆಯಿಂದಿರಬೇಕು. ಅದೇ ಬದುಕು ಎಂಬ ಇಸ್ಲಾಂ ತತ್ವವಿದೆ. ಮಜ್ಜಿದುಲ್ ಹರಮೆ ಅಂದರೆ ಮೆಕ್ಕಾ ದಿಕ್ಕಿಗೆ ಮುಖ ಮಾಡಿ ಆರಾಧಿಸುವುದು, ನಿಷೇಧಿಸಿರುವ ಮಾಂಸವನ್ನು ತಿನ್ನದಿರುವುದು, ಕಡ್ಡಾಯವಾಗಿ ಉಯಿಲು ಬರೆಯುವುದು, ಸತ್ಯ ವಿಶ್ವಾಸವನ್ನು ಸ್ವೀಕರಿಸುವವರೆಗೂ ಮದುವೆ ಯಾಗದಿರುವುದು, ವಿವಾಹ ಧನ ನೀಡದೆ ಪತ್ನಿಯನ್ನು ಮುಟ್ಟದಿರುವುದು, ಬಹುದೇವ ವಿಶ್ವಾಸಿಗಳಿಗೆ ಹೆಣ್ಣು ಕೊಡದಿರುವುದು, ಜೂಜಾಡದಿರುವುದು, ಮದ್ಯಪಾನ ಮಾಡದಿರುವುದು, ಹೆಣ್ಣುಮಕ್ಕಳನ್ನು ಜೀವಂತ ಹೂಳದಿರುವುದು, ಆಡಂಬರದ ಮದುವೆಗಳನ್ನು ಮೆಚ್ಚದಿರುವುದು, ದಾನವನ್ನು ಬಹಿರಂಗಪಡಿಸದಿರುವುದು, ಸಾಲಗಾರರನ್ನು ಸತಾಯಿಸದಿರುವುದು, ಬಡ್ಡಿ ವ್ಯಾಪಾರಕ್ಕೆ ಸಹಕರಿಸದಿರುವುದು, ಮರುಮದುವೆಗೆ ಅವಕಾಶವಿರುವುದು ...ಹೀಗೆ ಧರ್ಮವು ಬದುಕಿನ ಅನೇಕ ಮಗ್ಗಲುಗಳನ್ನು ಹೇಳುತ್ತಾ ಕಾದಂಬರಿಯಲ್ಲಿ ಮುಹಮ್ಮದರ ಮೂಲಕ ತತ್ವ ತಾಳುತ್ತ ಬರುತ್ತದೆ. ಇವೆಲ್ಲವೂ ಪ್ರಗತಿಪರ ವಿಚಾರಗಳೇ.

'ಕಳವು ಮಾಡದಿರಿ, ಕೊಲೆ ಮಾಡದಿರಿ, ಸುಳ್ಳು ಹೇಳದಿರಿ, ಸಿಟ್ಟು ಮಾಡದಿರಿ, ಎದುರು ವಾದಿಸದಿರಿ, ತಾವೇ ಶ್ರೇಷ್ಠರೆಂದು ಹೆಮ್ಮೆ ಪಡದಿರಿ, ಬೇರೆಯವರ ಬಗ್ಗೆ ಅಸಹ್ಯ ಪಡದಿರಿ, ಬಹುದೇವ ವಿಶ್ವಾಸ ಮಾಡದಿರಿ ಎಂದರು. ದೇವನು ಒಬ್ಬನೇ ಎಂದರು. (ಪು. ೧೧೪) ಈ ತಿಳಿವು ಜಗದ ಸತ್ಯ ವಿಚಾರಗಳು. ಇವೇ ಬಸವಣ್ಣನ ನುಡಿಗಳು. ಏಸುವಿರಲಿ, ಮಹಮದನಿರಲಿ, ಬಸವನಿರಲಿ, ಎಲ್ಲರೂ ಈ ತಳಹದಿಯವರೇ ಹೌದು. ಹಿಂದೂ ಸನಾತನ ಧರ್ಮದೊಳಗೆ ನಿಂತು ಮಾತನಾಡುವ ಗಾಂಧಿ ಕೂಡ ಬಹುದೇವರೊಳಗೆ ದೇವರೊಬ್ಬನನ್ನು ಹುಡುಕಿದ ಸಂತ. ಇದೇ ತಿಳಿವಿನ ಮಹತ್ವ. ಇದೇ ಇಸ್ಲಾಂ ತತ್ವ. ಇದೇ ಭಾರತೀಯ ತತ್ವ. ಇದೇ ಜಗದ ತತ್ವ.

'ನಿಮ್ಮ ಹೆತ್ತವರ ಜೊತೆಗೆ ಸೌಜನ್ಯದಿಂದ ವರ್ತಿಸಿರಿ. ಬಡತನದ ಭಯದಿಂದ ನಿಮ್ಮ ಮಕ್ಕಳನ್ನು ಕೊಲ್ಲಬೇಡಿರಿ. ನಿಮಗೆ ನೀಡಿರುವಂತೆ ಅವನು ಅವರಿಗೂ ಆಹಾರ ನೀಡುವನು. ಅಪ್ರಾಪ್ತನ ಸೊತ್ತನ್ನು ಕಬಳಿಸದಿರಿ, ಪ್ರಾಪ್ತ ವಯಸ್ಸಿಗೆ ಬರುವವರೆಗೆ ಅವರ ಸೊತ್ತಿನ ರಕ್ಷಕರಾಗಿರಿ. ಅಳತೆ ಮಾಡಿಕೊಡುವಾಗ ಅಳತೆ ಪಾತ್ರೆಯನ್ನು ಪೂರ್ತಿಯಾಗಿ ತುಂಬಿಸಿಕೊಡಿರಿ' (ಪು. ೧೫೬). ಹೀಗೆ ಕಾದಂಬರಿಯು ಇಸ್ಲಾಂ ಧರ್ಮದ ಮೂಲಕ ಕಟ್ಟಿಕೊಡುತ್ತಿರುವ ಸಾಮಾಜಿಕ ನೀತಿಯು ಜಗದ ಎಲ್ಲ ಆಸ್ತಿಕ ಧರ್ಮಗಳ ಸಾರವೇ ಹೌದು.




ಕಾದಂಬರಿಯ ಕಡೆಯ ಭಾಗ 'ಚದುರಂಗ' ಕ್ರಿ.ಶ. ೬೩೨ರವರೆಗೆ ಕಡೆಯ ಭಾಗ, ಮಕ್ಕಳ ಪಾಲನೆಗಳು ಮುಹಮ್ಮದರು ನಿರಾಶ್ರಿತ ಸೌಧಾ ಎಂಬ ವಿಧವೆಯನ್ನು ಮದುವೆಯಾಗಿದ್ದರು. ಆಯಿಷಾ ಎಂಬಾಕೆ ಸಹ ಮೂರನೇ ಹೆಂಡತಿ. ಈ ವಿಧಾನವು ಹೆಣ್ಣಿಗೆ ಆಶ್ರಯ ನೀಡುವ ಗಂಡಿನ ಆಗಿನ ನೀತಿಯಾಗಿತ್ತು. ಆಗಿನ ಸನ್ನಿವೇಶ ಗಂಡಾದವನು ಬರ್ಬರತೆಯಲ್ಲಿ ಅಸುನೀಗಿ ಹೆಣ್ಣುಗಳನ್ನು ಅನಾಥವಾಗಿಸುತ್ತಿದ್ದುದರ ಪೋಷಕವಾಗಿತ್ತು. ಇವು ಇಸ್ಲಾಂ ಸಮಾಜದಲ್ಲಿ ಬಹುಪತ್ನಿತ್ವ ರೀತಿಗೆ ಅನುವು ಮಾಡಿಕೊಟ್ಟಿರುವುದು ಹೌದು. ಅಂದಿನ ಸನ್ನಿವೇಶಗಳು ಆಶ್ರಿತ ಸ್ತ್ರೀಯರಿಗೆ ನೀಡುವ ಆ ರೀತಿಗಳು ಮುಂದೆ ಇಸ್ಲಾಂ ಸಮಾಜದಲ್ಲಿ ಮೌಢ್ಯವಾಗಿ ತೆರಳಿದ್ದುಂಟು. ಧರ್ಮವೆಂಬುದು ಬಲು ಸೂಕ್ಷ್ಮ. ಆಚರಣೆಯಲ್ಲಿ ಯಾವುದನ್ನು ಆರಿಸಿಕೊಳ್ಳಬೇಕೆಂಬುದು ಅನುಯಾಯಿ ಗಳಿಗೆ ಗೊತ್ತಿರಬೇಕು. ಇವು ಯಾವುದನ್ನೂ ಕಾದಂಬರಿ ಚರ್ಚಿಸುವುದಿಲ್ಲ. ಇದೊಂದು ಚಾರಿತ್ರಿಕ ಕಾದಂಬರಿ ಎಂದು ಮೌನವಹಿಸುತ್ತದೆ. ಅಷ್ಟೇ ಅಲ್ಲ, ಕಡೆಯ ಪ್ರವಾದಿ ಇಸ್ಲಾಂ ಪ್ರವರ್ತಕರನ್ನು ಚರ್ಚಿಸುವ ಹಕ್ಕು ಇಂಥ ಕಾದಂಬರಿಗೆ ಇರುವುದಿಲ್ಲ. ಅದು ಧಾರ್ಮಿಕ ನಿಬಂಧನೆಯದು. ಕಾಲಗತಿಯಲ್ಲಿ ಸಮಾಜ ಬದಲಾಗಿದೆ ಅದರಂತೆ ಇಸ್ಲಾಂ ಧರ್ಮವೂ ಅದರೊಳಗಿನ ಕಠಿಣ ಲಿಖಿತದಲ್ಲಿ ಬದಲಾವಣೆ ತಂದುಕೊಂಡಿದೆ. ಅದು ಧಾರ್ಮಿಕ ಸಂವಿಧಾನದಲ್ಲಿ ಮಾಡಿಕೊಳ್ಳುವ ಒಪ್ಪಿತ ರೀತಿಗಳು. ಕಾದಂಬರಿಯಲ್ಲಿ ಕೆಲವು ರೀತಿಯ ಅತಿಮಾನುಷ ಘಟನೆಗಳು ಧಾರ್ಮಿಕ ಸ್ವರೂಪಗಳ ತಿರುವುಗಳಿವೆ.

'ಪತ್ನಿ ತೀರಿಹೋದರೆ ರೊಟ್ಟಿ ಸುಡಲೆಂದು ಹೊಸ ಪತ್ನಿಯನ್ನು ಕೊಳ್ಳಬಹುದು. ಆದರೆ ದುಡಿದು ತರುತ್ತಿದ್ದ ಪತಿಯೇ ತೀರಿಕೊಂಡರೆ?... ಮತ್ತೊಬ್ಬರ ಪತ್ನಿಯಾಗುವವರೆಗೆ ಹೊಟ್ಟೆ ಹೊರೆದುಕೊಳ್ಳುವುದು ಹೇಗೆ?' (ಪು. ೨೪೫). ಈ ಕಾದಂಬರಿಯ ನುಡಿಗಳು ಹೆಣ್ಣನ್ನು ಹೇಗೆ ಆಶ್ರಯದ ಮಾದರಿಯಲ್ಲಿ ಗಂಡಿನೊಳಗೆ ಕ್ರೌರ್ಯಕ್ಕೆ ನೂಕಿದವು ಎಂಬ ಸೂಚನೆ ಕೊಡುತ್ತವೆ. 'ತಾಯಿಯೊಬ್ಬಳು ತನ್ನ ಮಗುವನ್ನು ಕಲ್ಲು ಮುಳ್ಳಿನ ಮೇಲೆ ಮಲಗಿಸುವ ಮೊದಲು ಮಗುವಿಗೆ ಗಾಯವಾಗದಂತೆ ಉಟ್ಟಿದ್ದ ವಸ್ತ್ರವನ್ನು ಕಳಚಿ ಹಾಸಿಗೆಯನ್ನಾಗಿಸಿದ್ದನ್ನು ಅಭಿಮಾನದಿಂದ ಮೆಚ್ಚಿಕೊಂಡರೆ ಅದೇನು ಅಸಹಜವಲ್ಲ... ಮಗುವಿನ ಹೊಟ್ಟೆಯನ್ನು ಉಗುರುಗಳಿಂದಲೇ ಬಗೆದು ಕರುಳಿನಲ್ಲಿ ಸಿಕ್ಕಿಹಾಕಿಕೊಂಡಿದ್ದ ರೊಟ್ಟಿಯ ತುಣುಕುಗಳನ್ನು ಆರಿಸಿ ಆ ತಾಯಿ ತಿನ್ನುತ್ತಾಳೆ' (ಪು. ೨೪೯). ಕರುಳು ಚುರುಕ್ ಎನ್ನುವ ಕಾದಂಬರಿಯ ಈ ಮಾತು ಹಸಿದ ಮಗು ಪೂರ್ತಿ ರೊಟ್ಟಿ ತಿಂದಾಗ ನೋಡುತ್ತಲೇ ಇದ್ದ ತಾಯಿಯ ಹಸಿವು ಮಗುವಿನ ಹೊಟ್ಟೆ ಬಗೆದು ರೊಟ್ಟಿ ಚೂರಿಗಾಗಿ ಹೇಗೆ ಪರಿವರ್ತಿತವಾಗಿದೆ ಎಂಬ ರೀತಿಯ ಬಗ್ಗೆ ಹೇಳುತ್ತದೆ. ಇದು ತಾಯ್ತನವೆಂಬ ಸಾರ್ವತ್ರಿಕ ಸತ್ಯವನ್ನು ಸಹ ಬಯಲಿಗೆಳೆಯುತ್ತದೆ. ಹಸಿವಿನಿಂದ ತಾಯಿ ಸಾಯುತ್ತಾಳೆಯೇ ವಿನಾ ಈ ರೀತಿ ಮಾಡಲಾರಳು. ಮಹಮ್ಮದರ ಬಡತನ ಅಂದು ಎಷ್ಟು ಕ್ರೂರವಾಗಿತ್ತು ಎಂಬುದರ ಸಂದರ್ಭವಿದು. ಈಗಿನ ವರ್ತಮಾನದ ಹಿಂಸೆಯ ಬೀಜಗಳು ಆಗಿನ ಸಾಮಾಜಿಕ ಬರ್ಬರತೆಯೊಳಗೇ ಅಡಗಿವೆ ಎಂದು ಊಹಿಸಬಹುದು. ಮೆಕ್ಕಾದಲ್ಲಿ ಜಲಪ್ರಳಯವಾಗಿದೆ. ಜ್ಯೋತಿಷಿಯು ಸಮಾಜವನ್ನು ನಿಯಂತ್ರಿಸುತ್ತಿದ್ದಾಳೆ. ಸಮಾಜ ಮೌಢ್ಯದ ಕಡೆ ಜಾರುತ್ತಿದೆ. ಹುಬುಲ್ ದೇವತೆಗೆ ಚೀಟಿ ಎತ್ತುವುದರ ಮೂಲಕ ನೂರು ಒಂಟೆಗಳ ಬಲಿಯೆಂದಾಗುತ್ತದೆ. ಈ ರೀತಿಯ ಅನೇಕ ಘಟನೆಗಳು ಚರಿತ್ರೆಯಲ್ಲಿ ನಡೆದಿದೆ ಎನ್ನಲಾದ, ಪುರಾಣೀಕರಿಸಿರಬಹುದಾದ ಮಹಿಮೆಗಳು ಕಾದಂಬರಿಯಲ್ಲಿವೆ.

'ಮಂದಿರ ಒಡೆಯುವ ಮೊದಲು ಕೀರ್ತಿಕಿರೀಟಕ್ಕೆ ತಲೆ ಕೊಡಲು ಯಾರೂ ಸಿದ್ಧರಿರಲಿಲ್ಲ... ಅಷ್ಟರಲ್ಲಿ ವಲೀದ್ ಬಿನ್ ಮುಗೇರಾ ಎಂಬುವರು ಗುದ್ದಲಿ ಎತ್ತಿಕೊಂಡು ಕಅಬಾದ ನಡುವಿನಲ್ಲಿ ನಿಂತುಬಿಟ್ಟಿದ್ದರು. ಇದು ವರ್ತಮಾನದಲ್ಲಿ ಭಾರತದಲ್ಲಿ ಮಸೀದಿ ಕೆಡವಿದ ವಿರೂಪಕ್ಕೆ ತಾಳೆಯಾಗುವುದುಂಟು. ಸಾವಿರಾರು ವರ್ಷ ಕಳೆದರೂ ಧರ್ಮದೊಳಗಿನ ಗದ್ದಲವೇ ಇಂಥದ್ದು.

ಭೂತ ಹಾಗೂ ಭವಿಷ್ಯತ್‌ಗಳು ವರ್ತಮಾನದಲ್ಲಿ ಕಣ್ಣುಬಿಡುತ್ತಿರುತ್ತವೆ. 'ಹಾಗಾದರೆ ಅಷ್ಟು ವಿಗ್ರಹಗಳಲ್ಲಿ ಒಬ್ಬನೇ ಒಬ್ಬ ದೇವರೂ ಇದ್ದಿರಲಿಲ್ಲವೆ? ಬಾಲ್ಯದಲ್ಲಿ ತಮ್ಮೆಲ್ಲರ ಕಣ್ಣೆದುರೇ ಆಡು ಮೇಯಿಸುತ್ತಿದ್ದ ಹುಡುಗ ಇಷ್ಟು ವರ್ಷಗಳಿಂದ ಹೇಳುತ್ತಿದ್ದುದೆಲ್ಲ ನಿಜವೆ? ದೇವರೆಂದರೆ ಅಲ್ಲಾಹು ಮಾತ್ರನೆ?' (ಪು. ೨೬೦). ಕಾದಂಬರಿಯು ಈ ಅನುಮಾನದಲ್ಲೇ ಮುಕ್ತಾಯಗೊಂಡು ದೇವನೊಬ್ಬ ನಾಮ ಹಲವು, ಹಲವು ದೇವರಿಲ್ಲ ಒಬ್ಬನೇ ದೇವರು ಎಂಬ ತತ್ವ ಹೇಳುತ್ತದೆ. ಬಾಲ್ಯದ ಗೆಳೆಯ ಅಬೂಬಕರ್ ಪ್ರವಚನ ಮುಂದುವರಿಸುತ್ತಾರೆ. ಹಾರಾಡುವ ಹಕ್ಕಿಗಳಿಗೆ ಬಾಣ ಹೊಡೆಯದಿರಿ... ಪುಟ್ಟ ಹೆಣ್ಣುಮಕ್ಕಳನ್ನು ಜೀವಂತ ಹೂಳದಿರಿ... ಮರಣದ ಬಳಿಕ ನನ್ನ ದೇಹವನ್ನು ಮಾತ್ರ ದಫನ್ ಮಾಡಿರಿ.' ಈ ಕಡೆಯ ಪ್ರವಾದಿಯ ಮಾತುಗಳನ್ನು ಜೀವದ ಗೆಳೆಯ ಅಬೂಬಕರ್‌ರಿಗೆ ಉಪದೇಶ ಮಾಡಿದ ರೀತಿಯಲ್ಲಿ ಕಾದಂಬರಿಯ ಅಂತ್ಯವೂ ಆಗುತ್ತದೆ.

**ಡಾ॥ ರಾಜೇಗೌಡ ಹೊಸಹಳ್ಳಿ**
ನಂ. ೪೧೩, ಒಂದನೇ ತಿರುವು, ಟೀಚರ್ಸ್ ಕಾಲನಿ
ನಾಗರಭಾವಿ, ಬೆಂಗಳೂರು – ೫೬೦ ೦೭೨

# ಇತಿಹಾಸದಲ್ಲಿ ಗುರುತಿಸಿಕೊಂಡ ಸುಲ್ತಾನ್ ಬತೇರಿ!

ವೈನಾಡು ಟಿಪ್ಪು ಆಡಳಿತಕ್ಕೆ ಬಂದ ನಂತರ ಅದನ್ನು ವಶಪಡಿಸಿಕೊಳ್ಳುವ ಉದ್ದೇಶದಿಂದ ಬ್ರಿಟಿಷರು ಮಲಬಾರಿನ ಕಡೆಯಿಂದ ದಾಳಿ ನಡೆಸಿದರು. ಟಿಪ್ಪು ಪಾಲಿಗೆ ಪ್ರಕ್ಷುಬ್ಧ ದಿನಗಳು ಅವು. ೧೭೯೨ರ ಒಪ್ಪಂದದ ಪ್ರಕಾರ ವೈನಾಡು ಮಲಬಾರಿನ ಒಂದು ಭಾಗ, ಅದು ಮಲಬಾರಿನೊಂದಿಗೆ ಸೇರಬೇಕಾದ್ದು ಎಂದು ಬ್ರಿಟಿಷರು ತಕರಾರು ತೆಗೆದು ದಾಳಿ ಪ್ರಾರಂಭಿಸಿದ್ದರು. ಆದರೆ ಒಪ್ಪಂದದಲ್ಲಿ ಆ ನಿಬಂಧನೆ ಇಲ್ಲ ಎಂಬುದು ಟಿಪ್ಪು ಸುಲ್ತಾನನ ಖಚಿತ ನಂಬಿಕೆ. ಬ್ರಿಟಿಷರು ಪ್ರತಿಪಾದನೆ ಸತ್ಯವಲ್ಲದ್ದು ಎಂದು ಅವರಿಗೆ ಮನವರಿಕೆ ಮಾಡಿಕೊಡುವ ಉದ್ದೇಶದಿಂದ, ಟಿಪ್ಪು ಸುಲ್ತಾನ್ ೧೭೯೮ರಲ್ಲಿ ಗವರ್ನರ್ ಜನರಲ್ ಲಾರ್ಡ್ ಮಾರ್ನಿಂಗ್‌ಟನ್‌ಗೆ ಮನವಿ ಮಾಡಿಕೊಂಡ. ಅದನ್ನು ಪುನರ್‌ಪರಿಶೀಲಿಸಿದ ಗವರ್ನರ್ ಜನರಲ್ ಟಿಪ್ಪು ಮನವಿಯಲ್ಲಿ ಸತ್ಯಾಂಶ ಇರುವುದನ್ನು ಮನವರಿಕೆ ಮಾಡಿಕೊಂಡ. ೧೭೯೨ರ ಒಪ್ಪಂದದ ಪ್ರಕಾರ ವೈನಾಡು ಪ್ರದೇಶ ಬ್ರಿಟಿಷ್ ಈಸ್ಟ್ ಇಂಡಿಯಾ ಪ್ರದೇಶಕ್ಕೆ ಸೇರ್ಪಡೆಯಾಗಿಲ್ಲ ಎಂದು ಒಂದು ಘೋಷಣಾ ಪತ್ರ ಹೊರಡಿಸಿದ. ಅದರಂತೆ ಬ್ರಿಟಿಷ್ ಪಡೆಗಳು ವೈನಾಡಿನಿಂದ ಹಿಂದೆಗೆಯಬೇಕಾಯಿತು.



ಪಣಿಯ ತಾಯಿಮಕ್ಕಳು

ಅಂದಿನ ಮುಂಜಾನೆ ಪಂದಲೂರು ತಾಲ್ಲೂಕಿನ ಕಯ್ಯುಣ್ಣಿಯಲ್ಲಿರುವ ಪಣಿಯರ ಕಾಲೋನಿಗೆ ಭೇಟಿಯೊಂದಿಗೆ ಕ್ಷೇತ್ರ ಕಾರ್ಯ ಪ್ರಾರಂಭವಾಯಿತು. ಮುಂದಿನದು ತಯ್ಯಕುಣಿ ಮುಳ್ಳು ಕುರುಬರ ಹಾಡಿಯಲ್ಲಿ ಮಾಹಿತಿ ಸಂಗ್ರಹಣೆ. ಅದು ಕೇರಳದ ಎಲ್ಲೆಗೆ ಹೊಂದಿಕೊಂಡಿದ್ದ ಗ್ರಾಮ. ಹಾಡಿಯ ಯಜಮಾನ ಅಚ್ಚುತನ್ ಅವರೊಂದಿಗೆ ಮಾತುಕತೆ ಆಡುತ್ತಿದ್ದಾಗ, ನಾವು ಕುಳಿತಲ್ಲಿಂದ ಸುಮಾರು ನೂರು ಅಡಿಗಳಾಚೆ ಹರಿಯುತ್ತಿದ್ದ ಹಳ್ಳದತ್ತ ಕೈತೋರಿಸಿ, "ಅಲ್ಲಿಂದಾಚೆಗೆ ಕೇರಳ" ಎಂದರು. ಅದು ಮಲಬಾರಿನ ವೈನಾಡಿಗೆ ಸೇರಿದ ಒಂದು ಭಾಗ.

ನಮ್ಮ ಜೀಪು ಚಾಲಕ ಮುಹಮದ್ ಅಲಿ, ಅನೇಕ ವರ್ಷಗಳಿಂದ ಆದಿವಾಸಿಗಳ ಅಧ್ಯಯನಕ್ಕೆ ಬರುವವರೊಂದಿಗೆ ಅಲ್ಲೆಲ್ಲ ತಿರುಗಾಡಿದ್ದ ಅನುಭವಿ. ಮಾರ್ಗದರ್ಶಿಯೂ ಹೌದು. ಅಲ್ಲಿಂದ ಸುಲ್ತಾನ್ ಬತೇರಿಗೆ ಹೋಗಲು ತೀರ್ಮಾನಿಸಿದೆವು. ತಯ್ಯಕುಣಿಯಿಂದ ಸುಲ್ತಾನ್ ಬತೇರಿಗೆ ಹನ್ನೆರಡು ಕಿ. ಮೀ. ದೂರ. "ಅಲ್ಲಿ ಬೇಕಾದಷ್ಟು ಹೋಟೆಲುಗಳಿವೆ, ಫಸ್ಟ್‌ಕ್ಲಾಸ್ ಮೀನೂಟ ಸಿಗುತ್ತೆ" ಎಂದು ಅಲಿ ಉತ್ಸಾಹದಿಂದ ಹೇಳಿದ್ದ.

ಮುಂಜಾನೆ ಹೊರಟಾಗಿನಿಂದ ಟೀ, ಕಾಫಿ ತೋಟಗಳ ಮೂಲಕ ಹಾದು ಬಂದಿದ್ದೆವು. ಜೀಪು ಸುಲ್ತಾನ್ ಬತೇರಿಯತ್ತ ತಿರುಗಿದಾಗ ಭೂದೃಶ್ಯ ಬದಲಾಯಿತು. ಸುತ್ತಲೂ ನಳನಳಿಸುವ ಗದ್ದೆಗಳು, ಬಾಳೆ, ಮರಗೆಣಸು ಹಾಗೂ ಹಾಗಲಕಾಯಿ ತೋಟಗಳು. ಅವುಗಳ ಮಧ್ಯೆ ಗೆರೆ ಎಳೆದಂತೆ ನೇರ ಹಾಯುವ ರಸ್ತೆ.

"ಇಲ್ಲಿನ ಮನೆಗಳನ್ನು ಗಮನಿಸಿ ಸಾರ್, ಇವನ್ನು ಕಟ್ಟಿಸಿದ ಮಾಲೀಕರು ಗಲ್ಫ್ ದೇಶಗಳಲ್ಲಿದ್ದಾರೆ. ಅವರು ಕಟ್ಟಿಸಿದ ಮನೆಗಳಲ್ಲಿ ತೋಟದ ಕಾವಲುಗಾರರು ವಾಸಿಸುತ್ತಾರೆ!" ಎಂದ ಅಲಿ.

ಒಂದೊಂದು ಎಕರೆ ಜಾಗದಲ್ಲಿ ಒಂದೊಂದೇ ಮನೆ. ಆಧುನಿಕ ವಿನ್ಯಾಸದವು. ಒಂದರಂತೆ ಮತ್ತೊಂದಿಲ್ಲ. ಕಾವಲುಗಾರರ ಭಾಗ್ಯ!

ಕೇರಳದ ವೈನಾಡು ಪ್ರದೇಶದ ಒಂದು ತಾಲ್ಲೂಕು ಮುಖ್ಯ ಸ್ಥಳ ಸುಲ್ತಾನ್ ಬತೇರಿ. ಮೈಸೂರು ಸೀಮೆಯ ಎಲ್ಲೆಗೆ ಹೊಂದಿಕೊಂಡಿದೆ. ಮೈಸೂರಿನಿಂದ ೧೧೫ ಕಿ. ಮೀ. ದೂರದಲ್ಲಿದೆ. ಸಮುದ್ರ ಮಟ್ಟದಿಂದ ೯೮೦ ಮೀ. ಎತ್ತರದಲ್ಲಿರುವ ಈ ನಗರದಲ್ಲಿ ವಾಸಿಸುವ ಜನಸಂಖ್ಯೆ ಸುಮಾರು ೨೮,೦೦೦.

**ಚಿತ್ರಲೇಖನ : ಪರಂಜ್ಯೋತಿ**



ಮುಖ್ಯರಸ್ತೆ



ಜೈನ ದೇವಾಲಯ



ಒಂದು ಮಸೀದಿ

ಫಲವತ್ತಾದ ಭೂಮಿ, ಹಿತಕರವಾದ ಹವಾಮಾನ. ವೈನಾಡಿನ ಪ್ರಮುಖ ಪ್ರವಾಸಿ ಮತ್ತು ವಾಣಿಜ್ಯ ಕೇಂದ್ರ. ಕಲ್ಲಿಕೋಟೆಯಿಂದ ಗುಂಡ್ಲುಪೇಟೆ – ಕೊಳ್ಳೇಗಾಲದೊಂದಿಗೆ ಸಂಪರ್ಕ ಕಲ್ಪಿಸುವ ರಾಷ್ಟ್ರೀಯ ಹೆದ್ದಾರಿ ೨೧೨ ಸುಲ್ತಾನ್ ಬತೇರಿಯ ಮೂಲಕ ಹಾದುಹೋಗುತ್ತದೆ. ಇಂಗ್ಲಿಷ್, ಮಲಯಾಳಂ ಜೊತೆಗೆ ಕನ್ನಡ ಮತ್ತು ತಮಿಳು ಅಲ್ಲಿ ಬಳಕೆಯಾಗುವ ಭಾಷೆಗಳು.

ಅದನ್ನು ಕಿಡಂಗನಾಡು ಎಂದೂ ಗುರುತಿಸುತ್ತಾರೆ. ಅದು ಕಿಡಂಗ ಎಂಬ ಆದಿವಾಸಿಗಳ ತಾಣ. ಈಗಲೂ ಇದರ ಆಸುಪಾಸಿನಲ್ಲಿ ಜಿಲ್ಲೆಯ ಬೇರೆ ಕಡೆಗಳಿಗಿಂತ ಹೆಚ್ಚಿನ ಸಂಖ್ಯೆಯಲ್ಲಿ ಕಾಡುನಾಯಕ, ಮುಳ್ಳು ಕುರುಬ ಮತ್ತು ಪಣಿಯ ಜನಾಂಗದವರು ವಾಸಿಸುತ್ತಾರೆ.

ಕ್ರಿ.ಶ. ೧೦ನೇ ಶತಮಾನದಿಂದೀಚೆಗೆ ಲಭ್ಯವಿರುವ ವೈನಾಡು ಪ್ರಾಂತದ ಇತಿಹಾಸದತ್ತ ಇಣುಕಿದಾಗ, ವೈನಾಡಿನ ಇತಿಹಾಸ ಹಲವು ಶತಮಾನಗಳ ಕಾಲ ಕನ್ನಡ ಸೀಮೆಯ ಇತಿಹಾಸದೊಂದಿಗೆ ತಳುಕುಹಾಕಿಕೊಂಡಿದ್ದುದು ತಿಳಿದುಬರುತ್ತದೆ. ಆಗ ಅದು ಬಯಲ್ನಾಡು ಎಂದು ಪರಿಚಿತವಾಗಿತ್ತು.

ಕ್ರಿ.ಶ. ೯೩೦ರಲ್ಲಿ ಗಂಗ ವಂಶದ ಈರಯಪ್ಪ ಎಂಬ ರಾಜ ಆ ಪ್ರದೇಶದ ಮೇಲೆ ದಾಳಿ ಮಾಡಿ, ಬಯಲ್ನಾಡನ್ನು ತನ್ನ ರಾಜ್ಯಕ್ಕೆ ಸೇರಿಸಿಕೊಂಡ. ಆತನ ಮಕ್ಕಳಾದ ರಾಚಮಲ್ಲ ಮತ್ತು ಬತ್ತುಂಗ ರಾಜ್ಯಕ್ಕಾಗಿ ಪರಸ್ಪರ ಕಾದಾಟ ನಡೆಸಿದರು. ರಾಚಮಲ್ಲ ಆ ಕಾದಾಟದಲ್ಲಿ ಮಡಿದ. ಮುಂದೆ ಬತ್ತುಂಗ ಬಯಲ್ನಾಡಿನ ರಾಜನಾದ. ೧೨ನೇ ಶತಮಾನದಲ್ಲಿ ಕದಂಬರು ಗಂಗರಾಜರನ್ನು ಸೋಲಿಸಿ ಬಯಲ್ನಾಡನ್ನು ಗೆದ್ದುಕೊಂಡರು. ಕ್ರಿ.ಶ. ೧೧೦೪ರಲ್ಲಿ ಹೊಯ್ಸಳ ರಾಜ ವಿಷ್ಣುವರ್ಧನ ಬಯಲ್ನಾಡನ್ನು ವಶಪಡಿಸಿಕೊಂಡ. ತರುವಾಯ ಅದು ವಿಜಯನಗರದ ಅರಸರ ಪಾಲಾಯಿತು. ಕ್ರಿ.ಶ. ೧೬೧೦ರಲ್ಲಿ ನೀಲಗಿರಿ ಮತ್ತು ಬಯಲ್ನಾಡು ಪ್ರದೇಶ ಮೈಸೂರು ಅರಸ ರಾಜಒಡೆಯರ ವಶವಾಯಿತು. ಮುಂದೆ, ಹೈದರಾಲಿಯ ಆಡಳಿತದ ಸಂದರ್ಭದಲ್ಲಿ ವೈತ್ತಿರಿ ಮತ್ತು ತಾಮರಸ್ಸೇರಿ ನಡುವಣ ಘಾಟಿ ರಸ್ತೆಯ ನಿರ್ಮಾಣ ಕಾರ್ಯ ನಡೆದು ವಾಣಿಜ್ಯಾಭಿವೃದ್ಧಿಗೆ ಸಹಾಯಕವಾಯಿತು.

ವೈನಾಡು ಟಿಪ್ಪು ಆಡಳಿತಕ್ಕೆ ಬಂದ ನಂತರ ಅದನ್ನು ವಶಪಡಿಸಿಕೊಳ್ಳುವ ಉದ್ದೇಶದಿಂದ ಬ್ರಿಟಿಷರು ಮಲಬಾರಿನ ಕಡೆಯಿಂದ ದಾಳಿ ನಡೆಸಿದರು. ಟಿಪ್ಪು ಪಾಲಿಗೆ ಪ್ರಕ್ಷುಬ್ಧ ದಿನಗಳು ಅವು. ೧೭೯೨ರ ಒಪ್ಪಂದದ ಪ್ರಕಾರ ವೈನಾಡು ಮಲಬಾರಿನ ಒಂದು ಭಾಗ, ಅದು ಮಲಬಾರಿನೊಂದಿಗೆ ಸೇರಬೇಕಾದ್ದು ಎಂದು ಬ್ರಿಟಿಷರು ತಕರಾರು ತೆಗೆದು ದಾಳಿ ಪ್ರಾರಂಭಿಸಿದ್ದರು. ಆದರೆ ಒಪ್ಪಂದದಲ್ಲಿ ಆ ನಿಬಂಧನೆ ಇಲ್ಲ ಎಂಬುದು ಟಿಪ್ಪು ಸುಲ್ತಾನನ ಖಚಿತ ನಂಬಿಕೆ. ಬ್ರಿಟಿಷರು ಪ್ರತಿಪಾದನೆ ಸತ್ಯವಲ್ಲದ್ದು ಎಂದು ಅವರಿಗೆ ಮನವರಿಕೆ ಮಾಡಿಕೊಡುವ ಉದ್ದೇಶದಿಂದ, ಟಿಪ್ಪು ಸುಲ್ತಾನ್ ೧೭೯೮ರಲ್ಲಿ ಗವರ್ನರ್ ಜನರಲ್ ಲಾರ್ಡ್ ಮಾರ್ನಿಂಗ್‌ಟನ್‌ಗೆ ಮನವಿ ಮಾಡಿಕೊಂಡ. ಅದನ್ನು ಪುನರ್‌ಪರಿಶೀಲಿಸಿದ ಗವರ್ನರ್ ಜನರಲ್ ಟಿಪ್ಪು ಮನವಿಯಲ್ಲಿ ಸತ್ಯಾಂಶ ಇರುವುದನ್ನು ಮನವರಿಕೆ ಮಾಡಿಕೊಂಡ. ೧೭೯೨ರ ಒಪ್ಪಂದದ ಪ್ರಕಾರ ವೈನಾಡು ಪ್ರದೇಶ ಬ್ರಿಟಿಷ್ ಈಸ್ಟ್ ಇಂಡಿಯಾ ಪ್ರದೇಶಕ್ಕೆ ಸೇರ್ಪಡೆಯಾಗಿಲ್ಲ ಎಂದು ಒಂದು ಘೋಷಣಾ ಪತ್ರ ಹೊರಡಿಸಿದ. ಅದರಂತೆ ಬ್ರಿಟಿಷ್ ಪಡೆಗಳು ವೈನಾಡಿನಿಂದ ಹಿಂದೆಗೆಯ ಬೇಕಾಯಿತು. ೧೭೯೯ರ ನಾಲ್ಕನೇ ಮೈಸೂರು ಯುದ್ಧದಲ್ಲಿ ಟಿಪ್ಪು ಸೋತ ನಂತರ ಬ್ರಿಟಿಷರು ವೈನಾಡನ್ನು ಮೈಸೂರು ಅರಸರ ಸೀಮೆಗೆ ಸೇರಿಸಿದರು. ಆದರೂ ಈಸ್ಟ್ ಇಂಡಿಯಾ ಕಂಪೆನಿಯು ೧೮೦೩ರ ಒಂದು ಪರಿಶಿಷ್ಟ ಒಪ್ಪಂದದ ಮೂಲಕ ವೈನಾಡನ್ನು ವಶಕ್ಕೆ ತೆಗೆದುಕೊಂಡು, ಕರ್ನಲ್ ಆರ್ಥರ್ ವೆಲ್ಲೆಸ್ಲಿ ಶ್ರೀರಂಗಪಟ್ಟಣದಿಂದ ಅದರ ಆಡಳಿತ ನಡೆಸುವಂತೆ ಏರ್ಪಾಟು ಮಾಡಿತು.

* * *

ಎತ್ತರದ ಕೋಟೆ ಗೋಡೆ, ಬುರುಜುಗಳು, ದಿಡ್ಡಿಬಾಗಿಲು, ಭದ್ರವಾದ ಮದ್ದಿನ ಮನೆ ಮುಂತಾದುವನ್ನು ಕಲ್ಪಿಸಿಕೊಂಡಿದ್ದೆ. ಮಂಗಳೂರಿನಲ್ಲಿರುವ ಸುಲ್ತಾನ್ ಬತೇರಿಯ ಬಗ್ಗೆ ಪತ್ರಿಕೆಯಲ್ಲಿ ಬಂದಿದ್ದ ಲೇಖನ ಓದಿದ್ದೆ. ಈ ಸುಲ್ತಾನ್ ಬತೇರಿ ನನ್ನ ಕಲ್ಪನೆಗಿಂತ ಭಿನ್ನವಾಗಿತ್ತು! ನಮ್ಮನ್ನು ಬೇರೆಲ್ಲಿಗಾದರೂ ಕರೆತಂದಿರಬಹುದೆಂಬ ಸಂಶಯದಿಂದ ಆತನಲ್ಲಿ ಎರಡೆರಡು ಬಾರಿ ವಿಚಾರಿಸಿದೆ. ಆದರೆ ಈ ಊರಿನಲ್ಲಿರುವ ಐತಿಹಾಸಿಕ ಸ್ಮಾರಕ ಇದೊಂದೇ ಎಂದು ತಿಳಿದಾಗ ಸ್ವಲ್ಪ ನಿರಾಶೆಯೂ ಆಯಿತು.

ಅದೊಂದು ಸಣ್ಣ ಜೈನ ದೇವಾಲಯ. ದೇವಾಲಯದ ಆವರಣದಲ್ಲಿರುವ ಮಾಹಿತಿ ಫಲಕದಿಂದ ತಿಳಿದುಬರುವಂತೆ, ಸುಲ್ತಾನ್ ಬತೇರಿಯ ಮೂಲ ಹೆಸರು 'ಹನ್ನೆರಡು ಬೀದಿ' ಎಂದು. ಆಸುಪಾಸಿನಲ್ಲಿ ಜೈನರು ವಾಸಿಸುತ್ತಿದ್ದ ಹನ್ನೆರಡು ಜೈನರ ಬೀದಿಗಳಿದ್ದುವಂತೆ. ಮಲಯಾಳಂ ದಾಖಲೆಗಳಲ್ಲಿ ಇದನ್ನು 'ಗಣಪತಿ ವಟ್ಟಂ' – ಎಂದು ಗುರುತಿಸುತ್ತಾರೆ. ೧೮ನೇ ಶತಮಾನದಲ್ಲಿ ಅದು ಒಂದು ಸೈನ್ಯ ಠಾಣೆಯಾಗಿತ್ತು. ಟಿಪ್ಪು ಜೈನ ಬಸದಿಯನ್ನು ಶಸ್ತ್ರಾಗಾರವಾಗಿ ಮಾಡಿದ್ದರಿಂದ ಬ್ರಿಟಿಷರು ಅದನ್ನು 'ಸುಲ್ತಾನ್ಸ್ ಬ್ಯಾಟರಿ' ಎಂದು ಕರೆದರು. ಮುಂದೆ ಅದು ಸುಲ್ತಾನ್ ಬತೇರಿ ಆಯಿತು. ಮಲಯಾಳದಲ್ಲಿ ಅದನ್ನು 'ಬತ್ತೇರಿ' ಎನ್ನುತ್ತಾರೆ. ಜೈನ ದೇವಾಲಯ ಕ್ರಿ.ಶ. ೧೧–೧೪ನೇ ಶತಮಾನದ ಅವಧಿಯಲ್ಲಿ ನಿರ್ಮಾಣಗೊಂಡದ್ದು. ೧೯೨೪ರ ತರುವಾಯ ಅದು ಪುರಾತತ್ವ ಇಲಾಖೆಯ ವ್ಯಾಪ್ತಿಗೊಳಪಟ್ಟು ಪ್ರಮುಖ ಐತಿಹಾಸಿಕ ಸ್ಮಾರಕವಾಗಿದೆ. ಪೂಜೆ ಪುನಸ್ಕಾರಗಳು ನಡೆಯುವುದಿಲ್ಲ.

ಕೇರಳ ದೇವಾಲಯ ಸಂಪ್ರದಾಯದಂತೆ ಗರ್ಭಗೃಹ, ಅಂತರಾಳ, ಮಹಾ ಮಂಟಪ ಮತ್ತು ಮುಖಮಂಟಪ ಇವು ಗಳನ್ನೊಳಗೊಂಡಿದೆ. ಗ್ರಾನೈಟ್ ಕಲ್ಲುಗಳಿಂದ ನಿರ್ಮಿಸಿರುವ



ಅಲಂಕಾರದ ಗಿಡ

ದೇವಾಲಯದ ಮುಖಮಂಟಪದ ಮೇಲಿನ ಛಾವಣಿ ಕುಸಿದು ಬಿದ್ದು ಬರಿಯ ಕಂಬಗಳು ಮಾತ್ರ ನಿಂತಿವೆ.

ಆ ಅವಧಿಯಲ್ಲಿ ವೈನಾಡಿನ ಈ ಪ್ರದೇಶದಲ್ಲಿ ಜೈನಧರ್ಮ ವ್ಯಾಪಕವಾಗಿ ಹಬ್ಬಿತ್ತು ಎಂದು ಊಹಿಸಬಹುದು. ಮುಂದೆ ಅವರು ಬೇರೆ ಕಡೆಗೆ ಚೆದುರಿಹೋಗಿರಬಹುದು. ಈಗ ಅಲ್ಲಿರುವವರೆಲ್ಲ ಅನಂತರ ಬೇರೆ ಬೇರೆ ಕಡೆಯಿಂದ ಬಂದಿರುವ ನೆಲಸಿಗರು.

ಜೈನ ದೇವಾಲಯ ಸುಮಾರು ಒಂದು ಎಕರೆಯಷ್ಟು ವಿಸ್ತೀರ್ಣವಾದ ಜಾಗದಲ್ಲಿದೆ. ಇದರಲ್ಲಿ ಟಿಪ್ಪು ತನ್ನ ಫಿರಂಗಿಗಳೂ ಸೇರಿದಂತೆ, ಬ್ರಿಟಿಷರನ್ನು ಎದುರಿಸಲು, ಸದಾ ಸನ್ನದ್ಧವಾಗಿರಬೇಕಾದಷ್ಟು ಪ್ರಮಾಣದ ಶಸ್ತ್ರಾಸ್ತ್ರಗಳನ್ನು ಶೇಖರಿಸಿಟ್ಟಿರಲು ಹೇಗೆ ಸಾಧ್ಯ ಎಂಬ ಅನುಮಾನ ಹುಟ್ಟುತ್ತದೆ. ಆಗ ದೇವಾಲಯದ ಸುತ್ತಲಿನ ವಿಶಾಲವಾದ ಜಾಗವನ್ನು ಬಳಸಿಕೊಂಡಿದ್ದಿರಬಹುದೆ? ಅಂತೂ 'ಇಂಡಿಯಾದ ರಾಕೆಟ್ ಮ್ಯಾನ್' ಟಿಪ್ಪು ಅನೇಕ ವರ್ಷಗಳ ಕಾಲ ಬ್ರಿಟಿಷರಿಗೆ ಚೆಳ್ಳೆಹಣ್ಣು ತಿನ್ನಿಸಿದ್ದಂತೂ ನಿಜ! ಆ ಕಾರಣದಿಂದ 'ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದು' ಎಂಬ ಗಾದೆಯಂತೆ, ಊರಿನ ಹೆಸರು ಇತಿಹಾಸದಲ್ಲಿ ಸೇರಿಕೊಂಡಿತು. 'ಹನ್ನೆರಡು ಬೀದಿ' ಎಂಬ ಊರಿನಲ್ಲಿರುವ ಸುಲ್ತಾನ್ ಬತೇರಿ ಎಂದು ಗುರುತಿಸಿಕೊಳ್ಳುವ ಬದಲು, ಇಡೀ ಊರು ಸುಲ್ತಾನ್ ಬತೇರಿಯಾದದ್ದು ಅದರ ವೈಶಿಷ್ಟ್ಯ!

ಸುಲ್ತಾನ್ ಬತೇರಿಗೆ ಬರುವ ಪ್ರವಾಸಿಗಳನ್ನು ಆಕರ್ಷಿಸುವ ಮುಖ್ಯ ತಾಣ ಈ ಪುಟ್ಟ ಜೈನ ದೇವಾಲಯ ಅಥವಾ ಟಿಪ್ಪುವಿನ ಶಸ್ತ್ರಾಗಾರ. ಪ್ರವಾಸಿಗಳಿಗೆ ಅದರ ಐತಿಹಾಸಿಕ ಮಹತ್ವದ ಬಗ್ಗೆ ಮಾಹಿತಿ ನೀಡಲು ಪುರಾತತ್ವ ಇಲಾಖೆ ಒಬ್ಬ ವ್ಯಕ್ತಿಯನ್ನು ನೇಮಿಸಿದೆ. ಆವರಣವನ್ನು ಸ್ವಚ್ಛವಾಗಿಡಲು ಮುತುವರ್ಜಿ ವಹಿಸಿದೆ. ಅದರ ಆಕರ್ಷಣೆಯನ್ನು ಮತ್ತಷ್ಟು ಹೆಚ್ಚಿಸುವ ಪ್ರಯತ್ನವಾಗಿ ತೋಟದಲ್ಲಿ ಬಗೆಬಗೆಯ ಹೂವುಗಳು ಮತ್ತು ಅಲಂಕಾರದ ಗಿಡಗಳನ್ನು ಬೆಳೆಸಿದ್ದಾರೆ.

ಸುಲ್ತಾನ್ ಬತೇರಿಗೆ ಬರುವ ಪ್ರವಾಸಿಗಳು, ಅಲ್ಲಿ ತಂಗಿದ್ದು ಸುತ್ತಲಿನ ಪ್ರವಾಸಿ ತಾಣಗಳಿಗೆ ಚಾರಣ ಕಾರ್ಯಕ್ರಮ ಹಾಕಿಕೊಳ್ಳುತ್ತಾರೆ. ವಾಹನಗಳ ಮೂಲಕ ನಿಸರ್ಗ ಸೌಂದರ್ಯ ಆಸ್ವಾದಿಸುತ್ತ ಪ್ರಾಚೀನ ಎಡಕಲ್ಲು ಗುಹೆಗೆ ಹಾಗೂ ವನ್ಯಜೀವಿ ಸಂರಕ್ಷಣಾ ವಲಯಕ್ಕೆ ಹೋಗಿಬರುತ್ತಾರೆ.

✳ ✳ ✳

ಸುಲ್ತಾನ್ ಬತೇರಿಯ ಬಗೆಗಿನ ಕುತೂಹಲದಿಂದಾಗಿ ಅವರಿಗೆ, ನಮಗೆ ಊಟದ ನೆನಪಾಗಿರಲಿಲ್ಲ. ಅಲ್ಲಿಂದ ಹೊರಬಂದ ಕೂಡಲೇ ಹೊಟ್ಟೆ ಭಯಂಕರ ಹಸಿವಿನಿಂದ ತಳಮಳಿಸತೊಡಗಿತು. ಅಲ್ಲಿಯ 'ಫಸ್ಟ್‌ಕ್ಲಾಸ್ ಮೀನೂಟ'ದ ನೆನಪಿನಿಂದ ಬಾಯಲ್ಲಿ ನೀರೂರಿಸಿಕೊಂಡಿದ್ದ ನಾವು, ದಾರಿಯಲ್ಲಿ ಬರುತ್ತ ಟೀ ಕೂಡ ಕುಡಿದಿರಲಿಲ್ಲ! ಅಲಿ ನಮ್ಮನ್ನು ಒಂದು ದೊಡ್ಡ ಹೋಟೆಲಿಗೆ ಕರೆದೊಯ್ದ. ಊಟದ ಹಾಲಿನ ಬಾಗಿಲು ಮುಚ್ಚಿತ್ತು. ಪ್ರಾಯಶಃ ಅದು ರಜೆಯ ದಿನವೆಂದು ಭಾವಿಸಿ ಮತ್ತೊಂದು ಹೋಟೆಲಿಗೆ ಹೋದರೆ ಅಲ್ಲಿಯೂ ಅದೇ ಕತೆ. ಬಂದ ದಾರಿಯಲ್ಲಿ ಹಿಂದಕ್ಕೆ ಸ್ವಲ್ಪ ದೂರ ಬಂದು ದಾರಿಯಂಚಿನ



ಬಾಳೆ ತೋಟ

ಹೋಟೆಲಿಗೆ ಹೋದಾಗಷ್ಟೆ ನಮಗೆ ನಿಜವಾದ ಪರಿಸ್ಥಿತಿ ತಿಳಿಯಿತು.

ಅಂದು ಸುಲ್ತಾನ್ ಬತೇರಿಯ ಹೋಟೆಲುಗಳು ಬಂದ್ ಆಚರಿಸಿದ್ದವು! ಕೇಂದ್ರ ಸರಕಾರ ಹೋಟೆಲುಗಳಿಗೆ ಸರಬರಾಜು ಮಾಡುವ ಗ್ಯಾಸ್ ಸಿಲಿಂಡರುಗಳ ಬೆಲೆಯನ್ನು ಹೆಚ್ಚಿಸಿದ್ದುದಕ್ಕಾಗಿ ಪ್ರತಿಭಟಿಸಲು ಆ ಬಂದ್. ಕೇರಳದಲ್ಲಿ ಬಂದ್‌ಗಳ ವಿಷಯವನ್ನು ಕೇಳಿ ತಿಳಿದಿದ್ದ ನಮಗೆ ಅಂದು ಪ್ರತ್ಯಕ್ಷ ಅದರ ಬಿಸಿ ತಟ್ಟಿತು!

ಬಹಳ ದೂರದಿಂದ ಸುಲ್ತಾನ್ ಬತೇರಿ ನೋಡಲು ಬಂದಿದ್ದ ನಾವು ಮಧ್ಯಾಹ್ನದ ಊಟಕ್ಕಾಗಿ ಪರದಾಡಬೇಕಾದ ಸ್ಥಿತಿ ಉಂಟಾಗಿತ್ತು. ಆಗ, ಪ್ರವಾಸವೆಂದರೆ ಬರೀ ಕುತೂಹಲವೇ ಅಲ್ಲ, ಒಮ್ಮೊಮ್ಮೆ ಪ್ರಯಾಸವೂ ಆಗಬಹುದು ಎಂಬ ಮಾತು ನೆನಪಿಗೆ ಬಂತು.

ನಮಗೆ ಮೀನೂಟದ ರುಚಿಯ ಗುಂಗು ಹಿಡಿಸಿದ್ದ ಅಲಿ ಪೆಚ್ಚುಮೋರೆ ಹಾಕಿಕೊಂಡ. ಆದರೂ ಛಲ ಬಿಡದ ತ್ರಿವಿಕ್ರಮನಂತೆ, ಎಲ್ಲಿಯಾದರೂ 'ಬಂದ್ ಮುರುಕರು' ಸಿಗಬಹುದೆ ಎಂದು ಇಕ್ಕಟ್ಟಿನ ರಸ್ತೆಗಳಲ್ಲಿ ಜೀಪ್ ಓಡಿಸುತ್ತ ಪ್ರಯತ್ನ ಮುಂದುವರಿಸಿದ. ಅಂದು ಟೀ ಅಂಗಡಿಗಳೂ ತೆರೆದಿರಲಿಲ್ಲ. ಬೇಕರಿ ಅಂಗಡಿಗಳಿರುವುದನ್ನು ಗಮನಿಸಿದ್ದೆ. ಬಾಳೆ ಹಣ್ಣಿನ ಗೊನೆಗಳು ಕಣ್ಣಿಗೆ ಬಿದ್ದಾಗ ಅವುಗಳಿಂದಲೇ ಹಸಿವಿಂಗಿಸಿಕೊಂಡು ಬಂದ ದಾರಿ ಹಿಡಿಯಬಹುದೆಂಬ ಆಲೋಚನೆ ನನ್ನ ತಲೆಯಲ್ಲಿ.

ಹಾಗೆ, ನಾಲ್ಕಾರು ಕಡೆ ತಿರುಗಾಡಿದ ನಂತರ ಅಲಿಯ ಮುಖ ಸ್ವಲ್ಪ ಅರಳಿತು. ಒಂದು ಗುಡಿಸಲು ಹೋಟೆಲು ತೆರೆದಿತ್ತು. ಅವರು ಹೇಗೋ ಬಂದ್‌ನವರ ಕಣ್ಣಿಗೆ ಮಣ್ಣೆರಚಿದ್ದರು! ಅಲ್ಲಿ ಕಾಲಿಡಲಾಗದಷ್ಟು ನೂಕು ನುಗ್ಗಲು. ಬಹಳ ಪ್ರಯತ್ನಿಸಿ ಸ್ಥಳ ಗಿಟ್ಟಿಸಿದೆವು. ಬಾಳೆ ಎಲೆಗೆ ಬದಲು ಕಾಗದದಲ್ಲಿ ತಯಾರಾದ ಹಸಿರು ಎಲೆ ಹರಡಿದಾಗ ಪತ್ನಿಯ ಮುಖ ಗಂಟಾಯಿತು! ಬಂದು ಕುಳಿತದ್ದಾಯಿತು. ಬೇರೆ ಉಪಾಯವಿರಲಿಲ್ಲ. ಕಣ್ಣೀರು ತರಿಸುವಷ್ಟು ಖಾರ. ಎಲೆಗೆ ಬಡಿಸಿದ್ದು ಯಾವ ಸೊಪ್ಪು, ಯಾವ ತರಕಾರಿ ಎಂಬುದೂ ತಿಳಿಯಲಿಲ್ಲ. ಅವರು ಅವಸರದಲ್ಲಿ ತಯಾರಿಸಿದ್ದು ಎಂದು ಊಹಿಸಬಹುದಿತ್ತು. ಅಲಿ ಹಪ್ಪಳ ಕೊಡಿ, ನೀರು ಕೊಡಿ ಮುಂತಾಗಿ ಸಪ್ಲೈ ಮಾಡುತ್ತಿದ್ದ ಹುಡುಗಿಯರಿಗೆ ಅಪ್ಪಣೆ ಕೊಡುತ್ತಿದ್ದ. ಕರಿದ ಎರಡು ಮತ್ತಿ ಮೀನು, ಹೆಬ್ಬೆರಳು ಗಾತ್ರದವು – ಸದ್ಯ ಅಷ್ಟಾದರೂ ಆಯಿತಲ್ಲ!

ಸುಲ್ತಾನ್ ಬತೇರಿ ಪ್ರವಾಸ ಮುಗಿಸಿ ಬೇರೊಂದು ಮಾರ್ಗದಿಂದ ಹೊರಟೆವು. ದಾರಿಯಲ್ಲಿ ಹೊಸ ದೃಶ್ಯಗಳು, ನಿಧಾನಕ್ಕೆ ನಡೆದುಹೋಗುತ್ತಿದ್ದ ಆದಿವಾಸಿಗಳು, ಅವರು ಹೆಣೆದು ಮಾರಾಟಕ್ಕಿಟ್ಟಿದ್ದ ಬಿದಿರು ಬುಟ್ಟಿಗಳು, ಬೆಟ್ಟಗಳ ಮರೆಯಲ್ಲಿ ಪಶ್ಚಿಮಕ್ಕಿಳಿಯುತ್ತಿದ್ದ ಸೂರ್ಯ, ಮಧ್ಯಾಹ್ನದ ಊಟಕ್ಕಾಗಿ ಪರದಾಡಿದ ನೆನಪು ಮರೆಯಾಗತೊಡಗಿತು. ಮುಂದೆ ಎಂದಾದರೊಂದು ದಿನ ಈ ಪ್ರವಾಸವನ್ನು ನೆನಪು ಮಾಡಿಕೊಂಡು ಹೊಟ್ಟೆ ತುಂಬುವಷ್ಟು ನಗಬಹುದು ಎನ್ನಿಸಿತು.

ಅಲಿ ಮಾತ್ರ 'ಏನು ಸಾರ್ ಹೀಗಾಯಿತಲ್ಲ!' ಎಂಬಂತೆ ಪೆಚ್ಚು ಮುಖ ಮಾಡಿಕೊಂಡಿದ್ದ.

---

ಚಿತ್ರಲೇಖನ : **ಪರಂಜ್ಯೋತಿ**
ನಂ. ೧೦, ೧ನೇ ಮಹಡಿ, ೨೧–ಬಿ ಕ್ರಾಸ್, ಶ್ರೀರಾಮ ದೇವಾಲಯ ರಸ್ತೆ, ಈಜಿಪುರ
ವಿವೇಕನಗರ ಅಂಚೆ, ಬೆಂಗಳೂರು – ೫೬೦ ೦೪೭

### ಅಭಿನಂದನೆ

ಡಾ॥ ದಿನಕರ ದೇಸಾಯಿ ಸ್ಮಾರಕ ಪ್ರತಿಷ್ಠಾನದವರು ನೀಡುವ 'ಕಾವ್ಯ ಪ್ರಶಸ್ತಿ'ಯು ಡಾ॥ ಎಚ್. ಎಸ್. ಅನುಪಮಾ ಅವರ 'ಸಹಗಮನ' ಕವನ ಸಂಕಲನಕ್ಕೆ ಸಂದಿದೆ. ಲೇಖಕಿಗೆ 'ಹೊಸತು' ಬಳಗದ ಅಭಿನಂದನೆಗಳು.

# ನೀರಿಗಾಗಿ ಹೋರಾಟ–ಯಾರಿಗಾಗಿ ಹೋರಾಟ?

ಮನುಕುಲ ಮತ್ತೊಂದು ಜಾಗತಿಕ ಮಹಾಯುದ್ಧವನ್ನು ನೋಡುವುದೇ ಆದರೆ ಅದು ನೀರಿಗಾಗಿ ನಡೆಯುವ ಯುದ್ಧವಾಗಿರುತ್ತದೆ ಎಂದು ಪರಿಸರ ತಜ್ಞರು ಹೇಳುತ್ತಲೇ ಬಂದಿದ್ದಾರೆ. ಪ್ರಾಚೀನ ನಾಗರಿಕತೆಯ ಮೂಲ ಸೆಲೆಯಾಗಿರುವ ಜಲಸಂಪನ್ಮೂಲವು ಆಧುನಿಕ ಜಗತ್ತಿನಲ್ಲಿ ನಾಗರಿಕತೆಯನ್ನೇ ನಾಶಮಾಡುವ ಭೂಮಿಕೆಯಾಗಿ ಪರಿಣಮಿಸುತ್ತಿರುವುದು ಮಾನವ ಸಮಾಜದ ಅಪ್ರಬುದ್ಧತೆ ಮತ್ತು ಸ್ವಾರ್ಥತೆಯ ಪರಾಕಾಷ್ಠೆಗೆ ಸಾಕ್ಷಿ ಎಂದಷ್ಟೇ ಹೇಳಬಹುದು. ಇಲ್ಲಿ ತಪ್ಪು ಕಾಣುವುದು ಸಂಪನ್ಮೂಲದಲ್ಲಿ ಅಲ್ಲ ಅಥವಾ ಸಂಪನ್ಮೂಲದ ವಿತರಣೆಯಲ್ಲೂ ಅಲ್ಲ, ಅದರ ಬಳಕೆಯಲ್ಲಿ. ನೀರು ಜೀವನದ ಅತ್ಯವಶ್ಯ ವಸ್ತು. ಅಷ್ಟೇ ಹೇರಳವಾಗಿ ಲಭ್ಯವಿರುವ ಒಂದು ನೈಸರ್ಗಿಕ ಮೂಲ. ಮಾನವ ತನ್ನ ಅಭ್ಯುದಯದ ಹಾದಿಯಲ್ಲಿ ಪುನರ್ ನವೀಕರಣಗೊಳ್ಳುವ ಅನೇಕ ಸಂಪನ್ಮೂಲಗಳನ್ನು ಕಂಡಿರಬಹುದು. ಆದರೆ ಜಲಸಂಪನ್ಮೂಲ ಉಳಿದೆಲ್ಲಾ ಸಂಪನ್ಮೂಲಗಳನ್ನೂ ಮೀರಿ ತನ್ನನ್ನು ತಾನು ನವೀಕರಿಸಿ ಕೊಳ್ಳುತ್ತಲೇ ಸಾಗುತ್ತದೆ. ಈ ನವೀಕರಣ ಪ್ರಕ್ರಿಯೆಗೆ ಬೇಕಾಗಿರುವುದು ಮಾನವ ಸಮಾಜದ ಸಹಕಾರ ಮತ್ತು ನಾಗರಿಕ ಪ್ರಜ್ಞೆ. ತಂತ್ರಜ್ಞಾನ ಯುಗದಲ್ಲಿರುವ ನಾವು ಔದ್ಯಮಿಕ ಯುಗದ ಕಾಲದಿಂದಲೇ ಬಳುವಳಿಯಾಗಿ ಪಡೆದಿರುವಂತಹ ಒಂದು ಧೋರಣೆ ಇಂದು ಇಂತಹ ಅದ್ಭುತ ನಿಸರ್ಗ ಕ್ರಿಯೆಯನ್ನು ಅವಸಾನದ ಹಂತಕ್ಕೆ ತಳ್ಳುತ್ತಿದೆ.

ತನ್ನ ಬದುಕಿಗೆ ಅತ್ಯವಶ್ಯವಾದ ಎಲ್ಲ ಪರಿಕರಗಳನ್ನೂ ಬಹಳ ಜಾಗರೂಕತೆಯಿಂದ ರಕ್ಷಿಸಿಕೊಳ್ಳಲು ಹವಣಿಸುವ ಆಧುನಿಕ ಮಾನವನಿಗೆ ನಿಸರ್ಗದತ್ತ ಸಂಪನ್ಮೂಲಗಳ ಬಗ್ಗೆ ಕಾಳಜಿಯೇ ಇಲ್ಲದಿರಲು ಕಾರಣವೇನು ? ಅಭಿವೃದ್ಧಿಯ ಹಪಾಹಪಿಯೇ ? ಪ್ರಗತಿಯ ಲಾಲಸೆಯೇ ? ಬಂಡವಾಳದ ಆಕರ್ಷಣೆಯೇ ? ಅಥವಾ ಐಷಾರಾಮಿ ಜೀವನದ ಕನಸೇ ? ನಮ್ಮ ನೆಲ, ನಮ್ಮ ಜಲ ಎಂದು ಬೊಬ್ಬಿರಿಯುವ ಪ್ರಭೃತಿಗಳು ಹೇರಳವಾಗಿದ್ದಾರೆ. ಈ ನೆಲ ಮತ್ತು ಜಲದ ನಡುವಿನ ಸೂಕ್ಷ್ಮ ಸಂಬಂಧಗಳ ತರಂಗಗಳನ್ನು ಗಮನಿಸಲು ಮಾತ್ರ ಆಧುನಿಕ ಮಾನವ ಸಿದ್ಧನಾಗಿಲ್ಲ. ಪ್ರಾಚೀನ ನಾಗರಿಕತೆಯ ಉಗಮ ಮತ್ತು ವಿಕಾಸವನ್ನು ಗಮನಿಸಿದಾಗ ಈ ಎರಡೂ ನಿಸರ್ಗದತ್ತ ಮೂಲಗಳ ಸಾಂಗತ್ಯ ಮತ್ತು ಪ್ರಸ್ತುತತೆಯನ್ನು ಅರಿಯುವುದು ಸುಲಭ. ಇದು ನಾಗರಿಕತೆಯನ್ನು ಬಲ್ಲ ಎಲ್ಲರಿಗೂ ತಿಳಿದಿರುವ ವಿಚಾರವೇ. ಆದರೆ ಈ ಸಂಪನ್ಮೂಲಗಳ ಸಂರಕ್ಷಣೆ ಮತ್ತು ಪೋಷಣೆಯ ವಿಚಾರ ಎದುರಾದಾಗ ಭಾವನಾತ್ಮಕವಾದ ಆಕ್ರೋಶ ಧುತ್ತೆಂದು ಎದುರಾಗುತ್ತದೆ. ವಾಸ್ತವ ನೆಲೆಗಟ್ಟಿನ ಗ್ರಹಿಕೆ ನೇಪಥ್ಯಕ್ಕೆ ಸರಿಯುತ್ತದೆ. ಏಕೆಂದರೆ, ಮಾನವ ಸಮಾಜ ಎದುರಿಸುತ್ತಿರುವ ಸಂಪನ್ಮೂಲಗಳ ಕೊರತೆಗೆ ನಾವೇ ಕಾರಣರಾಗಿದ್ದೇವೆ. ನಮ್ಮ ಸ್ವಾರ್ಥ ಜೀವನಶೈಲಿಯೂ ಕಾರಣವಾಗಿರುತ್ತದೆ.

ನಾಗರಿಕ ಮಾನವ ಸಮಾಜದ ಒಂದು ವೈಶಿಷ್ಟ್ಯವನ್ನು ಇಲ್ಲಿ ಗಮನಿಸಲೇಬೇಕು. ನಿಸರ್ಗ ಮನುಕುಲಕ್ಕೆ ಒದಗಿಸುವ ಯಾವುದೇ ಸಂಪನ್ಮೂಲಕ್ಕೆ ಭೌಗೋಳಿಕ ಅಥವಾ ಪ್ರಾದೇಶಿಕ ಇತಿಮಿತಿಗಳಿರುವುದಿಲ್ಲ. ಹಾಗೆಯೇ ನೈಸರ್ಗಿಕ ಕ್ರಿಯೆಗಳಿಗೆ ಮಾನವ ಸಮಾಜ ತಂತಾನೇ ಸೃಷ್ಟಿಸಿಕೊಂಡಿರುವ ಅಸ್ಮಿತೆಗಳ ಅರಿವು ಇರಲೂ ಸಾಧ್ಯವಿಲ್ಲ. ಹಾಗಾಗಿ ಒಂದು ಸಹಜ ಪ್ರಕ್ರಿಯೆಯಾಗಿ ನಿಸರ್ಗದ ಸಂಪನ್ಮೂಲಗಳು ಭೂಪದರದೊಳಗೆ, ಬೆಟ್ಟಗುಡ್ಡಗಳಲ್ಲಿ, ಅರಣ್ಯಗಳ ರೂಪದಲ್ಲಿ, ಜಲಸಂಪನ್ಮೂಲಗಳಲ್ಲಿ ಲಭ್ಯವಾಗುತ್ತವೆ. ಈ ನಿಸರ್ಗದ ಸೃಷ್ಟಿಗೆ ಮನುಕುಲ ತನ್ನದೇ ಆದ ಪರಿಭಾಷೆಯಲ್ಲಿ ನಾಮಕರಣ ಮಾಡುತ್ತದೆ. ಈ ನಾಮಕರಣದ ಹಿಂದೆ ಧಾರ್ಮಿಕ, ಪ್ರಾದೇಶಿಕ, ಭೌಗೋಳಿಕ ಮತ್ತು ಸಾಂಸ್ಕೃತಿಕ ಭಾವನೆಗಳು ದಟ್ಟವಾಗಿರುತ್ತವೆ. ಹಾಗೆಯೇ ಸ್ವಾರ್ಥದ ಛಾಯೆಯೂ ದಟ್ಟವಾಗಿರುತ್ತದೆ. ಕಾವೇರಿ ಕನ್ನಡತಿಯಾಗುತ್ತಾಳೆ, ಮಾಂಡೋವಿ ಗೋವಾದ ಮಾತೆಯಾಗುತ್ತಾಳೆ, ಕೃಷ್ಣೆ ಆಂಧ್ರದ ಅಸ್ಮಿತೆಯಾಗುತ್ತಾಳೆ, ನರ್ಮದಾ ಗುಜರಾತಿ ಘನತೆಯ ಸಂಕೇತವಾಗುತ್ತಾಳೆ. ಯಾರ ಹಂಗೂ ಇಲ್ಲದೆ, ಯಾರ ನಿಯಂತ್ರಣಕ್ಕೂ ಒಳಪಡದೆ ತಂತಾನೆ ಆವಿರ್ಭವಿಸಿ ತನ್ನಿಚ್ಛೆಯಂತೆ ಹರಿಯುವ ಜಲಸಂಪನ್ಮೂಲಗಳಿಗೆ ಈ ರೀತಿಯ ಅಸ್ಮಿತೆಯ ಚೌಕಟ್ಟು ನಿರ್ಮಿಸಿ 'ನಮ್ಮದು' ಎಂಬ ಆಧಿಪತ್ಯದ ಪರಿಕಲ್ಪನೆಯನ್ನು ಹುಟ್ಟುಹಾಕುವ ಮಾನವ ಸಮಾಜಕ್ಕೆ ಏನು ಹೇಳಲು ಸಾಧ್ಯ ?

ನದಿಗಳ ಬಗ್ಗೆ ತನ್ನದೇ ಆದ ಭಾವುಕ ಚೌಕಟ್ಟುಗಳನ್ನು ನಿರ್ಮಿಸಿಕೊಂಡಿರುವ ಮಾನವ ಸಮಾಜ ನಿಸರ್ಗದ ಒಡಲಲ್ಲಿರುವ ಅಗೋಚರ ಮೌಲ್ಯಗಳನ್ನೇ ಅಳವಡಿಸಿಕೊಂಡಿಲ್ಲ. ಅಣೆಕಟ್ಟುಗಳನ್ನು ನಿರ್ಮಿಸುವ ಮೂಲಕ ಸಮಾಜದ ಒಂದು ವರ್ಗದವರಿಗೆ ನೆರವಾಗುವ ಆಧುನಿಕ ಆಡಳಿತ ವ್ಯವಸ್ಥೆ ಇದೇ ಅಣೆಕಟ್ಟುಗಳ ನಿರ್ಮಾಣದಿಂದ ವಿನಾಶದ ಅಂಚಿಗೆ ತಳ್ಳಲ್ಪಡುವ ಸಹಸ್ರಾರು ಜನರ ಆಕ್ರಂದನಕ್ಕೆ ಕಿವುಡಾಗಿರುತ್ತದೆ. ಅಣೆಕಟ್ಟುಗಳ ಬದಿಯಲ್ಲೇ ಇರುವ ಗ್ರಾಮಗಳಲ್ಲಿ ಕುಡಿಯುವ ನೀರಿಗೂ ತತ್ವಾರ ಇರುವ ದೃಷ್ಟಾಂತಗಳು ನಮ್ಮಲ್ಲಿ ಹೇರಳವಾಗಿವೆ. ಆದರೆ ಈ ಜನರ ಪಡಿಪಾಟಲುಗಳು ಆಳ್ವಿಕರ ದೃಷ್ಟಿಯಲ್ಲಿ ಅಭಿವೃದ್ಧಿಯ ಮಾರ್ಗದಲ್ಲಿ ಅನಿವಾರ್ಯವಾದ ತ್ಯಾಗವಾಗುತ್ತದೆ. ಪ್ರಗತಿಯ ಮಾರ್ಗದಲ್ಲಿ ನಳನಳಿಸುವ ಉದ್ಯಾನಗಳ ಅಡಿಯಲ್ಲೇ ಸ್ಮಶಾನ ಮೌನ ಆವರಿಸುವುದು ಆಧುನಿಕ ಬಂಡವಾಳ ವ್ಯವಸ್ಥೆಯ ವೈಶಿಷ್ಟ್ಯ. ನದಿ ನೀರು ಭಾವನಾತ್ಮಕ ಸನ್ನಿವೇಶದಲ್ಲಿ ರುದ್ರತಾಂಡವದ ಭೂಮಿಕೆಯಾಗುತ್ತದೆ. ಆದರೆ ಅಂತರ್ಜಲವೇ ಬತ್ತಿಹೋಗಿ ನೀರಿಗಾಗಿ ಹಾತೊರೆಯುವ ಒಣ ಪ್ರದೇಶಗಳ ಜನತೆಯ ಅವಸ್ಥೆ ಈ ತಾಂಡವ ನೃತ್ಯದ ಕಂಗಳಿಗೆ ಗೋಚರಿಸುವುದೇ ಇಲ್ಲ. ಕೋಲಾರದ ಜನತೆ ಮಹಾದಾಯಿಗಾಗಿ ಹೋರಾಡುವುದನ್ನು ನೋಡಿದರೆ ಹೆಮ್ಮೆಯಾಗುತ್ತದೆ. ದಶಕಗಳಿಂದ ತಾವು ಎದುರಿಸುತ್ತಿರುವ ಬತ್ತಿದ ಅಂತರ್ಜಲ ಮತ್ತು ನೀರಿನ ಸಮಸ್ಯೆಗಳನ್ನು ಆಲಿಸಲೂ ಸಿದ್ಧವಿಲ್ಲದ ಆಳುವ ವರ್ಗಗಳನ್ನು ಸಹಿಸಿಕೊಂಡೇ ಈ ಹೋರಾಟದಲ್ಲಿ ತೊಡಗುತ್ತಾರೆ.

ಕಾವೇರಿ ಕರ್ನಾಟಕದಲ್ಲಿ ಹುಟ್ಟಿ ತಮಿಳುನಾಡಿನಲ್ಲಿ ಹೆಚ್ಚಾಗಿ ಹರಿಯುತ್ತಾಳೆ. ಮಾಂಡೋವಿ ಅಥವಾ ಮಹಾದಾಯಿ ಸಹ ಕರ್ನಾಟಕದಲ್ಲಿಯೇ ಹುಟ್ಟಿ ಗೋವಾದಲ್ಲಿ ಹೆಚ್ಚಾಗಿ ಹರಿಯುತ್ತಾಳೆ. ಇದು ನದಿಯ ತಪ್ಪಲ್ಲ. ಅಥವಾ ಜಲಸಂಪನ್ಮೂಲದ ಆಯ್ಕೆಯೂ ಅಲ್ಲ. ಪಶ್ಚಿಮ ಘಟ್ಟಗಳಿಂದಾಚೆಗೆ ಮತ್ತೊಂದು ರಾಜ್ಯ ಸ್ಥಾಪನೆಯಾಗಿದ್ದರೆ ಅದು ನಮ್ಮ ಆಧುನಿಕ ಸಮಾಜದ ಆಡಳಿತ ವ್ಯವಸ್ಥೆಯ ಒಂದು ಭೌಗೋಳಿಕ ಸ್ವರೂಪವಷ್ಟೆ. ಆದರೆ ಕಾವೇರಿಗೆ, ಮಹಾದಾಯಿಗೆ ಭೌಗೋಳಿಕ ಅಸ್ಮಿತೆಗಳ ಪರಿವೆ ಇರಲು ಸಾಧ್ಯವೇ ? ಈ ಭೌಗೋಳಿಕ ವಿಭಜನೆ ಮಾನವ ಸಮಾಜ ತನ್ನ ಸ್ವಾರ್ಥಕ್ಕಾಗಿ ಬಳಸಿಕೊಂಡಿರುವ ಮಾರ್ಗ. ಆದರೆ ನದಿ ನೀರು ತನ್ನ ಮಾರ್ಗದಲ್ಲೇ ಹರಿಯುತ್ತದೆ. ಇಂತಿಪ್ಪ ಸನ್ನಿವೇಶದಲ್ಲಿ "ಕಾವೇರಿ ನಮ್ಮದು. ಪ್ರಾಣ ಕೊಟ್ಟೇವು, ಕಾವೇರಿ ಕೊಡೆವು" ಎಂಬ ಕನ್ನಡಿಗರ ಘೋಷಣೆಯಾಗಲೀ, "ಮಾಂಡೋವಿ ನಮ್ಮದು. ಕರ್ನಾಟಕಕ್ಕೆ ಕೊಡೆವು" ಎಂಬ ಗೋವಾ ಪ್ರಜೆಗಳ ಘೋಷಣೆಯಾಗಲಿ ಅರ್ಥಹೀನ ಎನಿಸುತ್ತದೆ. ತುಂಬಿ ಹರಿಯುವ ನದಿಗೆ ಯಾರ ಒಡೆತನವೂ ಬೇಕಿಲ್ಲ, ಯಜಮಾನಿಕೆಯೂ ಬೇಕಿಲ್ಲ, ಆಧಿಪತ್ಯವೂ ಬೇಕಿಲ್ಲ. ಹಾಗಾದಲ್ಲಿ ಈ ನೀರನ್ನು ಹಂಚಿಕೊಳ್ಳಲು ಇರುವ ಸಮಸ್ಯೆಯಾದರೂ ಏನು ?

ತಮಿಳುನಾಡಿನ ಕೆಲವು ಪ್ರದೇಶಗಳಲ್ಲಿ ಕುಡಿಯುವ ನೀರಿಗೆ ಹಾಹಾಕಾರ ಇದ್ದರೆ ಅದಕ್ಕೆ ಪರಿಹಾರ ಕಾವೇರಿ ನದಿ ನೀರಿನಲ್ಲಿ ಕಾಣುತ್ತದೆ. ಹಾಗೆಯೇ ಉತ್ತರ ಕರ್ನಾಟಕದ ಕೆಲವು ಪ್ರದೇಶಗಳಲ್ಲಿ ಕುಡಿಯುವ ನೀರಿನ ಸಮಸ್ಯೆಗೆ ಮಹಾದಾಯಿ ಪರಿಹಾರ ಒದಗಿಸುತ್ತದೆ. ಸಮಸ್ಯೆ ಇರುವುದು ನದಿಗಳ ಕುರಿತಲ್ಲ. ಈ ನದಿಗಳ ಮೇಲೆ ಒಡೆತನ, ಆಧಿಪತ್ಯ ಸಾಧಿಸುವ ಸ್ವಾರ್ಥ ಧೋರಣೆಯಲ್ಲಿ. ಈ ಧೋರಣೆಯಿಂದ ಹೊರಬಂದರೆ ಮಾತ್ರ ನದಿ ನೀರಿನ ವ್ಯಾಜ್ಯ ಪರಿಹಾರವಾಗಲು ಸಾಧ್ಯ. ನ್ಯಾಯಾಧೀಕರಣ ಅಥವಾ ನ್ಯಾಯಾಲಯಗಳು ಈ ವಿವಾದಗಳನ್ನು ಪರಿಹರಿಸಲು ದಶಕಗಳೇ ಬೇಕಾಗುತ್ತದೆ. ಬದಲಾಗಿ ಭ್ರಾತೃತ್ವ, ಸೌಹಾರ್ದತೆ ಮತ್ತು ಪರಸ್ಪರ ವಿಶ್ವಾಸ ಕ್ಷಣಮಾತ್ರದಲ್ಲಿ ಪರಿಹಾರ ನೀಡುತ್ತವೆ. ನದಿಗಳಲ್ಲಿ ಹರಿಯುವ ನೀರು ಎಷ್ಟೇ ಪವಿತ್ರವಾಗಿದ್ದರೂ ಈ ಪಾವಿತ್ರ್ಯತೆಯಲ್ಲಿ ಮಿಂದೆದ್ದ ಮಾನವ ಸಮಾಜದಲ್ಲಿ ಪರಿಶುದ್ಧ ಮನೋಭಾವ ಇಲ್ಲದಿದ್ದರೆ ಸಮಸ್ಯೆ ಬಗೆಹರಿಯುವುದಿಲ್ಲ. ನದಿಯ ನೀರಿಗಾಗಿ ನೆತ್ತರು ಹರಿಸುವ ಬದಲು ನದಿಯ ನೀರನ್ನೇ ಸಮರ್ಪಕವಾಗಿ ಹರಿಸಿದರೆ ಮನುಕುಲವೂ ಉಳಿಯುತ್ತದೆ, ನದಿಯೂ ಉಳಿಯುತ್ತದೆ.

***ಕೊನೆಯದಾಗಿ ಒಂದು ಮಾತು :*** *ಕಾವೇರಿ, ಕೃಷ್ಣೆ, ತುಂಗೆ, ನೇತ್ರಾವತಿ, ಮಹಾದಾಯಿ– ಹೀಗೆ ನದಿಗಳಿಗೆ ಪಾವಿತ್ರ್ಯತೆಯ ಸ್ಪರ್ಶ ನೀಡಿ ವೈಭವೀಕರಿಸುವ ಆಧುನಿಕ ಪ್ರಜ್ಞಾವಂತ ಮಾನವ ಸಮಾಜ ತನ್ನ ಬದಿಯಲ್ಲೇ ಬರಿದಾಗುತ್ತಿರುವ ಜಲಸಂಪನ್ಮೂಲಗಳ ಅವಸಾನವನ್ನು ಏಕೆ ಸಹಿಸಿಕೊಳ್ಳುತ್ತಿದೆ ? ಹೇಗೆ ಸಹಿಸಿಕೊಳ್ಳಲು ಸಾಧ್ಯ? ಬತ್ತಿದ ಕೆರೆಗಳು ಕಾಂಕ್ರೀಟ್ ಕಾಡುಗಳಾಗುವುದನ್ನು ಅಭಿವೃದ್ಧಿಯ ಸಂಕೇತ ಎಂದು ಪರಿಭಾವಿಸುವ ಪ್ರಜ್ಞಾವಂತ ಸಮಾಜವನ್ನು ಯಾವ ಕಾವೇರಿ ಮಾತೆಯೂ ಕಾಪಾಡುವುದಿಲ್ಲ.*

**ನಾ. ದಿವಾಕರ**
ನಂ. ೩೮, ಬ್ಲಾಕ್ ೨೨, 'ಮಧುವನ', ಶ್ರೀರಾಂಪುರ ೨ನೇ ಹಂತ, ಮೈಸೂರು – ೫೭೦ ೦೨೩











# ಗ್ರಾಮೀಣ ಬಾಲ ಪ್ರತಿಭೆ ಗಾಯತ್ರಿ

ರಾಯಚೂರು ಜಿಲ್ಲೆಯ ಮಾನ್ವಿ ತಾಲೂಕಿನ ಕುರಕುಂದ ಎಂಬ ಗ್ರಾಮದ ಸರಕಾರಿ ಶಾಲೆಯಲ್ಲಿ 9ನೇ ತರಗತಿಯಲ್ಲಿ ಓದುತ್ತಿರುವ ಗಾಯತ್ರಿ ಚಿತ್ರಕಲಾಲೋಕದಲ್ಲಿ ಚಿಗುರುತ್ತಿರುವ ಪ್ರತಿಭಾವಂತೆ. ಗಾಯತ್ರಿ ತನ್ನ ಸುತ್ತಲ ಪರಿಸರದ ದೃಶ್ಯ, ಸಂಗತಿಗಳನ್ನೇ ವಸ್ತುವನ್ನಾಗಿಸಿಕೊಂಡು ವಾಟರ್ ಕಲರ್ ಮತ್ತು ಕ್ರೆಯಾನ್ ಮಾಧ್ಯಮದ ಮೂಲಕ ಚಿತ್ರ ಬರೆಯುತ್ತಾಳೆ. ಗ್ರಾಮದ ಬಡಿಗತನದ ಕೆಲಸ ಮಾಡುವ ಷಣ್ಮುಖಪ್ಪ ಹಾಗೂ ಪಾರ್ವತಿ ಅವರ ಮಗಳು ಗಾಯತ್ರಿ. ಶಾಲೆಯಲ್ಲಿ, ಶಿಕ್ಷಣ ಇಲಾಖೆಯ ಕಾರ್ಯಕ್ರಮಗಳಲ್ಲಿ ತನ್ನ ಚಿತ್ರಗಳ ಪ್ರದರ್ಶನ ಮಾಡಿದ್ದಾಳೆ. ಪ್ರಜಾವಾಣಿ 2016ರ ದೀಪಾವಳಿ ವಿಶೇಷಾಂಕದ ಮಕ್ಕಳ ಚಿತ್ರಕ್ಕೆ ಕೊಡುವ ಬಹುಮಾನವನ್ನು ತನ್ನ 'ಮುಷ್ಕರ' ಎಂಬ ವಿಷಯದ ಚಿತ್ರಕ್ಕೆ ಪಡೆದಿದ್ದಾಳೆ. ಮಕ್ಕಳ ದಿನಾಚರಣೆಯ ಸಂದರ್ಭದಲ್ಲಿ ಕುಮಾರಿ ಗಾಯತ್ರಿಯ ಚಿತ್ರಗಳನ್ನು ಪ್ರಕಟಿಸುವ ಮೂಲಕ 'ಹೊಸತು' ಎಲ್ಲ ಮಕ್ಕಳಿಗೆ ಶುಭಾಶಯ ಕೋರುತ್ತದೆ.



– ಚಿತ್ರಲೇಖ



Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bengaluru- 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bengaluru - 560 001, Editor : Dr. Siddanagouda Patil

**HOSATHU** Kannada Monthly / NOVEMBER 2016 / ₹ 20 (No. of Pages 64)
RNI Regd. KARKAN / 1999 / 614. Karnataka Regd. KARN/BGE/07/2015-17
Licenced to post without prepayment. WPP No.14.
Posted at BENGALURU PSO, MYSORE ROAD, BENGALURU-560 026 on the 28th of every month.